# ಮಾನವೀಯ ಮೌಲ್ಯಗಳು

## ಲಕ್ಷಣ ಹಾಗೂ ವಿವರಣೆ

## ಸಂಪುಟ - ೧

ಮೂಲ : ಸತ್ಯವ್ರತ ಶಾಸ್ತ್ರೀ
ಕನ್ನಡ ಅನುವಾದ : ಎಸ್.ರಂಗನಾಥ್

# ಮಾನವೀಯ ಮೌಲ್ಯಗಳು

ಲಕ್ಷಣ ಹಾಗೂ ವಿವರಣೆ

ಸಂಪುಟ – 1

ಮೂಲ :– **ಸತ್ಯವ್ರತ ಶಾಸ್ತ್ರೀ**

ಕನ್ನಡ ಅನುವಾದ

ಎಸ್.ರಂಗನಾಥ್

ಪ್ರಕಾಶಕರು

**ಭಾರತೀಯ ವಿದ್ಯಾ ಮಂದಿರ**

ಕೋಲ್‌ಕಾಟ

ಪ್ರಕಾಶಕರು : ಭಾರತೀಯ ವಿದ್ಯಾ ಮಂದಿರ
12/1, ನೆಲ್ಲಿಸೆನ್ ಗುಪ್ತ ಸರಣಿ
ಕೊಲ್ಕತ್ತ – 700 087

ಸಹಯೋಗ : ಸಿಂಪ್ಲೆಕ್ಸ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿಮಿಟೆಡ್
ಸಿಂಪ್ಲೆಕ್ಸ್ ಹೌಸ್,
27, ಶೇಕ್ಸ್‌ಪಿಯರ್ ಸರಣಿ
ಕೊಲ್ಕತ್ತ – 700 017

ಲೇಖಕರು : ಸತ್ಯವ್ರತ ಶಾಸ್ತ್ರೀ
ಸಂಸ್ಕೃತದಲ್ಲಿ ಪ್ರಥಮ ಜ್ಞಾನಪೀಠ ಪುರಸ್ಕೃತರು

ಅನುವಾದಕರು : ಎಸ್. ರಂಗನಾಥ್
ನಿದೇಶಕರು, ಆರ್.ವಿ ಸಂಸ್ಕೃತಾಧ್ಯಯನ ಸಂಸ್ಥೆ

ವಿತರಕರು : ಐ.ಬಿ.ಹೆಚ್. ಪ್ರಕಾಶನ
ನಂ.77, ರಾಮ್‌ರಾವ್ ಮೈದಾನದ ಹತ್ತಿರ,
2ನೇ ಮುಖ್ಯರಸ್ತೆ, ರಾಮ್‌ರಾವ್ ಲೇಔಟ್,
ಬನಶಂಕರಿ 3ನೇ ಹಂತ, ಬೆಂಗಳೂರು – 560 085

ಮೊದಲ ಆವೃತ್ತಿ : 2014

ಐಎಸ್‌ಬಿಎನ್ ನಂ. : 978-81-89302-47-4

ಬೆಲೆ : 200/-

ಮುದ್ರಕರು : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್
3/3, 1ನೇ ಮುಖ್ಯರಸ್ತೆ, ಹೊಸ ತರಗುಪೇಟೆ
ಬೆಂಗಳೂರು – 560 002.
ದೂರವಾಣಿ : 080 2670 8186 / 2670 9026
Email : omkaroffset@gmail.com
Website : www.omkaroffset.com

# ಮುನ್ನುಡಿ

## (ಕನ್ನಡಾನುವಾದ)

ನಾನು "ಮಾನವೀಯ ಮೌಲ್ಯಗಳು ಲಕ್ಷಣ ಹಾಗೂ ವಿವರಣೆ" ಎಂಬ ಪುಸ್ತಕವನ್ನು ಬರೆಯುತ್ತಿದ್ದಾಗ ಜನರು ಇಷ್ಟು ಉತ್ಸಾಹದಿಂದ ಅದನ್ನು ಬರಮಾಡಿಕೊಳ್ಳುವರೆಂದು ನನಗೆ ಅನಿಸಿರಲಿಲ್ಲ. ಹಿಂದೆ ಪ್ರಕಾಶಕರು 1100 ಪ್ರತಿಗಳನ್ನು ತಮ್ಮ ಗ್ರಂಥಕ್ಕಿಟ್ಟು ಮಾಡಿಸುತ್ತಿದ್ದರು. ಕಾಲ ಬದಲಾಯಿತು.

ಪ್ರತಿಗಳ ಸಂಖ್ಯೆಕುಗ್ಗಿತು. ಅದು ಐನೂರಕ್ಕೆ ಇಳಿಯಿತು. ಕಾಲಕಳೆದಂತೆಲ್ಲಾ ಅದು ಮತ್ತೂ ಕ್ಷೀಣಿಸಿತು ಮತ್ತು ಸಂಖ್ಯೆ ಮುನ್ನೂರಕ್ಕಿಳಿಯಿತು. ಗಹನವಾದ ವಿಷಯಗಳನ್ನೊಳಗೊಂಡ ಪುಸ್ತಕಗಳ ಸ್ಥಿತಿ ಈ ಮಟ್ಟದಲ್ಲಿದೆ. ಆದರೆ, ಇದು ಮಕ್ಕಳ ಕಥೆ ಕಾದಂಬರಿಗಳಿಗೆ ವಿರುದ್ಧವಾಗಿದೆ. ಒಂದು ವರ್ಷದೊಳಗೇ ಮಾರುಕಟ್ಟೆಯಲ್ಲಿ ಮಾನವೀಯ ಮೌಲ್ಯಗಳ ಸಾವಿರದ ನೂರು ಪ್ರತಿಗಳು ಮಾರಾಟವಾಗಿರುವುದು ನಿಜಕ್ಕೂ ಈ ಗ್ರಂಥದ ಉಪಯುಕ್ತತೆ ಹಾಗೂ ಓದುಗರ ಅಭಿರುಚಿಗೆ ನಿದರ್ಶನವಾಗಿದೆ. ಪ್ರಸಕ್ತ ಸಮಾಜದಲ್ಲಿ ಮಾನವೀಯ ಮೌಲ್ಯಗಳ ಧಕ್ಕೆಯುಂಟಾಗುತ್ತಿರುವುದು ಎಲ್ಲಾ ಸರಿಯಾದ ಮನಸ್ಸುಳ್ಳವರಿಗೂ ಆಘಾತವನ್ನುಂಟು ಮಾಡುತ್ತಿದೆ. ಅವರು ಪ್ರಸಕ್ತ ಸಮಾಜದಲ್ಲಿ ಹೊಂದಾಣಿಕೆಯಾಗಲು ಹವಣಿಸುತ್ತಿದ್ದಾರೆ.

ಗ್ರಂಥವು ಆಂಗ್ಲ ಭಾಷೆಯಲ್ಲಿರುವುದರಿಂದ ಸಮಾಜದ ಉನ್ನತ ಶ್ರೇಣಿಯಲ್ಲಿರುವವರಿಗೆ ಮಾತ್ರ ತಲುಪುವಂತಿತ್ತು. ಆದರೆ, ಬಹಳ ಜನರು ಆಂಗ್ಲ ಅನಭಿಜ್ಞರಾಗಿದ್ದರಿಂದ ಅವರಿಗೆ ಈ ಗ್ರಂಥ ತಲುಪುತ್ತಿರಲಿಲ್ಲ. ಆದ್ದರಿಂದ, ಭಾರತದ ವಿಭಿನ್ನ ಪ್ರಾಂತೀಯ ಭಾಷೆಗಳಿಗೆ ಅದು ಅನುವಾದವಾಗಬೇಕೆಂದು ತೀರ್ಮಾನಿಸಲಾಯಿತು.

ದೂರದರ್ಶಿಗಳಾದ ಡಾ. ಬಿ.ಡಿ. ಮುಂದ್ರ ಅವರಿಗೆ ಈ ಗ್ರಂಥವು ವಿಭಿನ್ನ ಪ್ರಾಂತೀಯ ಭಾಷೆಗಳಿಗೆ ಅನುವಾದಗೊಳ್ಳಬೇಕಾಗಿದೆಯೆಂದು ಇದಂ ಪ್ರಥಮವಾಗಿ ಅನಿಸಿತು. ಕಾಮಗಾರೀ ಕೆಲಸಕ್ಕೆ ಅಧ್ಯಕ್ಷರಾಗಿರುವ ಅವರ ಅಡಿಯಲ್ಲಿ ಅನೇಕ ಸಾವಿರ ಜನ ಕೆಲಸ ಮಾಡುತ್ತಾರೆ. ಅವರು ರಸ್ತೆ, ಸೇತುವೆಗಳನ್ನು ಕಟ್ಟುತ್ತಾರೆ. ಅವರಲ್ಲಿ ಬಹುತೇಕ ಮಂದಿಗೆ ಆಂಗ್ಲಭಾಷೆಯ ಅರಿವಿಲ್ಲ. ಅವರೂ ಸಹ ಮಾನವೀಯ ಮೌಲ್ಯಗಳನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡರೆ ಕಠಿಣಶ್ರಮ, ನಿಯಮಬದ್ಧತೆ, ವಿಧೇಯತೆ, ಪ್ರಾಮಾಣಿಕತೆಯಿಂದ ಕೂಡಿದವರಾಗಿ ತಮ್ಮ ದೈಹಿಕಶಕ್ತಿ ಹಾಗೂ ಮಾನಸಿಕ ಶ್ರೇಷ್ಠತೆಯಿಂದ ಹೆಚ್ಚಿನ ಉತ್ಪಾದನೆಗೆ ಕಾರಣೀಭೂತರಾಗಿ ಜಿ.ಡಿ.ಪಿ. ಹೆಚ್ಚಳಕ್ಕೆ ಕಾರಣಕರ್ತರಾಗುತ್ತಾರೆ. ಈ ಕೂಲಿಯಾಳುಗಳಿಗೆ ತಮ್ಮ ಭಾಷೆ ಮಾತ್ರವೇ ಗೊತ್ತಿರುತ್ತದೆ. ಆದ್ದರಿಂದ ಅವರಿಗೆ ಮುಟ್ಟುವಂತೆ ಈ ಗ್ರಂಥದ ವಿಭಿನ್ನ ಪ್ರಾಂತೀಯ ಭಾಷೆಗಳಿಗೆ

ಅನುವಾದ ಕಾರ್ಯವಾಗಬೇಕು. ಇದೇ ಮುಂದ್ರ ಅವರ ಉದ್ದೇಶವಾಗಿತ್ತು. ಈ ಉದ್ದೇಶವೇ ಗ್ರಂಥದ ಪ್ರಾಂತೀಯ ಭಾಷೆಗಳಿಗೆ ಅನುವಾದವಾಗಲು ಪ್ರೇರಣೆಯಾಯಿತು. ಭಾಷಾಂತರಕಾರರ ಹೆಸರನ್ನು ಅವರು ನನಗೆ ಕೇಳಿದರು. ಕನ್ನಡ ಭಾಷಾಂತರದ ಪ್ರಸ್ತಾಪ ಬಂದಾಗ ಕೂಡಲೇ ನನಗೆ ನೆನಪಾದ ಹೆಸರೆಂದರೆ ಡಾ. ಎಸ್. ರಂಗನಾಥ್ ಅವರದು. ಹಿಂದೆ ಅವರೇ ನನ್ನ ಬೃಹತ್ತಾದ 25 ಸರ್ಗಗಳಿಂದ ಕೂಡಿದ ಮಹಾಕಾವ್ಯ ಶ್ರೀರಾಮಕೀರ್ತಿ ಮಹಾಕಾವ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದರು. ಅವರಿಗೆ ಕನ್ನಡ, ಸಂಸ್ಕೃತ, ಆಂಗ್ಲ ಎಂಬ ಮೂರು ಭಾಷೆಗಳಲ್ಲೂ ಪ್ರಭುತ್ವವಿದ್ದು ಮಧ್ಯಕಾಲದ ಕವಿ ಭುಜಂಗನಂತಿರುವರು. ಅವರನ್ನು ಸಂಪರ್ಕಿಸಿದೊಡನೆಯೇ ಅದಕ್ಕೆ ಸಮ್ಮತಿಸಿ ಅನುವಾದ ಕಾರ್ಯದಲ್ಲಿ ಪ್ರವೃತ್ತರಾಗಿ ದಾಖಲಾತಿ ಸಮಯದಲ್ಲೇ ಸಮಾಪ್ತಿಗೊಳಿಸಿದರು. ಅದನ್ನು ಗಣಕೀಕರಿಸಿ ಮುದ್ರಣಾಲಯಕ್ಕೂ ಕಳುಹಿಸಿದರು. ಈಗ ಆ ಕೃತಿ ಓದುಗರೇ, ನಿಮ್ಮ ಕೈಯಲ್ಲಿದೆ. ಅದನ್ನು ಓದಿ ಸಂತುಷ್ಟರಾಗಿರಿ. ನಿಮ್ಮದೇ ಆದ ಭಾಷೆಯಲ್ಲಿ ಅದನ್ನು ಕಲಿಯಿರಿ. ಈ ಕೃತಿಯಲ್ಲಿ ಮಾನವೀಯ ಮೌಲ್ಯಗಳಿಗೆ ಸಂಬಂಧಿಸಿದ ಶೀರ್ಷಿಕೆಗಳ ಲಕ್ಷಣಗಳನ್ನು ನೂರಾರು ಪಾರಂಪರಿಕ ಗ್ರಂಥಗಳಿಂದ ಆಯ್ದು, ಉದಾಹರಣೆಗಳೊಂದಿಗೆ ಅದನ್ನು ಪುಷ್ಟೀಕರಿಸಿ, ಹಿಂದಿನ ಹಾಗೂ ಇಂದಿನ ಘಟನೆಗಳೊಂದಿಗೆ ಸಮರ್ಥಿಸಲಾಗಿದೆ. ಅವು ಖಂಡಿತವಾಗಿಯೂ ಸಹ ನಿಮ್ಮ ಜೀವನವನ್ನು ಉದಾತ್ತೀಕರಿಸುತ್ತದೆ. ಅದರಿಂದ ಅದು ನಿಮಗೆ ಹೆಚ್ಚಿನದಾದ ಸಂತಸ, ತೃಪ್ತಿ ಹಾಗೂ ಆನಂದವನ್ನುಂಟುಮಾಡುತ್ತದೆ.

ಸತ್ಯವ್ರತ ಶಾಸ್ತ್ರೀ

ನವದೆಹಲಿ
19.7.2014

# FOREWORD

When I was working on the book Human Values - Definitions and Interpretations, hardly could I imagine that it would be received so well by the people. There was a time when the publishers would bring out an edition of 1100 copies of a book. Time changed.

Number of copies dwindled. It came down to 500. It further got scaled down with the passage of time. It has now settled at the figure 300. This is the situation about books of serious nature. It may be different with comics and novels. The very fact that 1100 copies of the book on Human Values could be off the shelves in less than a year is as much a tribute to the usefulness of the book as to the interest of the readers in the subject. All right thinking people are alarmed at the visible erosion of human values in present-day society. They are eager to recapture them and make them relevant once again to social ethos.

The book is in English which means that it can be accessed only by the English- knowing upper crust of society. The vast numbers of people not knowing it cannot go through it. It was therefore decided that translations of it in different regional languages of India is a desideratum.

The idea of putting the work in regional languages sprouted first in the mind of Dr. B. D. Mundhra, the great visionary. The construction magnate[1] that he is, he has couple of thousands of workers working under him. They build roads, bridges, culverts. A vast majority of them are not conversant with English. They also need to inculcate

---

[1]He is the Chairman of Simplex Infrastructures Ltd. and Member of the Construction Industry Development Council.

human values to develop the qualities of hard work, discipline, perseverance, obedience, honesty and so on to put their energy and skill to optimum use that could in turn lead to better productivity to add to national G.D.P. What these workers know at best is their own language/s. The book on human values has got to be made available to them therefore in their languages. That was the motivation for him to think of arranging for the translation of the book in regional languages. While thinking of the translators he enquired of me of their names. When the question of Kannada came, my mind straight went to Dr. S. Ranganath. It is he who had translated my bulky Sanskrit Mah"ak"avya, ®Sr+/r""amakr+irtimah""ak"avyam, in Sanskrit in twenty-five cantos into Kannada. He has command over three languages, Kannada, Sanskrit and English and can easily call himself, as did a poet of the medieval period bh"a]s"atrayav"aravil"asin+ibhuja<nga. The moment he was approached; he accepted the proposal and started working on the translation. He completed it in record time, got it keyed in the computer and sent it to the Press for formatting. The work is dear readers, in your hands now. Enjoy it. Learn from it in your own language definitions of the words for human values so assiduously culled from hundreds of ancient works properly supported by examples and illustrations from past and present. They will certainly improve your quality of life bringing in their train more satisfaction, more contentment and more joy.

**Satya Vrat Shastri**

New Delhi
19.7.2014

## ಪ್ರಕಾಶಕರ ನುಡಿ – ಕನ್ನಡಾನುವಾದ

ಭಾರತೀಯ ಮೌಲ್ಯಗಳು ತಮ್ಮ ಅಸ್ತಿತ್ವಕ್ಕಾಗಿ ಭಯಂಕರವಾದ ಬಿರುಗಾಳಿಯನ್ನು ಎದುರಿಸಬೇಕಾಗುತ್ತದೆ. ಚಾರಿತ್ರಿಕವಾಗಿ ಮೌಲ್ಯಗಳಾದ ಪರೋಪಕಾರ, ಅಹಿಂಸೆ, ಕದಿಯದಿರುವಿಕೆ ಮುಂತಾದವು ಪ್ರಾಚೀನ ಭಾರತೀಯ ಸಮಾಜದ ತಳಹದಿಯಾಗಿದೆ. ಈಗ ನಾವು ಅನಿಶ್ಚಿತ ಸಮಾಜದಲ್ಲಿದ್ದೇವೆ. ಕೌಟುಂಬಿಕ ಸಂಬಂಧಗಳು ಪರಸ್ಪರ ಸ್ನೇಹ ಮುಂತಾದವು ಆರ್ಥಿಕತೆ, ಜನರ ರೀತಿನೀತಿಗಳು, ಮಹಿಳೆಯರ ಹಾಗೂ ಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯ ಘಟನೆಗಳು ಪ್ರಸಕ್ತ ಸಮಾಜದಲ್ಲಿ ವಾಸ್ತವವಾಗಿದೆ. ನಮ್ಮ ಕಷ್ಟಕ್ಕೀಡಾಗಿರುವ ಬುದ್ಧಿಗೆ ಎಲ್ಲಿಂದ ತಡೆಯುಂಟಾಗಬಹುದು? ಇಂದಿನ ಮೌಲ್ಯಗಳಿಂದ ಶಾಂತಿ ನೆಮ್ಮದಿಗಳು ಸಾಧ್ಯವೇ? ಪ್ರಸಕ್ತ ಸಮಾಜದಲ್ಲಿ ಮಾನವೀಯ ಮೌಲ್ಯಗಳು ಅತ್ಯಂತ ಮಹತ್ವವುಳ್ಳದ್ದಾಗಿದ್ದು ಫೇಸ್‌ಬುಕ್ ಮತ್ತು ಟ್ವಿಟರ್‌ಗಿಂತಲೂ ಸಹ ಮುಂಚೂಣಿಯಲ್ಲಿದೆ. ಪ್ರಸಕ್ತ ಸಮಾಜವು ಮೌಲ್ಯಗಳ ಬಗ್ಗೆ ಕಾಳಜಿ ತೋರದಿರುವಾಗ ಈ ಗ್ರಂಥವು ನಮಗೆ ಮೌಲ್ಯಗಳ ದೃಷ್ಟಿಯಿಂದ ದಾರಿದೀವಿಗೆಯಾಗಬಹುದು. ನನಗೆ ಪ್ರೊ. ಡಾ. ಸತ್ಯವ್ರತ ಶಾಸ್ತ್ರಿಗಳ ಬಗ್ಗೆ ಇರುವ ಗೌರವಾದರಗಳೇ ಈ ನುಡಿಯನ್ನು ಬರೆಯಲು ಮೂಲ ಕಾರಣ. ಸಂಸ್ಕೃತ ಭಾಷೆಯ ಪ್ರಥಮ ಜ್ಞಾನಪೀಠ ಪುರಸ್ಕೃತರೂ ಆದ ಶಾಸ್ತ್ರಿಗಳು ಭಾರತೀಯ ಪಾಂಡಿತ್ಯ ಪರಂಪರೆ ಹಾಗೂ ಆಧುನಿಕ ಜ್ಞಾನರಾಶಿಯ ಸುಂದರ ಸಮನ್ವಯದ ಪ್ರತೀಕರಾಗಿದ್ದಾರೆ.

ಸಂಸ್ಕೃತಿಯು ಮಾನವೀಯ ಮೌಲ್ಯಗಳ ಆಧಾರದಿಂದ ಕೂಡಿದ್ದು ಭದ್ರಬುನಾದಿ ಹಾಕುತ್ತದೆ. ತಳಪಾಯ ಗಟ್ಟಿಯಾಗಿದ್ದು ಅದಕ್ಕೆ ಶಕ್ತಿಯನ್ನು ನೀಡಿದರೆ ಏಳ್ಗೆಯಾಗುವುದು ಖಂಡಿತ. ಇಂತಹ ಸಕಾರಾತ್ಮಕ ಭಾವನೆಯಿದ್ದಲ್ಲಿ ಭೂಮಿಯಿಂದ ಖಂಡಿತ ಚಂದ್ರನೆಡೆ ಆಕಾಶ ಮಾರ್ಗದಿಂದ ರಾಕೆಟ್ಟನ್ನೂ ಕಳುಹಿಸಬಹುದು. ಆದರೆ, ಸರಿಯಾದ ಅಡಿಪಾಯವಿಲ್ಲದಿದ್ದರೆ ರಾಕೆಟ್ ಸಂಚರಿಸದೆ ಧ್ವಂಸವಾಗುತ್ತದೆ. ಈ ಅನಾಹುತವನ್ನು ಕೇವಲ ಸಂಸ್ಕಾರದಿಂದ ಮಾತ್ರವೇ ತಡೆಯಲು ಸಾಧ್ಯ. ಈ ಸಂಸ್ಕಾರದಿಂದ ಸಂಸ್ಕರಣ ಉಂಟಾಗಿ ಸಂಸ್ಕೃತಿ ಉಂಟಾಗುತ್ತದೆ. ಸಂಸ್ಕೃತಿ ಎನ್ನುವುದು ಸುರಕ್ಷಿತವಾದ ದಂಡೆಯ ಮಧ್ಯದಲ್ಲಿರುವ ಚಲಿಸುವ ನದಿಯ ನೀರಿನಂತೆ. ಮಾನವೀಯ ಮೌಲ್ಯಗಳು ನದಿಯ ದಂಡೆಯನ್ನು ಸುರಕ್ಷಿತಗೊಳಿಸುವುದರೊಂದಿಗೆ ಸಮಾಜದ ಕಾಲುಷ್ಯವನ್ನು ತೆಗೆದು ನಿರ್ಮಲಗೊಳಿಸುತ್ತದೆ.

ಈ ದೃಷ್ಟಿಯಿಂದಲೇ ನನ್ನ ಪ್ರಕಾರ ಈ ಕೃತಿಯು ಅತ್ಯಂತ ಮಹತ್ವವುಳ್ಳದ್ದಾಗಿದೆ. ಈ ದಿಸೆಯಲ್ಲಿ ಡಾ. ಪ್ರೊ. ಶಾಸ್ತ್ರೀಯವರ ಈ ಉದ್ಯಮ ಅತ್ಯಂತ ಶ್ಲಾಘನೀಯ ಹಾಗೂ ಪ್ರಸ್ತುತವಾಗಿದೆ. ಈ ಗ್ರಂಥದ ಸಾರಥಿ ವಿಶ್ವಕೋಶದಂತಿದ್ದು ಶ್ರೇಷ್ಠ ಮನಸ್ಕರಾಗಿದ್ದಾರೆ. ವಿವೇಕದ ರತ್ನಗಳನ್ನು ಬೇರೆಯವರಿಂದ ಕಲೆಹಾಕಿ, ಅದನ್ನು ಸಮನ್ವಯಗೊಳಿಸಿ, ಗ್ರಂಥದ ಮೌಲ್ಯವನ್ನು ತಮ್ಮ ಪಾಂಡಿತ್ಯ ವಿವೇಕಗಳಿಂದಲೂ ಸಂಪದ್ಭರಿತಗೊಳಿಸಿದ್ದಾರೆ. ಡಾ.ಶಾಸ್ತ್ರಿಯವರು ಈ ಗ್ರಂಥಕ್ಕಾಗಿ ಹಗಲಿರುಳೂ ಶ್ರಮಿಸಿದ್ದಾರೆ. ಈ ಗ್ರಂಥದ ಸೊಗಡು ಎಲ್ಲೆಡೆ ಪಸರಿಸಲಿ ಎಂಬುದೇ ನನ್ನ ಹೃದಯಾಳದ ಇಂಗಿತ. ಇದೇ ವಿಷಯಕ್ಕೆ

ಸಂಬಂಧಿಸಿದಂತೆ ಮತ್ತೊಂದು ಭಾಗವನ್ನೂ ಸಹ ಹೊರತರಬೇಕಾಗಿದೆ. ಆ ದಿಸೆಯಲ್ಲಿ ಡಾ. ಶಾಸ್ತ್ರೀ ಈಗಾಗಲೇ ಪ್ರವೃತ್ತರಾಗಿದ್ದಾರೆ. ಈ ಗ್ರಂಥ ನಮ್ಮ ಸಮಾಜದ ಮೂಲೆ ಮೂಲೆಗಳಿಗೂ ಲಭ್ಯವಾಗಲೆಂಬುದೇ ನನ್ನ ಮಹದಾಸೆ.

ಈ ಗ್ರಂಥದ ಉದ್ದೇಶವೇ ಪ್ರಕಾಶಕರ ಪ್ರಮುಖ ಧ್ಯೇಯವೂ ಆಗಿದೆ - ಅದೇ ಭಾರತೀಯ ವಿದ್ಯಾಮಂದಿರದ ಸರ್ವೋತ್ಕೃಷ್ಟತೆಗೆ ದಾರಿದೀವಿಗೆಯಾಗಿದೆ. ಸಮಾಜವು ಮೌಲ್ಯಾಧಾರಿತವಾಗಿರಬೇಕೆಂದೇ ಭಾರತೀಯ ವಿದ್ಯಾಮಂದಿರವು ಎರಡು ಶಾಲೆಗಳನ್ನು ನಡೆಸುತ್ತಿದೆ. ಭಾರತೀಯ ವಿದ್ಯಾಮಂದಿರದ ಅಧ್ಯಕ್ಷನಾಗಿ ನಾನು ಡಾ. ಸತ್ಯವ್ರತ ಶಾಸ್ತ್ರಿಗಳ ಚಾಣಕ್ಯನೀತಿ ಗ್ರಂಥವನ್ನು ಪ್ರಕಟಿಸಿ ಹೆಮ್ಮೆ ಪಡುತ್ತಿದ್ದೇನೆ. ಈ ಗ್ರಂಥಕ್ಕೂ ಆ ಗ್ರಂಥಕ್ಕೂ ಸಾಮ್ಯಾಂಶವೆಂದರೆ ಈ ಗ್ರಂಥದಲ್ಲಿ ಪ್ರತಿಪಾದಿಸಿರುವ ಮೌಲ್ಯಗಳನ್ನೇ ಆ ಗ್ರಂಥವು ಕೌಟಿಲ್ಯನ ಹಿನ್ನಲೆಯಲ್ಲಿ ಪ್ರತಿಪಾದಿಸಿದೆ.

ಭಾರತೀಯ ವಿದ್ಯಾಮಂದಿರವು ಸಿಂಪ್ಲೆಕ್ಸ್ ಕಂಪನಿಯಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗಾಗಿಯೇ ತರಬೇತಿ ಶಿಬಿರಗಳನ್ನು ಏರ್ಪಡಿಸಿದೆ. ಇದರ ಮುಖಾಂತರ ಗುರುಶಿಷ್ಯ ಪಥದಂತೆ ಅವರಿಗೆ ಭಾರತೀಯ ಮೌಲ್ಯಗಳ ಬಗ್ಗೆ ದಿನನಿತ್ಯ ಜೀವನದಲ್ಲಿ ಅರಿವು ಮೂಡಿಸಲಾಗುತ್ತಿದೆ.

ನಾನು ಡಾ. ಸತ್ಯವ್ರತ ಶಾಸ್ತ್ರಿಗಳನ್ನು ಅವರ ಮನೆಯಲ್ಲಿ ಭೇಟಿಯಾದಾಗಲೆಲ್ಲಾ ಅವರ ಧರ್ಮಪತ್ನಿ ಸ್ವಯಂ ವಿದುಷಿಯಾದ ಡಾ. ಉಷಾ ಶಾಸ್ತ್ರಿಯವರ ಆಶೀರ್ವಾದವನ್ನೂ ಪಡೆಯುವಂತಹ ಸೌಭಾಗ್ಯ ಒದಗಿಬಂದಿದೆ. ಆ ಮಹಾನ್ ವ್ಯಕ್ತಿಯ ಹಿಂದೆಯಿರುವ ಸ್ಫೂರ್ತಿ ಕೇಂದ್ರ ಹಾಗೂ ಶಕ್ತಿಯೆಂದರೆ ಆಕೆಯೇ.

ಈ ಗ್ರಂಥದ ಬಗ್ಗೆ ನಿಮ್ಮ ಅನಿಸಿಕೆಗಳಿಗಾಗಿ ನಾವು ಎದುರು ನೋಡುತ್ತಿದ್ದೇವೆ.

ಗೌರವಾದರಗಳೊಂದಿಗೆ

ಡಾ. ಬಿತಲ್ ದಾಸ್ ಮುಂದ್ರ
ಅಧ್ಯಕ್ಷರು

ಭಾರತೀಯ ವಿದ್ಯಾಮಂದಿರ
ಸಿಂಪ್ಲೆಕ್ಸ್ ಮನೆ
27, ಶೇಕ್ಸ್‌ಪಿಯರ್ ಸರಣಿ
ಕೊಲ್ಕತ್ತಾ – 700 017.

# Publisher's Note

The touchstone of human values sustains life against hostile winds. Historically, values like paropakāra (working selflessly for the benefit of others), ahimsā (not injuring others), asteya (not stealing from others) have been the foundations of ancient Indian society. Today, we live in a wired society. Long-distance families and friendships in a global economy, hedonistic lifestyles, rising incidents of violence towards women and children are real in present times. Where is the anchor for our troubled souls? Where is that touch of solace which stems from the brick and mortar of earthy values'? The importance of the topic "Human Values" is immeasurable in today's context to reveal the nectar beyond Facebook and Twitter. This flagship book on Human values aims to explore such a relevant area as well as the social morass which prevails today.

I must begin writing this note with an expression of my high esteem for Professor Dr. Satya Vrat Shastri - a Jnanpith Laureate in Sanskrit literature, he is the rare combination of the ancient traditions of Pānditya as well as the attributes of the modern intellect.

Culture is based on the human value system which moulds its structure. Say, if the structure is strong and energy is applied through it, progress is inevitable. Such a positive force has the capacity to propel a rocket from the earth to the moon. But without a proper structure, the rocket simply explodes leading to destruction. The solution lies in developing a structure through Sanskāra (refining), which leads to Sanskararna (collation) and development of Sanskrti (culture). Culture is like a river with banks stable and new water flows. Value system will keep the banks intact and clean the pollution of the society.

That is the reason why, the significance of this book in my eyes is immense. The effort of Professor Dr. Shastri is unique and unprecedented. The charioteer of this book is himself a great mind with encyclopaedic knowledge of scriptures. He has collected gems of wisdom from other learned minds, synthesized them and enriched the book with the elixir of his own wisdom

too. Dr. Shastri worked tirelessly on this book with amazing alacrity. It is my heartfelt wish that the precious message of this book spreads everywhere. We still have to work on yet another volume on the same topic. Dr. Shastri is already working on it. It is desirable that this book reaches each and every nook and corner of our society.

This publication on human ethics and ethical literature is a reflection of the publisher's - i.e. the Bharatiya Vidya Mandir's commitment towards excellence. The Bharatiya Vidya Mandir, is already running two schools reflective of its commitment to value education in our society. As the President of the Bharatiya Vidya Mandir, I feel proud to state that we have recently published a book entitled Cānakyanīti by Dr Satya Vrat Shastri. The book is on the values extolled by Kautilya and shares common ground.

The Bharatiya Vidya Mandir has also started a flagship training programme for the underprivileged workers working on different project sites of Simplex Infrastructures. It is a practical exercise in the propagation of Human Values through Guru-Shishya Pratha, as the gurus teach the new pupils the rudiments of the subject.

Whenever I meet Dr. Satya Vrat Shastri at his residence, I have the privilege of meeting his wife Dr. Usha Shastri, an eminent scholar herself and the pleasure of being blessed by her. She is the inspiration and the energy behind the work of the great scholar.

We look forward to your valued feedback on this book.

With earnest regards

**Dr. Bithal Das Mundhra**
Chairman

**Bharatiya Vidya Mandir**
Simplex House
27, Shakespeare Sarani
Kolkata - 700 017

## ಪ್ರಸ್ತಾವನೆ

ಚಿತ್ತಸ್ಥೈರ್ಯ, ಮನೋದಾರ್ಢ್ಯ, ಸಂಕಲ್ಪಗಳು, ಭಾವನೆಗಳು, ಆದರ್ಶಗಳು ಮತ್ತು ಹೆಚ್ಚಿನ ನಿರೀಕ್ಷೆಗಳು ಸಮಾಜದಲ್ಲಿ ಮೌಲ್ಯಗಳನ್ನು ಸೃಷ್ಟಿಸುತ್ತದೆ. ಪರೋಪಕಾರ, ಮಿಕ್ಕವರಿಗೆ ಸಹಾಯ ಮಾಡುವುದು, ಅಹಿಂಸೆ, ಬೇರೆಯವರಿಗೆ ಹಿಂಸೆ ಉಂಟುಮಾಡದಿರುವುದು, ಅಸ್ತೇಯ, ಕದಿಯದಿರುವುದು, ದೃಢವಾದ ಸಂಕಲ್ಪ, ಮನೋದಾರ್ಢ್ಯ, ಏಕಾಗ್ರತೆ, ವಿಷಯದ ಬಗ್ಗೆ ಏಕಮುಖೀ ಏಕಾಗ್ರತೆ, ಅಕ್ರೋಧ, ಕೋಪ ಮಾಡಿಕೊಳ್ಳದಿರುವುದು, ವಿವೇಕ, ಕ್ರಿಯೆಗಳಲ್ಲಿ ಸಮತೋಲನ, ದೇಶಭಕ್ತಿ ಮುಂತಾದವು ಸಾರ್ವತ್ರಿಕವಾದುದು. ಕೆಲವು, ಕೆಲವು ಪ್ರದೇಶಗಳಿಗೆ ಅಥವಾ ದೇಶಗಳಿಗೆ ಮಾತ್ರ ಸೀಮಿತವಾಗಿದ್ದು ಆ ಪ್ರದೇಶ ಅಥವಾ ಆ ದೇಶಕ್ಕೆ ಮಾತ್ರವೇ ಸಂಬಂಧಿಸಿರುತ್ತದೆ. ಅವು ಯಾವುದಾದರೂ ಸಂದರ್ಭಕ್ಕೋ ಅಥವಾ ವಾತಾವರಣಕ್ಕೋ ಹೊಂದಿಕೊಂಡಿದ್ದಾಗಿರುತ್ತದೆ. ಅವು ಕೆಲವು ಧರ್ಮಗಳಿಗೆ ಮಾತ್ರ ಅನ್ವಯವಾಗುವಂತಿದ್ದು ಆಧರ್ಮದ ಅನುಯಾಯಿಗಳ ಮೇಲೆ ಮಾತ್ರ ನಿರ್ಬಂಧವನ್ನುಂಟುಮಾಡುವಂತಿರುತ್ತದೆ. ಭಾರತೀಯರಲ್ಲಿ ಸ್ತ್ರೀಯರ ಪಾವಿತ್ರ್ಯತೆ ಅಗ್ರಸ್ಥಾನವನ್ನು ಹೊಂದುತ್ತದೆ. ಆಧುನಿಕ ಸಮಾಜದಲ್ಲಿ ಅದು ಅಸಂಬದ್ಧವಾಗಿ ತೋರಿದರೂ ಸಹ ಲಿಂಗಸಾಮ್ಯದ ದೃಷ್ಟಿಯಿಂದ, ಕುಟುಂಬದ ವ್ಯವಸ್ಥೆ ಸ್ತ್ರೀಯರ ಪಾವಿತ್ರ್ಯತೆಯನ್ನವಲಂಬಿಸಿರುತ್ತದೆ. ಕುಟುಂಬವನ್ನು ಒಗ್ಗೂಡಿಸಿ ಹಿಡಿದು ನಿಲ್ಲಿಸುವವರೇ ಅವರು. ಪಾಶ್ಚಾತ್ಯ ಕುಟುಂಬಗಳಂತೆ ಅಲ್ಲ. ಮರ್ಯಾದೆ ಮತ್ತು ಗೌರವದ ದೃಷ್ಟಿಯಿಂದ ಅವರು ಪಡೆಯಬೇಕಾದಕ್ಕಿಂತ ಹೆಚ್ಚಾಗಿಯೇ ಮನ್ನಣೆ ಗಳಿಸುತ್ತಾರೆ. ಸ್ತ್ರೀಯರನ್ನು ಗೌರವಿಸಿದರೆ ದೇವತೆಗಳೂ ಸಂತೋಷಿಸುತ್ತಾರೆ. – ''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ: ।'' ಅವರಿಗೆ ''ದೇವಿ'' ಎಂಬ ಉನ್ನತ ಸ್ಥಾನವನ್ನು ನೀಡಲಾಗಿದೆ. ಅವರ ಬಾಲ್ಯಕಾಲದಲ್ಲಿ ಅವರು ದೇವಿಯ ಅವತಾರವೆಂದು ನವರಾತ್ರಿಯಲ್ಲಿ ಅವರೇ ದುರ್ಗಾದೇವಿಯೆಂದು ಗೌರವಿಸಲ್ಪಡುತ್ತಾರೆ. ಆಗ ಅವರು ಬಹಳ ಬೇಡಿಕೆಯಲ್ಲಿರುತ್ತಾರೆ. ಅವರ ಕಾಲು ತೊಳೆಯಲ್ಪಡುತ್ತದೆ. ಅವರಿಗೆ ಹೊಸ ಉಡುಪು ಕೊಡಲಾಗುವುದು. ಅವರಿಗೆ ಹಣ ಹಾಗೂ ಒಳ್ಳೆಯ ಊಟವೂ ನೀಡಲಾಗುತ್ತದೆ. ವಿಷಯಲಂಪಟತೆಯನ್ನು ಹೆಂಗಸರ ವಿಷಯದಲ್ಲಿ ಅನಾದಿಕಾಲದಿಂದಲೂ ಧಿಕ್ಕರಿಸಲ್ಪಟ್ಟಿದೆ. ತಮ್ಮ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುವುದು, ತಮ್ಮ ಗಂಡಂದಿರಿಗೆ ನಿಷ್ಠರಾಗಿರುವುದು ಅವರ ಮನಃ ಪಟಲದಲ್ಲಿ ಎಷ್ಟು ಆಳವಾಗಿ ಬೇರೂರಿದೆಯೆಂದರೆ, ಆಧುನಿಕತೆಯ ಹಿಮಪಾತವೇ ಆಗಿದ್ದರೂ ಅವರು ಮಾತ್ರ ಅದರಿಂದ ಹೊರಬರಲಾಗಿಲ್ಲ. ಹಾಗಿಲ್ಲದಿದ್ದರೆ, ಅತ್ಯಂತ ವಿದ್ಯಾವಂತರಾಗಿ, ಚೆನ್ನಾಗಿ ಉಡುಪನ್ನು ಧರಿಸಿ, ಕೆಲಸಕ್ಕೆ ಹೋಗುವ ಮಹಿಳೆಯರು, ಕರ್ನಾಚೌತ್ ದಿನ ಸಂಜೆಯವರೆಗೂ ಉಪವಾಸದಿಂದಿದ್ದು, ಚಂದ್ರದರ್ಶನದವರೆಗೆ ತಮ್ಮ ಗಂಡಂದಿರ ಒಳಿತನ್ನು ಬಯಸುವವರಾಗಿರುತ್ತಿದ್ದರು. ಮಧ್ಯಕಾಲೀನ ಯುಗದಲ್ಲಿ ಅಸಮರ್ಥರಾದ ರಾಜರು ಅವರನ್ನು ಸಂರಕ್ಷಿಸಲು ವಿಫಲರಾದಾಗ, ಭಾರತೀಯ ಮಹಿಳೆಯರು ಸಾವನ್ನಪ್ಪಿಸಿದರೇ ಹೊರತು ತಮ್ಮನ್ನು ತಾವು ಬೇರೆಯವರಿಗೆ ಸಮರ್ಪಿಸಿಕೊಳ್ಳಲಿಲ್ಲ. ಈ ಪದ್ಧತಿಯು ಸತೀ

ಪದ್ಧತಿಯೆಂದು ಹೆಸರಾಗಿದ್ದು ಶಿವನ ಮಡದಿ ತನ್ನ ಹಿಂದಿನ ಅವತಾರದಲ್ಲಿ ತನ್ನ ತಂದೆ ತನ್ನ ಗಂಡನಿಗೆ ತೋರಿದ ಅವಮಾನವನ್ನು ಸಹಿಸಿಕೊಳ್ಳದ್ದನ್ನು ನೆನಪಿಸುತ್ತದೆ. ಅಂತಹ ಸಂಧರ್ಭದಲ್ಲಿ ಅದೇ ಅವರ ಜೀವಿತ ಮೌಲ್ಯವಾಗಿತ್ತು. ಆದರೆ, ಕಾಲವಿಪರ್ಯಾಸದಿಂದ, ಅದು ಬಿಟ್ಟು ಹೋಯಿತು. ಅದು ಒಂದು ಕಾಲಕ್ಕೆ ಹಾಗೂ ಒಂದು ಸಂದರ್ಭಕ್ಕೆ ಮಾತ್ರ ಸೀಮಿತವಾಗಿತ್ತು. ಇಂತಹ ಬರ್ಬರ ಕೃತ್ಯಗಳು ಅಲ್ಲಲ್ಲಿ ಇಂದೂ ಸಹ ನಮಗೆ ಕಂಡುಬರುತ್ತದೆ. ಆದರೆ ಅದು ಅವರ ಮರ್ಯಾದೆಯನ್ನು ಕಾಪಾಡಿಕೊಳ್ಳುವುದರಲ್ಲಿ ಹಿಂದೆ ಇದ್ದಂತೆ ಇಂದು ಕಾರಣವಲ್ಲ. ಅದು ತಮ್ಮ ಗಂಡಂದಿರೊಂದಿಗೆ ತಮಗಿದ್ದ ಅವಿನಾಭಾವ ಸಂಬಂಧವನ್ನು ತೋರಿಸುವುದಾಗಿತ್ತೇ ಹೊರತು ಮತ್ತೇನೂ ಆಗಿರಲಿಲ್ಲ, ಏಕೆಂದರೆ ಅವನಿಲ್ಲದೆ ಅವರ ಮಾತು ಅರ್ಥಹೀನವೆಂದು ಅವರು ಭಾವಿಸಿದ್ದರು. ಅದು ಅವರ ನೆಂಟರಲ್ಲಿ ಸ್ವಾರ್ಥವೂ ತೋರುತ್ತದೆ. ಅದರಿಂದಲೇ ಅವರು ಮಹಿಳೆಯರನ್ನು ಆ ಹೀನ ಕೃತ್ಯಕ್ಕೆ ಪ್ರೇರೇಪಿಸುತ್ತಿದ್ದರು. ಈಗ ಅದು ಕಾನೂನಿನ ಪ್ರಕಾರ ನಿಷೇಧಿಸಲಾಗಿದೆ. ಅದರ ವಿಷಯ ಈಗ ಮಾತನಾಡುವುದೂ ಸಹ ಅಸಂಗತ. ಮುಖ್ಯಾಂಶವೆಂದರೆ, ಮಹಿಳೆಯರ ಗೌರವವನ್ನು ಕಾಪಾಡುವುದು ಮತ್ತು ಅದರಲ್ಲಿ ಯಾವ ವ್ಯತ್ಯಯವೂ ಇಲ್ಲ. ಯಾವ ಸಮಾಜವೂ ಸಹ ಆದರ್ಶ ಪುರುಷ, ಆದರ್ಶ ಮಹಿಳೆಯರಿಂದಲೇ ಮಾಡಲ್ಪಟ್ಟಿಲ್ಲ. ನಡವಳಿಕೆಬಿಟ್ಟು ಬೇರೆ ರೀತಿ ವರ್ತಿಸುವವರೂ ಕೆಲವರಿದ್ದಾರೆ. ಇದಕ್ಕೆ ಭಾರತೀಯ ಸಮಾಜವೂ ಹೊರತಲ್ಲ. ಮಹಿಳಾ ಹಕ್ಕನ್ನು ಮೀರುವುದನ್ನು ಭಾರತೀಯ ಸಮಾಜ ಸಹಿಸುವುದಿಲ್ಲ. ಅದಕ್ಕೆ ಅತ್ಯಂತ ಉಗ್ರ ಶಿಕ್ಷೆಯನ್ನೂ ವಿಧಿಸುತ್ತದೆ. ಹೆಂಗಸರ ಮಾನಭಂಗ ಪ್ರಸಂಗ ಇತ್ತೀಚಿನ ದಿನಗಳಲ್ಲಿ ನಡೆದಾಗ ಗಂಡಸರೂ ಸಹ ಹೆಂಗಸರೊಂದಿಗೆ ಸೇರಿ ಹೀನಕೃತ್ಯದ ವಿರುದ್ಧ ಪ್ರತಿಭಟಿಸಿದರು. ನೈತಿಕತೆಯು ಜಾರುತ್ತಿರುವಾಗಲೂ ಸಹ ಸಮಾಜದ ಮೇಲೆ ಅವರ ಹಿಡಿತ ಇಂದಿಗೂ ಬಿಗಿಯಾಗಿಯೇ ಇದೆ. ಭಾರತೀಯ ಸಮಾಜದಲ್ಲಿ ಮಹಿಳೆಯರ ಪಾವಿತ್ರ್ಯತೆಗೆ ಕೊಟ್ಟಿರುವ ಸ್ಥಾನವೇ ಇವೆಲ್ಲಕ್ಕೂ ಕಾರಣವು.

ಮಹಿಳೆಯರ ಗೌರವ ಹಾಗೂ ಪಾವಿತ್ರ್ಯತೆಯನ್ನು ರಕ್ಷಿಸಲೆಂದೇ ಇಸ್ಲಾಂ ಸಮಾಜ ಅವರು ಹೊರಗೆ ತೆರಳುವಾಗ ಅವರ ಪುರುಷ ಸಂಬಂಧಿಕರೂ ಅವರೊಂದಿಗೆ ಇರುವಂತೆ ವಿಧಿಸಿರುವುದು. ಅವರು ಹಿಜಾಬ್ ಹಾಗೂ ಬುರ್ಕಾ ಹಾಕಿಕೊಳ್ಳುವುದೂ ಸಹ ತಮ್ಮ ದೇಹವನ್ನು ಸಂಪೂರ್ಣವಾಗಿ ಮುಚ್ಚಿಕೊಳ್ಳುವುದಕ್ಕೆ ಮತ್ತು ಕೆಲವು ಪುರುಷರ ವಕ್ರದೃಷ್ಟಿ ಅವರ ಮೇಲೆ ಬೀಳದಿರಲೆಂದೇ.

ಭಾರತೀಯ ಸಂಸ್ಕೃತಿಗೇ ಮೀಸಲಾದ ಮತ್ತೂ ಕೆಲವು ಮೌಲ್ಯಗಳೂ ಇದೆ. ಅದು ಇದಕ್ಕೆ ಒತ್ತುಕೊಡುತ್ತದೆ. ಅದರಲ್ಲಿ ಒಂದೆಂದರೆ ತಂದೆ, ತಾಯಿ, ಗುರುಗಳಿಗೆ ಅತ್ಯಂತ ಗೌರವಾದರ ನೀಡಿ ಅವರನ್ನು ದೇವರೆಂದೇ ಭಾವಿಸುವುದು. ತೈತ್ತಿರೀಯ ಉಪನಿಷತ್ತಿನ ಶಿಕ್ಷಾವಲ್ಲಿಯಲ್ಲಿ ಗುರುವು ಶಿಷ್ಯನ ವಿದ್ಯಾಭ್ಯಾಸ ಸಂಪೂರ್ಣವಾಗಿ ಅವನು ತನ್ನ ಮನೆಗೆ ನಿರ್ಗಮಿಸುವಾಗ ಕೊಡುವ ಸಂದೇಶವೆಂದರೆ ತಾಯಿ, ತಂದೆ, ಗುರುವಿನೊಡನೆ ಅತಿಥಿಯನ್ನು ಸೇರ್ಪಡಿಸಿ, ಎಲ್ಲರನ್ನೂ ದೇವರೆಂದೇ ಭಾವಿಸು

ಎಂದು. ''ಮಾತೃದೇವೋಭವ'', ''ಪಿತೃದೇವೋಭವ'', ''ಆಚಾರ್ಯದೇವೋಭವ'', ''ಅತಿಥಿದೇವೋಭವ''. ಇದು ಅತ್ಯಂತ ಮೌಲಿಕವಾದ ಮೌಲ್ಯವಾಗಿದ್ದು ಸಮಾಜವು ಸನ್ಮಾರ್ಗದತ್ತ ಸಾಗಲು ಯಾವುದೇ ಪುರುಷನನ್ನು ಕಷ್ಟ ಎದುರಿಸಲು ಮಾನಸಿಕ ಸ್ಥೈರ್ಯವನ್ನೊದಗಿಸುತ್ತದೆ. ಈ ಅನುಕ್ರಮಣೆಯನ್ನು ಅನುಸರಿಸಿ ರಾಮನು ಒಂದು ನಿಮಿಷವನ್ನೂ ತಾಳದೆ ತಂದೆಯ ಆದೇಶವನ್ನು ಶಿರಸಾವಹಿಸಿ ತನ್ನ ಮಲತಾಯಿ ಕೇಳಿದಂತಹ ತನ್ನ 14 ವರ್ಷ ವನವಾಸ, ಭರತನ ಪಟ್ಟಾಭಿಷೇಕವನ್ನು ನಡೆಯುವಂತೆ ಮಾಡಿದನು. ತನಗೆ ಅತ್ಯಂತ ನೋವುಂಟಾಗುವಂತಹ ಸಂದರ್ಭವಿದ್ದಾಗ್ಲೂ ತನ್ನ ಜೀವಿತ ಸರ್ವಸ್ವವೇ ಆದ ಮಗನ ಅಗಲುವಿಕೆ ಅತ್ಯಂತ ಕಷ್ಟವುಂಟುಮಾಡಿದರೂ ದಶರಥನು ತನ್ನ ದೃಢ ನಿಲುವಿನಿಂದ ಹಿಂದಿರುಗಲಿಲ್ಲ. ತಾನೇ ತನ್ನ ಮಗನಿಗೆ ಕಾಡಿಗೆ ಹೋಗುವಂತೆ ಆದೇಶಿಸಲಿಲ್ಲ. ತನ್ನ ಪರವಾಗಿ ಮಲತಾಯಿಯೇ ರಾಮನಿಗೆ ಈ ಸಂದೇಶವಿತ್ತಳು. ತಂದೆಯ ಅಸಹಾಯಕತೆಯನ್ನು ಗಮನಿಸಿ, ರಾಮನು ತನ್ನ ತಂದೆ ಸತ್ಯನಿಷ್ಠನಾಗಿರುವಂತೆ, ಮಾತನ್ನು ನಡೆಸಿಕೊಳ್ಳಲು, ತಾನೇ ತನ್ನ ತಂದೆಗೆ ಸಂಪೂರ್ಣವಾಗಿ ವಿಧೇಯವಾಗಿದ್ದುದು ಅತ್ಯಂತ ಮುಖ್ಯವಾದ ಮಾನವೀಯ ಮೌಲ್ಯವಾಗಿದ್ದು ಅನುಕರಣೀಯವಾಗಿದ್ದು ರಾಮಾಯಣದಲ್ಲಿ ಹೀಗೆ ಹೇಳಲ್ಪಟ್ಟಿದೆ - ''ತಂದೆಗೆ ವಿಧೇಯವಾಗಿದ್ದು ಅವನ ಮಾತಿನಂತೆ ನಡೆಯುವುದಕ್ಕಿಂತ ದೊಡ್ಡ ಮೌಲ್ಯವಿಲ್ಲ'' ಎಂದು (2.19.22). ಭಾರತೀಯರಲ್ಲಿ ತಾಯಿಯ ಸ್ಥಾನ ಭೂಮಿಗಿಂತ ಹಿರಿದಾದುದು. ''ಮಾತಾ ಗುರುತರಾ ಭೂಮೇಃ'' ಮತ್ತು ತಂದೆಗಿಂತಲೂ ಸಾವಿರ ಪಟ್ಟು ಮಿಗಿಲು - ''ಸಹಸ್ರಂ ಹಿ ಪಿತುರ್ ಮಾತಾ, ಮಾತಾ ಗೌರವೇಣಾತಿರಿಚ್ಯತೇ'' (ಬಾಲರಾಮಾಯಣ. 4.30). ಗುರು ತ್ರಿಮೂರ್ತಿಗಳೊಂದಿಗೆ ಸೇರ್ಪಡಿಸುತ್ತಾನೆ ಬ್ರಹ್ಮ, ವಿಷ್ಣು ಮತ್ತು ಮಹೇಶ – ಗುರುರ್‌ಬ್ರಹ್ಮ, ಗುರುರ್‌ವಿಷ್ಣು; ಗುರುರ್‌ದೇವೋ ಮಹೇಶ್ವರಃ. ಅತಿಥಿಯು ಎಲ್ಲ ದೇವರ ಅಂತರ್ಭಾವವೇ ಆಗಿರುತ್ತಾನೆ – ''ಅತಿಥಿಃ ಸರ್ವದೇವತಾಃ''.

ತಮ್ಮ ಘನತೆಯನ್ನು ಕಾಪಾಡಿಕೊಂಡು ಯಾವುದೇ ಕಾರಣಕ್ಕೂ ರಾಜಿಮಾಡಿಕೊಳ್ಳದೆ ಇರುವುದೇ ಮತ್ತೊಂದು ಮೌಲ್ಯ ಭಾರತದಲ್ಲಿ ಅನೇಕ ವರ್ಷಗಳಿಂದ ಕಾಪಾಡಿಕೊಂಡು ಬಂದಿರುವುದು. ಮಹಾರಾಜಾ ಪ್ರತಾಪನು ಗೊಂಡಾರಣ್ಯಗಳಲ್ಲಿ ಅಲೆದಾಡಿದನು. ಅವನ ಮಕ್ಕಳು ಹುಲ್ಲನ್ನೇ ತಿಂದು ಬದುಕಬೇಕಾಯಿತು. ಹಾಗಿದ್ದಾಗ್ಯೂ ಅವನು ತನ್ನ ಘನತೆಯನ್ನು ಕಳೆದುಕೊಳ್ಳಲಿಲ್ಲ ದಾಸ್ಯವನ್ನು ಸ್ವೀಕರಿಸಲಿಲ್ಲ. ಧರ್ಮವನ್ನು ಕಾಪಾಡುವುದಕ್ಕೆ ಏನನ್ನು ಬೇಕಾದರೂ ಮಾಡುವುದೂ ಸಹ ಭಾರತೀಯರ ಪ್ರಮುಖ ಮೌಲ್ಯವೇ ಆಗಿದೆ. ತನ್ನ 9ನೇ ವಯಸ್ಸಿನಲ್ಲಿ ಗುರುಗೋವಿಂದಸಿಂಗ್ ತನ್ನ ತಂದೆಗೆ ಪ್ರಾಣಾರ್ಪಣೆ ಮಾಡಲು ಹುರಿದುಂಬಿಸಿದನು. ಧರ್ಮವನ್ನು ಕಾಪಾಡುವುದಕ್ಕೋಸ್ಕರ ಅವನು ಈ ಮೌಲ್ಯವನ್ನು ಪುರಸ್ಕರಿಸಿದನು. ಸ್ವಧರ್ಮದಲ್ಲಿ ಸಾಯುವುದೇ ಮೇಲು ಪರಧರ್ಮವನ್ನು ಸ್ವೀಕರಿಸುವುದಕ್ಕಿಂತ. ಅವನ ಏಳು ಹಾಗೂ ಒಂಬತ್ತನೇ ವರ್ಷದ ಮಕ್ಕಳ ಮತಾಂತರಕ್ಕಿಂತ ಪ್ರಾಣಾರ್ಪಣೆಯನ್ನೇ ಪುರಸ್ಕರಿಸಿದರು. ಅವನ ಇಬ್ಬರು ಮಕ್ಕಳ ಹುತಾತ್ಮತೆಯಾದ ಬಳಿಕ ಗುರುಗೋವಿಂದಸಿಂಗನು ಕ್ರೂರಿಯಾದ ಔರಂಗಜೇಬನೊಡನೆ ರಣರಂಗದಲ್ಲಿ

ಕಾದಾಡಿದನು. ಆದರೆ ಸೋಲನ್ನು ಮಾತ್ರ ಅಂಗೀಕರಿಸಲಿಲ್ಲ. ತಾಯ್ನಾಡಿಗೋಸ್ಕರ ಬುದ್ಧಿಪೂರ್ವಕವಾಗಿಯೇ ಪ್ರಾಣಾರ್ಪಣೆ ಮಾಡಿದಂತಹ ಭಗತ್‌ಸಿಂಗ್, ರಾಜ್‌ಗುರು ಹಾಗೂ ಸುಖ್‌ದೇವರ ಬಲಿದಾನವನ್ನು ಮರೆಯಲಾದೀತೇ? ಅವರು ಹಮ್ಮಿಕೊಂಡಿದ್ದ ಮೌಲ್ಯಗಳೆಂದರೆ ಘನಗಾಂಭೀರ್ಯದಿಂದ ಬಾಳನ್ನು ನಡೆಸುವುದು, ಸ್ವಾತಂತ್ರ್ಯ ಪ್ರೀತಿ, ಸ್ವಧರ್ಮರಕ್ಷಣೆ ಮತ್ತು ತಾಯ್ನಾಡಿನತ್ತ ಗೌರವ. ಅವರೇ ತಾಯ್ನಾಡಿಗೋಸ್ಕರ ಹೆಚ್ಚಿನ ತ್ಯಾಗಮಾಡಿದವರು, ಮೌಲ್ಯಗಳನ್ನು ಕಾಪಾಡಿಕೊಂಡು ಬಂದವರು ಮತ್ತು ಮನೆಮಾತಾದವರು.

ಭಾರತೀಯ ಮೌಲ್ಯಗಳನ್ನರಿಯಲು ಅದರ ಮೂಲಾಧಾರವನ್ನು ಅರಿಯುವುದು ಅವಶ್ಯಕ. ನಾಗರೀಕತೆಯು ಮುಂದುವರೆದಂತೆಲ್ಲಾ ಮಾನವರು ಜೀವನ ಪದ್ಧತಿಗಳನ್ನು ಪ್ರಾಣಿಗಳಿಗಿಂತಲೂ ಚೆನ್ನಾಗಿ ಅರಿತವರಾದರು. ಒಂದು ಗುಂಪಿನಲ್ಲಿ ವಾಸಿಸುವುದು ಪ್ರಾಯಶಃ ತಮ್ಮನ್ನು ತಾವು ರಕ್ಷಿಸುವುದಕ್ಕಾಗಿಯೇ ಆಗಿತ್ತು. ವೈಯಕ್ತಿಕವಾಗಿ ತಮ್ಮನ್ನು ತಾವು ರಕ್ಷಿಸುಕೊಳ್ಳುವುದೇ ಗುಂಪಿನ ಸುಭದ್ರತೆಗಾಗಿ ಮಾರ್ಪಾಡಾಗಿರಬಹುದು. ಮಾನವ ಈ ಮೌಲ್ಯದಿಂದಲೇ ತನ್ನ ಬಾಳಿನ ಸಾರ್ಥಕತೆಯನ್ನು ಕಲಿತಿರಬಹುದು. ಅದು ಅವನಿಗೆ ತನ್ನ ಬದುಕಿನಲ್ಲಿ ವಿನ್ಯಾಸವನ್ನು ಉಂಟುಮಾಡಿರಬೇಕು ಮತ್ತು ಅದರಿಂದ ಗುಂಪಿನ ಹಾಗೂ ಸಮಾಜದ ಪ್ರಾಮುಖ್ಯತೆಯನ್ನು ಅವನು ಅರಿತಿರಬಹುದು. ಅವನು ತನ್ನ ಮೌಲ್ಯಗಳಲ್ಲಿ ವಿನ್ಯಾಸವಿಡಲು ಇದೇ ಬುನಾದಿಯಾಗಿರಬಹುದು. ಈ ಮೌಲ್ಯಗಳ ತಳಹದಿಯು ಶೃತಿ, ಸ್ಮೃತಿ ಹಾಗೂ ಪುರಾಣಗಳಲ್ಲಿ ಅಡಗಿದೆ. ಬುದ್ಧಿವಂತನಾದ ಮಾನವ ಯಾವುದು ಸರಿ ಯಾವುದು ತಪ್ಪು ಎಂಬ ವಿಷಯದಲ್ಲಿ ಮೊದಲಿಗೆ ವೈಯಕ್ತಿಕ ಹಂತದಲ್ಲಿ, ಅನಂತರ ಸಾಮಾಜಿಕ ಹಂತದಲ್ಲಿ ಅನಂತರ ಮಾನವೀಯತೆಯ ಮಟ್ಟದಲ್ಲಿ ಆಲೋಚಿಸತೊಡಗಿದನು. ಹಂತಹಂತವಾಗಿ ಅವನು ಜೀವನದ ಪ್ರತಿಹಂತದಲ್ಲೂ ಔಚಿತ್ಯ-ಅನೌಚಿತ್ಯಗಳನ್ನು ತನ್ನ ಯುಕ್ತಾಯುಕ್ತ ವಿಮೋಚನೆಗೆ ಒಳಪಡಿಸಿದನು. ವೈಯಕ್ತಿಕ ಹಂತದಲ್ಲಿ ಅವನು ತರ್ಕದಿಂದ ತೀರ್ಮಾನಕ್ಕೆ ಬಂದನು ಆದರೆ ಸಾಮಾಜಿಕ ವಿಷಯಗಳಲ್ಲಿ ಅವನು ಇತರರೊಂದಿಗೆ ಚರ್ಚೆನಡೆಸಿದನು. ಯಾವಾಗ ಈ ಮೌಲ್ಯವು ಸರಿದೋರಲಿಲ್ಲವೋ ವಿಭಿನ್ನ ಪ್ರದೇಶ, ಕಾಲ ಹಾಗೂ ಸನ್ನಿವೇಶಗಳಿಗೆ ಅವನು ಪರ್ಯಾಲೋಚಿಸಿ ಯಾವ ರೀತಿ ಆ ಮೌಲ್ಯವು ಮಾರ್ಪಾಡು ಮಾಡಬಹುದೆಂದೂ ಸಮಯ, ಪ್ರದೇಶ, ಸನ್ನಿವೇಶಗಳಿಗನುಗುಣವಾಗಿ ತೀರ್ಮಾನಕ್ಕೆ ಬಂದನು. ಆದ್ದರಿಂದ, ಸಮಯ ಹಾಗೂ ಪ್ರದೇಶದ ಪ್ರಾಮುಖ್ಯತೆಯನ್ನು ಒಪ್ಪಲೇಬೇಕಾಗುತ್ತದೆ. ಈಗ ಮುಂದಿನ ಪ್ರಶ್ನೆಯೆಂದರೆ, ಈ ಮೌಲ್ಯಗಳು ಯಾರಿಗಾಗಿ? ಎಂದು. ಉತ್ತರವು ಸಾಮಾಜಿಕವಾಗಿಯೇ ಹುಡುಕಬೇಕು. ಯಾವ ಮೌಲ್ಯಗಳು ಸಮಾಜಕ್ಕೆ ಉಪಯೋಗವಲ್ಲವೋ, ಅವು ಮೌಲ್ಯ ಎಂಬ ನಾಮಕ್ಕೇ ಅನರ್ಹವಾಗಿರುತ್ತದೆ. ಮೌಲ್ಯಗಳ ಮುಖ್ಯ ತಳಹದಿಯೆಂದರೆ ಅದು ಮಿಕ್ಕವರ ಒಳಿತಿಗಾಗಿ ಇರಬೇಕು. ಸಮಾಜದ ಬಗ್ಗೆ ಸಾಕಷ್ಟು ಹೇಳಿದ ನಂತರ, ಈಗ ವಯಕ್ತಿಕ ವ್ಯಕ್ತಿಯ ಬಗ್ಗೆ ಅದು ಹೇಗೆ ಪ್ರತಿಫಲಿಸುತ್ತದೆಂದು ಅರಿಯಬೇಕಾಗುತ್ತದೆ. ವಯಕ್ತಿಯ ವ್ಯಕ್ತಿ ಇತರಿಗಾಗಿ ತನ್ನ ಎಲ್ಲಾ ಮೌಲ್ಯಗಳನ್ನೂ ತ್ಯಾಗ

ಮಾಡಬೇಕೇ ಅಥವಾ ಯುಕ್ತಾಯುಕ್ತ ವಿವೇಚನೆಗೆ ಮಾರುಹೋಗಿ ತನ್ನ ಏಳಿಗೆಯನ್ನೂ ಯೋಚಿಸಬೇಕೆ? ಒಂದಂತೂ ಸತ್ಯ, ಒಬ್ಬ ತನ್ನ ಯುಕ್ತಾಯುಕ್ತ ವಿವೇಚನೆಯನ್ನು ಅನುಸರಿಸುತ್ತಾನೋ ಇಲ್ಲವೋ, ಅವನ ಅಂತರಾತ್ಮವನ್ನು ಯಾವುದು ಬೆಳೆಸುವುದಿಲ್ಲವೋ ಅದಕ್ಕೆ ಮೌಲ್ಯವೆಂದು ಹೇಳಲಾಗುವುದಿಲ್ಲ. ಈ ಕೆಳಗಿನ ಅಂಗಗಳು ಭಾರತೀಯ ಮೌಲ್ಯಗಳ ಆಧಾರವನ್ನು ಒಳಗೊಂಡಿರುತ್ತದೆ.

1) ಬದುಕಿನಲ್ಲಿ ಶ್ರದ್ಧೆ

2) ಬುದ್ಧಿಶಕ್ತಿಯ ಪ್ರತಿಫಲನ

3) ಪ್ರಕೃತಿಯ ಬಗ್ಗೆ ಬೆಳಕು ಚೆಲ್ಲುವುದು

4) ಸಮಾಜಕಲ್ಯಾಣ ಕಾರ್ಯಗಳು

5) ವಯಕ್ತಿಯ ಉದಾತ್ತತೆ ಅಥವಾ ಆಂತರಿಕ ವಿಕಾಸ

ವಿಶಾಲವಾದ ದೃಷ್ಟಿಕೋನದಲ್ಲಿ ಮೌಲ್ಯಗಳ ಬಗ್ಗೆ ಜ್ಞಾನಕ್ಕೋಸ್ಕರ ಅವುಗಳನ್ನು ವಿಭಿನ್ನ, ಹಂತವಾಗಿ ವಿಂಗಡಿಸಿಕೊಳ್ಳಬಹುದು. ದೈಹಿಕ ಮೌಲ್ಯಗಳು, ಮಾನಸಿಕ ಮೌಲ್ಯಗಳು, ಆರ್ಥಿಕ ಮೌಲ್ಯಗಳು, ನೈತಿಕ ಮೌಲ್ಯಗಳು, ಸಾಮಾಜಿಕ ಮೌಲ್ಯಗಳು, ಆಧ್ಯಾತ್ಮಿಕ ಮೌಲ್ಯಗಳು ಮತ್ತು ಸದಭಿರುಚಿಗೆ ಕಾರಣವಾದ ಮೌಲ್ಯಗಳು. ದೈಹಿಕ ಮೌಲ್ಯಗಳು ಸುದೃಢವಾದ ದೇಹವನ್ನು ಕೇಂದ್ರೀಕರಿಸುತ್ತದೆ. ಅದರ ಅವಿಭ್ಯಾಜ್ಯ ಅಂಗಗಳೆಂದರೆ ಆರೋಗ್ಯಕರ, ದೃಢ ಹಾಗೂ ಯಥೋಚಿತ ಮಾತುಗಳು, ವಯಸ್ಸಿಗನುಗುಣವಾದ ಕಾಂತಿಯುತವಾದ ಜಾತಿ ಅಥವಾ ವೃತ್ತಿ. ಮಾನಸಿಕ ಮೌಲ್ಯಗಳೆಂದರೆ ಆತ್ಮಶಕ್ತಿ , ತನ್ನಲ್ಲಿ ನಂಬಿಕೆಯಿಡುವುದು, ಗಾಂಭೀರ್ಯದಿಂದ ಕೂಡಿದ ವರ್ತನೆ, ಸ್ವಾವಲಂಬನೆ, ಭಯವಿಲ್ಲದಿರುವಿಕೆ, ತಾಳ್ಮೆ, ತೀರ್ಮಾನಿಸುವುದು, ಅನುಕಂಪ, ಮುಂತಾದವು. ಆರ್ಥಿಕ ಮೌಲ್ಯಗಳೆಂದರೆ ಹಣವನ್ನು ಸನ್ಮಾರ್ಗದಿಂದ ಗಳಿಸುವುದು. ಅದನ್ನು ಒಳ್ಳೆಯ ಕಾರ್ಯಗಳಿಗೆ ವಿನಿಯೋಗಿಸುವುದು, ದುಂದುವೆಚ್ಚ ಮಾಡದಿರುವುದು, ದಾನ ಕ್ರಿಯೆಗಳಿಗೆ ಧಾರಾಳವಾಗಿ ನೀಡುವುದು ಮತ್ತು ಸಂಗ್ರಹ ಮಾಡಿ ಗಂಟುಕಟ್ಟಿಟ್ಟಿರುವುದಲ್ಲ. ನೈತಿಕತೆಯನ್ನು ಪ್ರತಿಪಾದಿಸುವ ಗ್ರಂಥಗಳು ಹಣದ ಮೂರು ಅವಸ್ಥೆಗಳನ್ನು ಪ್ರತಿಪಾದಿಸುತ್ತದೆ – ದಾನ, ಭೋಗ ಅಥವಾ ನಾಶವೆಂದು. ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ. ನೈತಿಕ ಮೌಲ್ಯಗಳು ಕರ್ತವ್ಯಪ್ರಜ್ಞೆ, ಪ್ರಾಮಾಣಿಕತೆ, ಸಮರ್ಪಣಾಭಾವ, ತ್ಯಾಗ, ದಾನಪ್ರವೃತ್ತಿ, ಸೇವಾಭಾವನೆ, ಸನ್ನಡತೆ, ನಾಗರೀಕ ವ್ಯವಸ್ಥೆ ಸತ್ಯದಲ್ಲಿ ನಂಬಿಕೆ, ಕಾನೂನಿನ ಪದ್ಧತಿಯಲ್ಲಿ ಗೌರವ, ಇತ್ಯಾದಿ. ಸಾಮಾಜಿಕ ಮೌಲ್ಯಗಳು ಸ್ನೇಹಪರ ಜೀವನ, ಕರುಣೆ, ಸಹಾಯಪ್ರವೃತ್ತಿ , ಮಾನವೀಯತೆ, ಇತ್ಯಾದಿಗಳು. ರಾಜಕೀಯ ಮೌಲ್ಯಗಳು ದೇಶಪ್ರೇಮ, ಶಿಸ್ತು , ವಿಜಯೋತ್ಸವ. ಆಧ್ಯಾತ್ಮಿಕ ಮೌಲ್ಯಗಳೆಂದರೆ ಭಗವಂತನಲ್ಲಿ ಶ್ರದ್ಧೆ, ಭಗವದ್‌ಭಕ್ತಿ , ಮಂತ್ರಪಠನ, ಭಗವಂತನನ್ನು ಉದಾತ್ತೀಕರಿಸುವುದು, ಪ್ರಾರ್ಥನೆ, ಮೋಕ್ಷಮಾರ್ಗಾನ್ವೇಷಣೆ, ಆತ್ಮಸಾಕ್ಷಾತ್ಕಾರ, ಇತ್ಯಾದಿ. ಬೌದ್ಧಿಕ ಮೌಲ್ಯಗಳೆಂದರೆ

ಕ್ರಿಯಾತ್ಮಕ ಪ್ರವೃತ್ತಿ, ವಿವೇಚನೆ. ಸೌಂದರ್ಯಕ್ಕೆ ಸಂಬಂಧಿಸಿದ ಮೌಲ್ಯಗಳೆಂದರೆ ಕಲಾಪ್ರೇಮ, ಪ್ರಕೃತಿಪ್ರೇಮ, ಮಾನವೀಯ ಸೌಂದರ್ಯ, ಪ್ರೀತಿ ಇತ್ಯಾದಿ.

ಈ ವಿಭಜನೆ ಅಥವಾ ವಿಭಾಗ ಮೌಲ್ಯಗಳು ಪರಸ್ಪರಾಶ್ರಯವಲ್ಲವೆಂದು ಭಾವಿಸಬಾರದು. ಇವೆಲ್ಲವೂ ಸಹ ಜೀವನ ಮೌಲ್ಯಗಳು ಎಂಬ ಹೆಮ್ಮರದ ಶಾಖೋಪಶಾಖೆಗಳೇ ಆಗಿದೆ. ನಾವಿರುವ ಪರಿಸರದಿಂದಲೇ ಈ ಮೌಲ್ಯಗಳನ್ನು ಗುರುತಿಸುವುದು ಲೇಸು. ಎರಡನೆಯ ಮುಖ್ಯ ಪ್ರಶ್ನೆಯೆಂದರೆ, ಯಾವುದಾದರೂ ಎರಡು ಮೌಲ್ಯಗಳ ನಡುವೆ ಘರ್ಷಣೆಯಾದರೆ, ಯಾವುದು ಶ್ರೇಷ್ಠ ಎಂದು ಹೇಗೆ ನಿರ್ಣಯಿಸುವುದು? ಇದನ್ನು ಬಗೆಹರಿಸಲು ಒಂದು ಪ್ರಸಿದ್ಧವಾದ ಉದಾಹರಣೆಯಿದೆ. ಯಾವಾಗ ಪವಿತ್ರವಾದ ಹಸುವು, ಕಸಾಯಿಯವನಿಂದ ತಪ್ಪಿಸಿಕೊಂಡು ಬಂದು ಇರುವಾಗ ಆ ಕಸಾಯಿ ಅಂಗಡಿಯವನು ಹಸುವು ಯಾವ ಕಡೆ ಹೋಯಿತೆಂದರೆ ನಿಮ್ಮ ಉತ್ತರವೇನಿರಬೇಕು? ಸತ್ಯ ನುಡಿದಿದ್ದೇ ಆದರೆ, ಆ ಕಸಾಯಿಯವನು ಹಸುವನ್ನು ಕೊಲ್ಲುತ್ತಾನೆ. ಇದು ಹಿಂದೂ-ಮುಸ್ಲಿಂ ಘರ್ಷಣೆಗೆ ಬುನಾದಿಯಾಗುತ್ತದೆ. ಅನೇಕರ ಪ್ರಾಣಹಾನಿಯೂ ಆಗುತ್ತದೆ. ಒಂದು ವೇಳೆ ಆ ಕಟುಕನಿಗೆ ಮತ್ತೊಂದು ದಿಕ್ಕನ್ನು ತೋರಿಸಿದರೆ ಅದು ಸುಳ್ಳಾಗುತ್ತದೆ. ನಮ್ಮ ಶಾಸ್ತ್ರದಲ್ಲಿ ಸತ್ಯವನ್ನೇ ನುಡಿಯಬೇಕೆಂದು ಹೇಳಿದೆ. ಸತ್ಯಂ ವದ.

ಭಾರತೀಯ ವಿದ್ವಾಂಸರು ಎರಡು ಮೌಲ್ಯಗಳ ನಡುವೆ ಘರ್ಷಣೆಯಾದಾಗ ಅದಕ್ಕೆ ಉತ್ತರವನ್ನು ಸೂಚಿಸಿದ್ದಾರೆ - ಶೃತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ.

ಘರ್ಷಣೆಯ ಪ್ರಸಂಗ ಬಂದರೆ. ಮೊದಲಿಗೆ ವೇದವನ್ನಾಶ್ರಯಿಸಬೇಕು. ಅನಂತರ ಸ್ಮೃತಿ, ತದನಂತರ ಸದಾಚಾರ. ಈ ಮೂರೂ ಸಹ ವಿಫಲವಾದರೆ ಅವರು ಅಂತಃಸಾಕ್ಷಿಗೇ ಮೊರೆ ಹೋಗಬೇಕು.

ಮತ್ತೊಂದೆಡೆ ಹೀಗೆ ಹೇಳಲ್ಪಟ್ಟಿದೆ - ಮಹಾಜನೋ ಯೇನ ಗತಃ ಸ ಪಂಥಾಃ - ಮಹಾತ್ಮರು ಸಂಚರಿಸಿದ ಮಾರ್ಗವೇ ಅನುಕರಣೀಯ. ಆದ್ದರಿಂದ ಮಹಾತ್ಮರು ನಡೆದ ಹಾಗೂ ಅವರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಮೌಲ್ಯಗಳಿಗೇ ಬೆಲೆಕೊಡಬೇಕು. ಅವರಿಂದ ಅಳವಡಿಸಿಕೊಂಡ ಮೌಲ್ಯಗಳು ಪರಸ್ಪರ ವಿರುದ್ಧ ಅಂಶಗಳನ್ನು ಪರಿಹರಿಸಲು ಸಹಾಯಕವಾಗುತ್ತದೆ.

ವಿಭಿನ್ನ ವರ್ಗಗಳವರಿಗೆ ವಿಭಿನ್ನ ಮೌಲ್ಯಗಳನ್ನು ಉಪನಿಷತ್ತು ಬೋಧಿಸುತ್ತದೆಂಬುದಕ್ಕೆ ಈ ಕೆಳಗಿನ ಉದಾಹರಣೆಯೇ ಸಾಕ್ಷಿ. ಪ್ರಜಾಪತಿಗೆ ಮೂರು ವಿಧವಾದ ಮಕ್ಕಳಿದ್ದರು. ದೇವತೆಗಳು, ಮಾನವರು ಮತ್ತು ರಾಕ್ಷಸರು. ಅವರು ಗುರುಕುಲದಲ್ಲಿ ಶಿಷ್ಯವೃತ್ತಿಯಿಂದಿದ್ದರು. ಅವರು ವಿದ್ಯಾಭ್ಯಾಸ ಪೂರೈಸಿ ಹೇಳಿದರು - ನಮಗೊಂದು ಧರ್ಮೋಪದೇಶ ನೀಡಿ. ಅದಕ್ಕೆ ಪ್ರತಿಯಾಗಿ ಅವನು ''ದ'' ಎಂಬ ಏಕಾಕ್ಷರ ನುಡಿದನು ಮತ್ತು ಅವರು ಅದನ್ನು ಹೇಗೆ ಅರ್ಥಮಾಡಿಕೊಂಡರೆಂದು ಕೇಳಿದನು. ಅದಕ್ಕೆ ದೇವತೆಗಳು

ದ ಎಂದರೆ ದಾಮ್ಯತಾ ಎಂದೂ ನಿಗ್ರಹಿಸಿ ಎಂದೂ ಅರ್ಥವೆಂದು ಹೇಳಿದರು. ಮಾನವರ ''ದ'' ಎಂಬ ಅಕ್ಷರಕ್ಕೆ ''ದತ್ತ'' - ದಾನಮಾಡಿ ಎಂದರ್ಥವೆಂದರು. ಆದರೆ ರಾಕ್ಷಸರು ''ದ'' ಎಂಬ ಅಕ್ಷರಕ್ಕೆ ''ದಯಧ್ವಂ'' - ಅನುಕಂಪೆಯುಳ್ಳವರಾಗಿರಿ ಎಂದು ಉತ್ತರಿಸಿದರು. ಅವರ ಉತ್ತರಗಳು ಪ್ರಜಾಪತಿಗೆ ಸಂತೋಷವನ್ನುಂಟುಮಾಡಿತು. ಅವರು ಈ ಏಕಾಕ್ಷರದ ಪ್ರಹೇಳಿಕೆಯನ್ನು ಸರಿಯಾಗಿ ಮನಗಂಡರೆಂದು ಭಾವಿಸಿದರು. ಆಗ ಅವನು ಅವರಿಗೆ ಬೋಧಿಸಿದನು - ಮೋಡದ ಗುಡುಗು ದದದ ಎಂದು ಶಬ್ದ ಮಾಡಿದಾಗ ನಿಯಂತ್ರಣೆ, ದಾನ, ಅನುಕಂಪವನ್ನು ಬೋಧಿಸುವುದೆಂದು ಹೇಳಿದರು.

ಪ್ರಜಾಪತಿಯ ಮೂರು ಬಗೆಯ ಮಕ್ಕಳೂ ಸಹ ''ದ'' ಎಂಬ ಏಕಾಕ್ಷರವನ್ನು ತಮಗೆ ತೋರಿದಂತೆ ಅರ್ಥೈಸಿದರು. ತಮಗೆ ಎಲ್ಲವೂ ದೊರೆತಿರುವಂತಹ ದೇವತೆಗಳು ಆತ್ಮ ಸಂಯಮವನ್ನು ಕಾಪಾಡಿಕೊಳ್ಳಬೇಕು. ಮಾನವರು ದಾನಶೀಲರಾಗಬೇಕು ಸ್ವಾರ್ಥಿಗಳಾಗಬಾರದು ಮತ್ತು ತಮ್ಮಲ್ಲಿರುವುದನ್ನು ಬೇರೆಯವರಿಗೆ ಹಂಚಿ ಜೀವನ ಸುಗಮವಾಗಿ ಸಾಗುವಂತೆ ನೋಡಿಕೊಳ್ಳಬೇಕು. ರಾಕ್ಷಸರು ಸ್ವಾಭಾವಿಕವಾಗಿಯೇ ಕ್ರೂರಿಗಳಾಗಿರುವುದರಿಂದ ಅನುಕಂಪೆಯನ್ನು ಬೆಳೆಸಿಕೊಂಡು ಸಮಾಜ ಸುಸೂತ್ರವಾಗಿ ನಡೆಯಲು ಸಹಕರಿಸಬೇಕು. (ಬೃಹದಾರಣ್ಯಕೋಪನಿಷತ್ತು 5.2)

ಭಾರತೀಯ ಮೌಲ್ಯಗಳನ್ನು ಅರ್ಥಮಾಡಿಕೊಳ್ಳಲು ಮೂರು ದಿಕ್ಸೂಚಿಗಳಿವೆ :- ಆಧ್ಯಾತ್ಮಿಕ ತಳಹದಿ, ಸಾಮಾಜಿಕ ಅರಿವು ಹಾಗೂ ವಯಕ್ತಿಕ ನಡತೆ.

ತಪಸ್ಸಿನ ಫಲರೂಪವಾಗಿ ಬಲಿದಾನ, ಸೇವೆ, ಸಾಕ್ಷಾತ್ಕಾರದ ಹಾದಿಯಿಂದ ಭಾರತೀಯರ ಮನಸ್ಸು ಆಧ್ಯಾತ್ಮಿಕ ತಳಹದಿಯನ್ನು ಹೊಂದುವಂತಾಯಿತು. ನಮ್ಮ ರೀತಿನೀತಿಗಳು, ಧರ್ಮ, ಸಾಹಿತ್ಯ, ಕಲೆ, ಸಂಪ್ರದಾಯಗಳು ಆಧ್ಯಾತ್ಮದ ತಳಹದಿಯಿಂದಲೇ ರೂಪುಗೊಂಡಿದೆ. ಈ ಬಾಳೆಂಬ ಹೆಮ್ಮರ, ಅದರ ಶಾಖೆಗಳು, ಉಪಶಾಖೆಗಳು, ಎಲೆಗಳು, ಹೂವು, ಹಣ್ಣುಗಳೆಲ್ಲವೂ ಸಮರ್ಥವಾದ ತಳಹದಿಯಿಂದಲೇ ಪುಷ್ಟೀಕೃತವಾಗಿದೆ.

ಭಾರತೀಯ ಮೌಲ್ಯಗಳ ತಳಹದಿಯೆಂದರೆ ಅವ್ಯಾಕೃತ ತಳಹದಿ. ಅದೇ ವಿಶ್ವದ ಸೃಷ್ಟಿ! ಸ್ಥಿತಿ ಹಾಗೂ ಲಯಕರ್ತೃ. ಅದಕ್ಕೆ ಅನೇಕ ನಾಮರೂಪಗಳಿವೆ. ''ಏಕಂಸತ್ ವಿಪ್ರಾಬಹುಧಾ ವದಂತಿ''. ಅದು ಒಂದೇ ಆದರೂ ಬಲ್ಲವರು ಅದನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಜ್ಞಾನಿಗಳಾದ ಮುನಿಗಳು ಆ ವಸ್ತುವಿನ ಸ್ವರೂಪ ಸೌಂದರ್ಯ, ಗುಣಗಳ ಹಿನ್ನಲೆಯಲ್ಲಿ ಅದರ ಅನೇಕ ರೂಪಗಳನ್ನು ಕಾಣುತ್ತಾರೆ. ಭಾರತೀಯ ಮೌಲ್ಯಗಳ ಪ್ರಕಾರ. ಈ ಶಕ್ತಿಯೇ ಸರ್ವಾಂತರ್ಯಾಮಿಯಾದ ಸೃಷ್ಟಿ ಹಾಗೂ ಸ್ಥಿತಿಕರ್ತನು. ಅದು ಅಷ್ಟೆಲ್ಲಾ ಆಗಿದ್ದರೂ ಸಹ ಯಾವ ಇಂದ್ರಿಯದಿಂದಲೂ ಅದನ್ನು ಗ್ರಹಿಸಲಾಗುವುದಿಲ್ಲ. ಅದು ನಾಲಿಗೆಗೆ ಸಿಗದಿರುವುದು ಮಾತ್ರವಲ್ಲದೆ ಮನಸ್ಸಿಗೂ ನಿಲುಕುವುದಿಲ್ಲ. ಋಷಿಗಳು, ಮುನಿಗಳು, ತಪಸ್ವಿಗಳು ಅದು ಕೇವಲ ಸಾಕ್ಷಾತ್ಕಾರಗೊಳಿಸತಕ್ಕದ್ದೆಂದು ಭಾವಿಸಿದ್ದಾರೆ. ಭಾರತೀಯ ಮೌಲ್ಯಗಳಂತೆ ಯಾರು ಹಣವಂತರೋ, ಯಾರು ಬುದ್ಧಿವಂತರೋ,

ಯಾರ ಬಳಿ ಸಂಪತ್ತಿದೆಯೋ ಅವರು ಮಾತ್ರ ದೊಡ್ಡವರಲ್ಲ. ಯಾರು ಭಗವತ್ ಸಾಕ್ಷಾತ್ಕಾರ ಹೊಂದಿರುವರೋ ಅಥವಾ ಸಾಕ್ಷಾತ್ಕಾರದ ಮಾರ್ಗದಲ್ಲಿರುವರೋ ಅವರೇ ಶ್ರೇಷ್ಠರು. ಆಧುನಿಕ ವಿಜ್ಞಾನಿಗಳು ಕಾರಣಕಾರ್ಯ ಸಂಬಂಧಯುಕ್ತವಾದ ಒಂದು ವಾದವನ್ನು ಮುಂದೊಡ್ಡುತ್ತಾರೆ. ಪ್ರತಿಯೊಂದು ಕಾರ್ಯಕ್ಕೂ ಕಾರಣವಿದೆ. ಸಮಗ್ರ ವಿಶ್ವವೇ ಚಲನಾತ್ಮಕವಾಗಿದೆ. ಯಾವುದೇ ಒಂದು ಪದ್ಧತಿಯಂತೆ ಚಲನೆ ಇದ್ದರೆ ಆ ಚಲನಶಕ್ತಿಗೆ ಕಾರಣವಾದುದೊಂದು ಇರಬೇಕು. ಅವ್ಯಾಕೃತವಾದುದೇ ಅದು. ಅದಕ್ಕೆ ಅನಂತ ನಾಮಗಳಿದೆ. ಸಮಗ್ರ ವಿಶ್ವವೂ ಚಲನಾತ್ಮಕವಾಗಿದೆ. ಕೆಲವು ನಿಯಮಗಳಿಂದ ಕೂಡಿರುವುದಾಗಿದೆ. ಈ ಅನಾದಿ ಕಾಲದಿಂದ ಬಂದು ಗೌರವಿಸಲ್ಪಡುವ ನಿಯಮಗಳಿಗೆ "ಋತ" ಎಂದು ಹೆಸರು. ಇವು ಎಲ್ಲಾ ವ್ಯಾಕೃತ ಹಾಗೂ ಅವ್ಯಾಕೃತಗಳನ್ನು ತಮ್ಮ ಅಧೀನದಲ್ಲಿರಿಸುತ್ತದೆ. ಸೂರ್ಯ, ಚಂದ್ರ, ಗ್ರಹಗಳು, ನಕ್ಷತ್ರಗಳು, ರಾತ್ರಿ, ಹಗಲು, ಋತುಗಳು - ಚಳಿಗಾಲ ಮತ್ತು ಬೇಸಿಗೆಕಾಲ - ಸಸ್ಯಸಮೃದ್ಧಿ, ಹೂ ಹಾಗೂ ಹಣ್ಣಾಗಿ ಮಾರ್ಪಡುವಿಕೆ, ಅವುಗಳ ಅವನತಿ, ಹುಟ್ಟು ಹಾಗೂ ಬಾಲ್ಯ, ಯೌವನ, ಮುಪ್ಪು ಮತ್ತು ಸಾವು - ಇವೆಲ್ಲವೂ ಒಂದೇ ಋತದ ವಿಭಿನ್ನ ಅಂಗಗಳು. ಈ ಋತದಲ್ಲಿ ಭಾರತೀಯರಿಗೆ ಅಪಾರವಾದ ನಂಬಿಕೆಯಿದೆ. ಅವರು ನೂರುವರ್ಷ ಬದುಕುವಂತೆ ಪ್ರಾರ್ಥನೆ ಸಲ್ಲಿಸುತ್ತಾರೆ. ಅವರು ಎಂದೆಂದೂ ಪ್ರಕೃತಿಯೊಡನೆ ಸಮತೋಲನ ಮಾಡಲು ಬಯಸುವವರೇ ಹೊರತು ಪ್ರಕೃತಿಯನ್ನು ಗೆಲ್ಲುವುದಕ್ಕಲ್ಲ. ಅವರು ಪ್ರಕೃತಿಯನ್ನು ಗೌರವಿಸುವುದು ಮಾತ್ರವಲ್ಲದೆ, ಪೂಜಿಸುತ್ತಾರೆ. ಅವರು ತಮ್ಮ ದೇಹದ ನಿತ್ಯತ್ವಕ್ಕೆ ಪ್ರಾರ್ಥನೆ ಸಲ್ಲಿಸುವುದಿಲ್ಲ ಏಕೆಂದರೆ ಸಾವೆಂಬುದು ಸಹಜವು. ಪ್ರಕೃತಿಯ ನಿಯಮವನ್ನುಲ್ಲಂಘಿಸಿ ಅವರು ಶಾಂತಿ ಹಾಗೂ ಸಂಪದ್ಭರಿತ ಜೀವನ ಸಾಗಿಸುವೆವು ಎಂದು ನಂಬಿರಲಿಲ್ಲ.

ಮಾನವರು ಅವ್ಯಾಕೃತಾಂಶದ ಒಂದು ವಿಶಿಷ್ಟ ಭಾಗ, ಅವರು ಒಂದೇ ಅಸ್ತಿತ್ವದಿಂದ ಹುಟ್ಟಿ ಅದರಲ್ಲೇ ಲೀನವಾಗುವರು. ಭಾರತೀಯರು ಅಂಶಾಂಶಿಭಾವವನ್ನು ಒಪ್ಪುತ್ತಾರೆ. ಏಕೆಂದರೆ ಅವರು ಅಸ್ತಿತ್ವದ ಒಂದು ಭಾಗವೇ ಆಗಿರುತ್ತಾರೆ - ಅಗ್ನಿಸ್ಫುಲಿಂಗವತ್ ಬೆಂಕಿಯ ಒಂದು ಕಿಡಿಯಂತೆ, ಜಲಬಿಂದುವತ್ - ಅಥವಾ ನೀರಿನ ಒಂದು ಬಿಂದುವಿನಂತೆ ಅಥವಾ ಜಲತರಂಗವತ್ ಅಥವಾ ನೀರಿನ ಒಂದು ಅಲೆಯಂತೆ. ಬೆಂಕಿಯ ಕಿಡಿಯಲ್ಲಿ ಬೆಂಕಿಯ ಎಲ್ಲಾ ಗುಣಗಳೂ ಇದೆ. ಕೇವಲ ಪ್ರಮಾಣದಲ್ಲಿ ಮಾತ್ರ ಕಡಿಮೆಯಿದೆ. ಯಾವಾಗ ಕಿಡಿಯು ಅದಕ್ಕೆ ಉಪೋದ್ಬಲಕ ಸಾಮಾಗ್ರಿಯ ನೆರವು ದೊರೆಯುವುದೋ ಆಗ ಅದೇ ಬೆಂಕಿಯಾಗುತ್ತದೆ. ಇದೇ ಕೊನೆಯ ಗುರಿ. ಈ ಮಟ್ಟದಲ್ಲಿರುವ ಮಾನವನು ದೈವತ್ವದತ್ತ ಸಾಗುತ್ತಾ ದೈವತ್ವವನ್ನು ಗಳಿಸುತ್ತಾನೆ. ಪಾಶ್ಚಾತ್ಯ ವೇದಾಂತದ ನಿಲುವಾದ ಮಾನವ ಒಳ್ಳೆಯವನೂ ಅಲ್ಲ ಕೆಟ್ಟವನೂ ಅಲ್ಲ - ನಾವು ನಮಗೆ ಇಷ್ಟಬಂದಂತೆ ಅವನನ್ನು ಮಾರ್ಪಾಡಿಸಬಹುದು ಎಂಬುದು ಭಾರತೀಯ ನಿಲುವನ್ನು ಸಮರ್ಥಿಸುವುದಿಲ್ಲ. ಈ ಚಿಂತನೆಯೇ ಭಾರತೀಯ ವೇದಾಂತಕ್ಕೆ ಅಡಿಪಾಯವು. ವೇದಾಂತದಿಂದ ಭಾರತೀಯರ ಗುರಿ ಕೇವಲ ಇಹಲೋಕದ ಮುನ್ನಡೆ ಸಾಧಿಸುವುದು ಮಾತ್ರವಲ್ಲ ಅದು ಅವನ ಮೇಲೆ

ಅಸಂಖ್ಯಾತ ಒಳಿತುಗಳನ್ನು ಸುರಿಸಬಹುದು. ಆದರೆ ಶಾಂತಿ ಹಾಗೂ ಶಾಶ್ವತ ಸುಖವಲ್ಲ. ಅದರ ಮೂಲವೇ ಧರ್ಮವಾಗಿರುತ್ತದೆ. ಅದೇ ಭಾರತೀಯ ಜೀವನದ ಪ್ರಮುಖ ಅಂಗವೂ ಸಹ ಆಗಿರುತ್ತದೆ. ಧರ್ಮವೆಂಬುದೇ ಯುಕ್ತಾಯುಕ್ತ ವಿಮೋಚನೆಯ ಶಕ್ತಿಯಾಗಿದ್ದು ಎಲ್ಲರನ್ನೂ ಸತ್ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಉತ್ತೇಜಿಸುತ್ತದೆ. ವೇದದ ಅಭ್ಯುದಯವೇ ನಿಃಶ್ರೇಯಸ್. ಧರ್ಮವೇ ಎಲ್ಲಾ ಮೌಲ್ಯಗಳ ತಳಹದಿಯ ಮೇಲೆ ನಿಂತಿದೆ. ಅದರ ವಿಸ್ತೃತರೂಪವೇ ಜೀವನ-ಮೌಲ್ಯಗಳು. ಜೀವನವನ್ನು ಸುಗಮವಾಗಿ ಸಾಗಿಸಲು ಅದು ನೆರವಾಗುತ್ತದೆ. ಜ್ಞಾನ, ಭಕ್ತಿ ಹಾಗೂ ಕರ್ಮವೇ ಧರ್ಮದ ಸೇತುವೆ. ಇದನ್ನು ಸಮತೋಲನವಾಗಿ ಮಾನವರು ತಮ್ಮ ಶಕ್ಯಾನುಸಾರವಾಗಿ ಆಚರಿಸುತ್ತಾರೆ. ಜ್ಞಾನಾಶ್ರಯವಾದ ಭಕ್ತಿಯು ಜೀವನದ ಪರಮೋತ್ಕೃಷ್ಟ ಮೌಲ್ಯ ಎಂದು ಪರಿಗಣಿತವಾಗಿದೆ. ಭಕ್ತಿಯು ಕುರುಡು ಭಕ್ತಿಯಾಗದಿರಲು ಜ್ಞಾನದ ಅವಶ್ಯಕತೆಯಿದೆ. ನಾವು ಅಂತಹ ಸಂದರ್ಭಗಳಲ್ಲಿ ನಿಷ್ಕ್ರಿಯರಾಗಿರಲು ಸಾಧ್ಯವಿಲ್ಲ. ನಾವು ನಮ್ಮನ್ನು ಹೇಗೆ ಅದರೊಂದಿಗೆ ತೊಡಗಿಸಿಕೊಳ್ಳುವೆವು ಎಂಬಲ್ಲಿ ನಮ್ಮ ಜಾಣ್ಮೆಯಿದೆ. ಜ್ಞಾನ, ಭಕ್ತಿ, ಕರ್ಮಗಳ ಸಮೂಹ ಒಳ್ಳೆಯ ಕಾರ್ಯವನ್ನು ಉಂಟುಮಾಡುತ್ತದೆ. ಅವುಗಳ ಸರಾಸರಿ ಕಾಲಕ್ಕನುಗುಣವಾಗಿ ವ್ಯತ್ಯಾಸವಾಗಬಹುದು, ಆದರೆ ಅದರ ಗುರಿಯಾದ ಮೋಕ್ಷ ಮಾತ್ರ ವ್ಯತ್ಯಾಸ ಹೊಂದುವುದಿಲ್ಲ. ಇದೂ ಸಹ ಅನೇಕ ವಿಧವಾಗಿದೆ: ಪ್ರಾಪಂಚಿಕ ದುಃಖಗಳಿಂದ ಬಿಡುಗಡೆ, ಈ ಲೋಕದ ಜೀವನದಿಂದ ಬಿಡುಗಡೆ, ದೇವರಲ್ಲಿ ಹಾಗೂ ಆತ್ಮನಲ್ಲಿ ಲಯ ಇತ್ಯಾದಿಗಳು. ಭಾರತೀಯ ಜೀವನಾದರ್ಶಗಳು ನಾಲ್ಕು - ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳು. ಧರ್ಮವು ಅರ್ಥ ಕಾಮಗಳಿಗಿಂತಲೂ ಉತ್ಕೃಷ್ಟವಾದುದು. ಆದರೆ ಧರ್ಮಮಾರ್ಗದಿಂದ ಮೋಕ್ಷ ಪ್ರಾಪ್ತಿಯೇ ಪರಮಗುರಿಯು.

ಯಾರಾದರೂ ಭಾರತೀಯ ಜೀವನದ ಬೆನ್ನೆಲುಬು ಯಾವುದು ಎಂದು ಪ್ರಶ್ನಿಸಿದರೆ, ಅದಕ್ಕೆ ಉತ್ತರವೆಂದರೆ ಇಹಭೋಗದ ಸುಖದಿಂದ ದೂರವಿರುವುದೇ ಆಗಿದೆ. ಸಂಪೂರ್ಣವಾದ ಇರುವಿಕೆಯಿಂದ "ಭುಂಜೀಥಾಃ" ಭೋಗಿಸುವುದರಿಂದ (1) ತನ್ನನ್ನು ತಾನು ತೊಡಗಿಸಿಕೊಳ್ಳದೆ "ತ್ಯಕ್ತೇನ" ಈಶಾವಾಸ್ಯೋಪನಿಷತ್ ಪ್ರತಿಪಾದಿಸುವಂತೆ. ಹಣವು ಮಾನವನ ದಿನನಿತ್ಯದ ಬೇಡಿಕೆಗಳಿಗೆ ಅತ್ಯಂತ ಮುಖ್ಯವಾದುದು ಮತ್ತು ಅದನ್ನು ಕಠಿಣಶ್ರಮದಿಂದಲೇ ಗಳಿಸಬೇಕು. ಸಾಮಾನ್ಯ ಮಾನವನಿಗೆ ಹಣಗಳಿಸುವ ಬಯಕೆಯಿರುತ್ತದೆ. ಆದರೆ ಇದನ್ನು ಧರ್ಮ ಮಾರ್ಗದಿಂದ ನಿಯಂತ್ರಿಸಿಕೊಳ್ಳಬೇಕು. ಅಂದರೆ ಸನ್ಮಾರ್ಗದಿಂದಲೇ ಹಣವನ್ನು ಗಳಿಸಬೇಕು. ಅದರಂತೆಯೇ ಮಾನವನ ಆಸೆಗಳೂ ಅಸಂಖ್ಯಾತವಾದುದು. ನಾವು ನಮ್ಮ ಆಸೆಗಳನ್ನು ಪೂರೈಸಿಕೊಳ್ಳಲು ಕುಮಾರ್ಗಕ್ಕಿಳಿಯಬಾರದು, ಮತ್ತು ಅದಕ್ಕೆ ಸರಿಯಾದ ದಿಕ್ಸೂಚಿಯನ್ನೂ ತೋರಬೇಕಾಗುತ್ತದೆ. ಈ ಅಂಶವನ್ನು ಉಪನಿಷತ್ತು ಅತ್ಯಂತ ಮಾರ್ಮಿಕವಾಗಿ ಚಿತ್ರಿಸುತ್ತದೆ. ಈ ಜೀವನ ಎನ್ನುವುದು ಒಂದು ರಥದಂತೆ, ಇಂದ್ರಿಯಗಳೇ ಕುದುರೆಗಳು. ಮನಸ್ಸೇ ಹಗ್ಗ ಬುದ್ಧಿಯೇ ರಥಿ, ಧರ್ಮ ಅದನ್ನು ಹಿಡಿತದಲ್ಲಿಟ್ಟುಕೊಂಡರೆ ಅದು ಅವನನ್ನು ಮೋಕ್ಷದತ್ತ

ಕೊಂಡೊಯ್ಯುತ್ತದೆ. ಒಂದು ವೇಳೆ ನಿಯಂತ್ರಣ ಸಡಿಲಗೊಂಡರೆ ಅವು ದಿಕ್ಕಾಪಾಲಾಗಿ ಓಡುತ್ತದೆ. ಮಾನವನ ಸಮಗ್ರ ಜೀವಿತವನ್ನು ಇದಕ್ಕಿಂತಲೂ ಚೆನ್ನಾಗಿ ವಿವರಿಸಲಾಗುವುದಿಲ್ಲ.

ಭಾರತೀಯ ಮೌಲ್ಯಗಳ ಮತ್ತೊಂದು ಮುಖ್ಯ ಕೊಂಡಿ ಎಂದರೆ ಕರ್ಮ. ಪ್ರತಿಯೊಬ್ಬರೂ ಸಹ ತಾನು ಮಾಡಿದ ಕೆಲಸದ ಫಲವನ್ನು ಅನುಭವಿಸಿಯೇ ತೀರಿಸಬೇಕು. ಕರ್ಮ ಮೂರು ವಿಧ.

ಒಟ್ಟಿನಲ್ಲಿ ಹೇಳುವುದಾದರೆ, ಭಾರತೀಯ ಮೌಲ್ಯಗಳ ಆವಿರ್ಭಾವಕ್ಕೆ ಇದೇ ಮೂಲಭೂತವಾದ ವೇದಾಂತದ ನೆಲೆ. ನಮ್ಮ ಸಾಂಸ್ಕೃತಿಕ ಬೆಳವಣಿಗೆಯ ಸುದೀರ್ಘ ಪರಂಪರೆಯಲ್ಲಿ ಕೆಲವು ತಿರಸ್ಕಾರಗಳು ಹಾಗೂ ಅಪವಾದಗಳಿವೆ. ಹಾಗಿದ್ದಾಗ್ಯೂ ಸಹ, ಈ ಮೌಲ್ಯಗಳು ಪ್ರಮುಖವಾಗಿ ಭಾರತೀಯ ಜೀವನಶೈಲಿಗೆ ಸಹಕಾರಿಯಾಗಿದೆ.

ಭಾರತದಲ್ಲಿ ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ಬಹಳ ಹಿಂದಿನಿಂದಲೂ ಪ್ರಯತ್ನಗಳು ನಡೆದಿದ್ದವು. ಆಶ್ರಮಗಳು ಇದಕ್ಕೆ ರೂಪುರೇಷೆಗಳನ್ನು ನೀಡುತ್ತದೆ. ಅದಿಲ್ಲದೆ ನಮ್ಮ ಸಮಾಜದ ಸ್ಥಿರತೆಯು ಆಘಾತಕ್ಕೀಡಾಗುತ್ತದೆ. ಮಾನವೀಯ ಸಮಾಜವನ್ನು ತೆಗೆದುಕೊಂಡರೆ ಅದಕ್ಕೆ ವಿಶ್ವವ್ಯಾಪಿಯಾದ ದೃಷ್ಟಿಯಿದೆ.

ಮೊದಲ 25 ವರ್ಷಗಳು ಮಗುವಿನ ಜೀವಿತದಲ್ಲಿ ಅತ್ಯಂತ ಪ್ರಮುಖವಾಗಿದ್ದು ಅವನ ದೇಹದಾರ್ಢ್ಯ, ತ್ಯಾಗ, ಮನಸ್ಸು, ಬುದ್ಧಿ ಹಾಗೂ ಆತ್ಮವಿಕಾಸಕ್ಕೆ ಕಾರಣವಾಗಿರುತ್ತದೆ. ಅವನ ಆತ್ಮೋದ್ಧಾರಕ್ಕಾಗಿ ಕೃತಿಯನ್ನು ಓದುವುದಲ್ಲದೆ, ಯಾವುದಾದರೂ ಕರಕುಶಲತೆಯನ್ನೂ ಜೀವನೋಪಾಯಕ್ಕಾಗಿ ಕಲಿಯಬೇಕಾಗಿತ್ತು. ತನ್ನ ಮಾನಸಿಕ ಶಕ್ತಿಯನ್ನು ನಿಗ್ರಹಿಸಲು ಹಾಗೂ ಬೆಳೆಸಿಕೊಳ್ಳಲು ಸೂಕ್ತ ಸಮಯವೂ ಆಗಿದ್ದಿತು. ತನ್ನ ಬೌದ್ಧಿಕ ಉನ್ನತಿಗಾಗಿ ವಿಶೇಷವಾಗಿ ವಿವೇಕ ಸಂಬಂಧವಾಗಿ ತನ್ನನ್ನು ತಾನೇ ವಿದ್ಯಾವಂತರಲ್ಲಿ, ಗುರುಗಳಲ್ಲಿ ಅನ್ವಯ ಪಡೆಯುವುದು ಅನಿವಾರ್ಯವಾಗುತ್ತಿತ್ತು. ಜ್ಞಾನದಾಹ ಹಾಗೂ ಸಂಶಯ ನಿವಾರಣೆಯೂ ಈ ಪರಿಸರದಲ್ಲಿ ನಡೆಯುತ್ತಿತ್ತು. ಈ ಸಮಾಜದಲ್ಲಿ ಸಾಮಾಜಿಕ ರೀತಿ ನೀತಿ ಹಾಗೂ ವ್ಯಕ್ತಿತ್ವ ನಿರ್ಮಾಣಕ್ಕೆ ಸಕಾಲ ಸಮಯವಾಗುತ್ತಿತ್ತು. ಒಟ್ಟಿನಲ್ಲಿ ಹೇಳುವುದಾದರೆ, ಆ ವಯಸ್ಸಿನಲ್ಲಿ ಕಲಿತದ್ದೇ ಅವನ ವ್ಯಕ್ತಿತ್ವವನ್ನು ರೂಪಿಸುತ್ತಿತ್ತು. ಹಿಂದಿನ ಕಾಲದಲ್ಲಿ ಈ ಮೌಲ್ಯಗಳನ್ನು ಕಲಿಯಲು ಗುರುಕುಲಗಳಿರುತ್ತಿತ್ತು. ಈಗಾದರೋ ಕೆಲವು ವಾಸಯುಕ್ತ ಶಾಲೆಗಳಲ್ಲಿ ಈ ಕೆಲಸವು ಕ್ರಿಯಾಶೀಲ ಚಟುವಟಿಕೆಗಳಿಂದ ಹಾಗೂ ಉತ್ತೇಜಕ ಕಾರ್ಯಕ್ರಮಗಳಿಂದ ನಡೆಯುತ್ತಿದೆ. ಬ್ರಹ್ಮಚರ್ಯಾಶ್ರಮದಲ್ಲಿ ವ್ಯಕ್ತಿತ್ವ ನಿರ್ಮಾಣವಾಗುವುದೆಂದು ಭಾರತೀಯರು ನಂಬಿದ್ದಾರೆ. ಗೃಹಸ್ಥಾಶ್ರಮವು ಜೀವನಕ್ಕಿರುವ ಒಂದು ಸದವಕಾಶ. ಅದು ಮೂರು ಧರ್ಮಗಳ ಆಗುಹೋಗುಗಳನ್ನು ನೋಡಿಕೊಳ್ಳುವುದು ಮಾತ್ರವಲ್ಲದೆ, ಜೀವನದ ಎಲ್ಲಾ ಅಂಶಗಳಿಗೂ ಸಹಕರಿಸುತ್ತದೆ. ಇಂತಹ ಗುರುತರವಾದ ಜವಾಬ್ದಾರಿಯನ್ನು 25ರಿಂದ 50 ರವರೆಗೆ ನಿಭಾಯಿಸಬೇಕಾಗುತ್ತದೆ. ಈ ಜೀವಿತಾವಧಿಯಲ್ಲಿ ಮಾನವ ಪ್ರಾಪಂಚಿಕ ಭೋಗಗಳನ್ನು ಅನುಭವಿಸುತ್ತಾನೆ. ಪ್ರಾಪಂಚಿಕ ಭೋಗಗಳನ್ನು ಸರಿಯಾದ ಮಾರ್ಗದಲ್ಲಿ

ಅನುಭವಿಸುವುದೇ ಅದರ ತಳಹದಿ. ಇಲ್ಲಿಂದ ಮುಂದೆ ಅವನ ಜೀವಿತದ ಮೂರನೆಯ ಹಂತ ಪ್ರಾರಂಭವಾಗುತ್ತದೆ. ಇಲ್ಲಿ ನಾವು ಸಾಂಸಾರಿಕ ಬಂಧನದಿಂದ ಮೇಲೆಬಂದು ಸಾಮಾಜಿಕ ಕರ್ತವ್ಯಗಳನ್ನು ಪ್ರೀತ್ಯಾದರಗಳಿಂದ ನಿಭಾಯಿಸುತ್ತೇವೆ.

ನಾವು ನಮ್ಮ ಅಂತಃ ಶಿಸ್ತು ಹಾಗೂ ತೃಪ್ತಿಯನ್ನು ಪ್ರಾಯೋಗಿಕವಾಗಿ ಸಾಬೀತುಪಡಿಸಬೇಕು. ನಾವು ಬೇರೆಯವರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅನ್ಯರ ಕುಂದುಕೊರತೆಗಳನ್ನು ನೀಗಿಸಿ, ಮನೋಭಾವದಿಂದ ತೋರಿಸಿ ನಾವು ನಮ್ಮ ಸೇವಾಭಾವನೆ ತೋರಿಸಬೇಕು. ಇದು ಮಾನವನ ಧ್ಯೇಯವನ್ನು ಉದಾತ್ತೀಕರಿಸುವುದು ಮಾತ್ರವಲ್ಲದೆ ಮನಸ್ಸನ್ನು ಪರಿಶುದ್ಧಗೊಳಿಸುತ್ತದೆ. ಸಕ್ರಿಯ ಪ್ರಾಪಂಚಿಕ ವ್ಯವಹಾರಗಳಿಂದ ಅನಾಸಕ್ತಿಯೊಡನೆ ನಮ್ಮನ್ನು ಅದು ಕರೆದೊಯ್ಯುತ್ತದೆ. ಬೇರೆಯವರ ಒಳಿತು ಹಾಗೂ ತನ್ನ ಆತ್ಮೋನ್ನತಿಯು ಜೀವನವನ್ನು ಸಫಲವಾಗಿಸುತ್ತದೆ. ಸನ್ಯಾಸಾಶ್ರಮವು ಮಾನವನ ನಾಲ್ಕನೇ ಹಂತ ಹಾಗೂ ಕೊನೆಯ ಆಶ್ರಮ. ಅಲ್ಲಿ ಅವನು ಪ್ರಾಪಂಚಿಕ ಸುಖಗಳಲ್ಲಿ ಅನಾಸಕ್ತನಾಗಿದ್ದು ಆತ್ಮನೊಡನೆ ನೇರವಾದ ಸಂಪರ್ಕವನ್ನಿಟ್ಟುಕೊಳ್ಳಬೇಕು. ಅವನು ಮಕ್ಕಳು, ಹಣ ಹಾಗೂ ಪ್ರಸಿದ್ಧಿಯಿಂದ ಮೇಲೇರಬೇಕು. ಮಾನವನಿಗೆ ಸಹಜವಾಗಿಯೇ ಪ್ರಸಿದ್ಧಿಯೆಡೆ ಒಲವಿರುತ್ತದೆ. ಅವನು ಅದರಿಂದ ಮೇಲೇಳದಿದ್ದರೆ ಅವನು ಪ್ರಸಿದ್ಧಿಗೋಸ್ಕರ ಹಾತೊರೆಯದೇ ಇರುವಂತಾಗುವುದಿಲ್ಲ. ಅನಾಸಕ್ತಿ ಯೋಗ ಎಷ್ಟು ನೇರ ಆದರೆ ಕಷ್ಟ, ಸುಲಭ ಆದರೆ ಸಹಜ. ಯಾರಾದರೂ ತಮ್ಮ ಜೀವನದ ಪ್ರಾರಂಭ ಹಂತದಿಂದಲೇ ಅನಾಸಕ್ತಿಯನ್ನು ಬೆಳೆಸಿಕೊಂಡರೆ ಆಗ ಅವನಿಗೆ ಈ ಮಾರ್ಗ ಸುಲಭ ಸಾಧ್ಯವಾಗುತ್ತದೆ. ಬಹುತೇಕ ಭಾರತೀಯರು ಪುನರ್ಜನ್ಮವನ್ನು ಒಪ್ಪುತ್ತಾರೆ. ತಮ್ಮ ಜೀವಿತದ ಕೊನೆಯ ಹಂತದಲ್ಲಿ ತಮ್ಮನ್ನು ತಾವು ಬಿಡುಗಡೆ ಹೊಂದಲು ಬಯಸುತ್ತಾರೆ. ಅನಕ್ಷರಸ್ಥನಾದ ಗ್ರಾಮೀಣನು ಒಮ್ಮೆ ಉಪವಾಸದಿಂದಿರಬಹುದು ಆದರೆ ತನ್ನ ಕಷ್ಟ ಜೀವನದಿಂದ ಬಿಡುಗಡೆಯ ಆಸೆಯನ್ನು ಮಾತ್ರ ಬಿಡಲಾರ. ಹೀಗಿರುವಾಗ, ಆಧ್ಯಾತ್ಮಮಾರ್ಗ ಎಷ್ಟೊಂದು ಸುಖಕರವಾಗಿರಬಹುದು?

ಎರಡನೆಯ ಪ್ರಮುಖವಾದ ಸಾಮಾಜಿಕ ಮೌಲ್ಯವೆಂದರೆ ವರ್ಣವ್ಯವಸ್ಥೆ. ಮಾನವರ ಇಷ್ಟ ಹಾಗೂ ಪ್ರವೃತ್ತಿ ಒಂದೇ ರೀತಿ ಇರುವುದಿಲ್ಲ - ಭಿನ್ನರುಚಿರ್ಹಿಲೋಕಃ. ಪ್ರಕೃತಿಗೆ ಅನುಗುಣವಾಗಿ ಭಾರತೀಯ ತಜ್ಞರು ಸಮಾಜವನ್ನು ಮೂರು ರೀತಿಯಾಗಿ ವಿಂಗಡಿಸಿದ್ದಾರೆ - ಸಾತ್ವಿಕ, ರಾಜಸಿಕ ಮತ್ತು ತಾಮಸಿಕ ಎಂದು. ಭಗವಂತನು ಭಗವದ್ಗೀತೆಯಲ್ಲಿ ಗುಣಕರ್ಮಗಳಿಗನುಗುಣವಾಗಿ ಸಮಾಜವನ್ನು ವಿಭಜಿಸಿರುವನು. ಗುಣಕರ್ಮ ವಿಭಾಗಗಳು (4. 13 ) ನಾಲ್ಕು ವರ್ಣಗಳೆಂದರೆ ಬ್ರಾಹ್ಮಣರು (ತಿಳಿದವರು) ಕ್ಷತ್ರಿಯರು (ಯೋಧರು), ವೈಶ್ಯರು (ವ್ಯಾಪಾರಿಗಳು), ಶೂದ್ರರು (ಸೇವಕರು) ಕೂಲಿಗಳು ಅಥವಾ ಕುಶಲತೆಯಿಲ್ಲದ ಕಾರ್ಮಿಕರು.) ಈ ವಿಭಾಗವು ಅವರ ಸಹಜವಾದ ನೈಪುಣ್ಯತೆಯನ್ನು ಆದರಿಸಿ ಆಗಿತ್ತು. ತಮ್ಮ ಕರ್ತವ್ಯಗಳನ್ನು ಋಜುಮಾರ್ಗದಿಂದ, ಸಮರ್ಪಣಾ ಮನೋಭಾವದಿಂದ ಮಾಡುವುದೇ ಜೀವನದ ಮೌಲ್ಯವಾಗಿತ್ತು. ಬ್ರಾಹ್ಮಣನ ಕರ್ತವ್ಯವೆಂದರೆ ಅಧ್ಯಯನ, ಅಧ್ಯಾಪನದಿಂದ

ಲೋಕಕ್ಕೆ ಸನ್ಮಾರ್ಗದತ್ತ ಮಾರ್ಗದರ್ಶನ ನೀಡುವುದು. ಅವರ ಜೀವನ ಮೌಲ್ಯವೆಂದರೆ ಸರಳ, ವಿನಯಪೂರ್ವಕವಾದ ಪರಿಶುದ್ಧ ಜೀವನವನ್ನು ನಡೆಸುವುದು. ಹಣಕ್ಕಾಗಲೀ. ಅಧಿಕಾರಕ್ಕಾಗಲೀ ದುರಾಸೆಯಿಲ್ಲದಿರುವುದು. ಕ್ಷತ್ರಿಯನಾದವನು ತನ್ನ ದೇಶವನ್ನು ಕಾಪಾಡಲು ತನ್ನನ್ನು ತಾನು ಸಮರ್ಪಿಸಿಕೊಳ್ಳುವುದು, ಸಾಮಾಜಿಕ ಹಾಗೂ ಧಾರ್ಮಿಕ ಒಳಿತನ್ನು ಕಾಪಾಡುವುದು. ಸಮಾಜವು ಸುವ್ಯವಸ್ಥಿತವಾಗಿ ನಡೆಯಲು ಸಹಕರಿಸುವುದು. ವೈಶ್ಯನಾದವನು ಸನ್ಮಾರ್ಗದಿದ ಹಣಗಳಿಸಿ ಬೇಸಾಯ, ವ್ಯವಹಾರ, ಕಾರ್ಖಾನೆ, ವಾಣಿಜ್ಯ, ವ್ಯಾಪಾರದಲ್ಲಿ ತೊಡಗಿಸಿಕೊಳ್ಳುವುದು. ಶೂದ್ರನಾದವನು ತನ್ನ ಜೀವಿತವನ್ನು ಸೇವೆ ಹಾಗೂ ದೈಹಿಕ ಶ್ರಮದಿಂದ ನಡೆಸಬೇಕು. ಸಾಮಾಜಿಕ ವಿರೂಪತೆಯಿಂದ ಈ ವ್ಯವಸ್ಥೆಯು ಹುಟ್ಟಿನ ಆಧಾರದ ಮೇಲೆ ಅಂಗೀಕೃತವಾಗಿತ್ತು. ಇದು ಸಾಮಾಜಿಕ ಅವ್ಯವಸ್ಥೆಯನ್ನುಂಟು ಮಾಡಿತು. ಆದರೆ ಅದರ ಮೂಲ ಉದ್ದೇಶವನ್ನು ಗಮನಿಸಿದರೆ ಅದರ ಬಗ್ಗೆ ಹರಿಸಿರುವ ಗಾಢ ಆಲೋಚನೆಗಳು ಬೆಳಕಿಗೆ ಬರುತ್ತದೆ.

ಎಲ್ಲಿ ಹೆಂಗಸರು ಗೌರವಿಸಲ್ಪಡುವರೋ, ಅಲ್ಲಿ ದೇವತೆಗಳೂ ಸಂತೋಷಿಸುತ್ತಾರೆ – ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ. ಇದು ಅನಾದಿ ಕಾಲದಿಂದ ಹೆಂಗಸರಿಗೆ ಗಂಡಸರಿಗಿಂತಲೂ ಉನ್ನತಸ್ಥಾನ ನೀಡಲಾಗಿದೆ. ನಾವು ಸೀತಾರಾಮ ಎಂದು ಉಚ್ಚರಿಸಿದಾಗ ಸೀತೆಯ ಹೆಸರೇ ಮೊದಲು ಹೇಳಲಾಗಿದೆ. ಯಾವುದೇ ಯಜ್ಞಯಾಗಾದಿಗಳಾಗಲೀ, ಧಾರ್ಮಿಕ ಕ್ರಿಯೆಗಳಾಗಲೀ ಅರ್ಧಾಂಗಿನಿಯಿಲ್ಲದೆ ಪೂರ್ಣಗೊಳ್ಳುವುದಿಲ್ಲ. ಹೆಂಡತಿಯಿಂದಲೇ ಮನೆಯೂ ಮನೆ ಎಂದು ಕರೆಯಲ್ಪಡುತ್ತದೆ – ಗೃಹಿಣೀ ಗೃಹಮುಚ್ಯತೇ. ಮಧ್ಯಕಾಲೀನಯುಗದಲ್ಲಿ ಕೆಲವು ವಿದೇಶೀಯರ ದುರ್ನಡತೆಯಿಂದ ಹೆಂಗಸರಿಗಿದ್ದ ಗೌರವ ಕಡಿಮೆಯಾಯಿತು. ಆದರೆ ಆಗಿನ ಕಾಲದಲ್ಲೂ ಸಹ ಮಹಾತ್ಮರು ಹಾಗೂ ಉದಾತ್ತಗುಣಗಳುಳ್ಳವರು ಹೆಂಗಸರಿಗೆ ಅಪಾರವಾದ ಗೌರವ ನೀಡಿದರು. ಇಂದೂ ಸಹ ದಕ್ಷಿಣ ಭಾರತದಲ್ಲಿ ಹೆಂಗಸರನ್ನು ಅಮ್ಮಾ ಎಂದು ಗೌರವಯುತವಾಗಿ ಸಂಭೋದಿಸುವರು. ಈ ನಮ್ಮ ಸಂಸ್ಕೃತಿಯಲ್ಲಿ ತಾಯಿಯೇ ಮೊದಲ ಗುರು ಎಂದು ಸ್ವೀಕರಿಸಲಾಗಿದೆ. ಸಾಮಾಜಿಕ ಹಂತದಲ್ಲೂ ಅವಳಿಗೆ ಆದರವಿದೆ. ಭಾರತೀಯ ಮೌಲ್ಯಗಳನ್ನು ನಿರೂಪಿಸಲು ಇದು ಮತ್ತೊಂದು ಮಾರ್ಗ.

ಬಹುತೇಕವಾಗಿ ಸಾಮಾಜಿಕ ಸಂಬದ್ಧತೆ ಭಾರತೀಯರಲ್ಲಿ ಉಂಟಾಗಲು ಕಾರಣವೆಂದರೆ ಹೆಂಗಸರ ನಿಃಸ್ವಾರ್ಥ ಭಾವನೆಯೇ. ಅವರಿಗೆ ಅವರ ಗಂಡಂದಿರಲ್ಲಿದ್ದ ಭಕ್ತಿ ಅಸಾಮಾನ್ಯವಾದುದು, ಅವರು ತಮ್ಮ ಗಂಡಂದಿರ ಎಡವಟ್ಟು ಸ್ವಭಾವವನ್ನೂ ಸಹ ಸಹಿಸಿಕೊಳ್ಳುತ್ತಿದ್ದರು. ಆದರೆ ತಮ್ಮ ಪಾವಿತ್ರ್ಯತೆಯನ್ನು ಬಿಡುತ್ತಿರಲಿಲ್ಲ. ಏಕೆಂದರೆ ಅದರಿಂದ ಕುಟುಂಬದ ವ್ಯವಸ್ಥೆ ಹಾಳಾಗುವುದು ಮತ್ತು ಅದು ಹುಟ್ಟುವ ಮಕ್ಕಳ ಮೇಲೆ ಪ್ರಭಾವಬೀರಿ ಅವರನ್ನು ಮಾನಸಿಕವಾಗಿ ಅಸ್ವಸ್ಥರನ್ನಾಗಿಸುತ್ತಿತ್ತು ಮತ್ತೂ ಸಹ ಅವರು ತಮ್ಮ ಗಂಡಂದಿರಿಗೆ ನೇರವಾದ ತಿಳಿಮಾತಿನಿಂದ ಬುದ್ಧಿವಾದ ಹೇಳಲೂ ಪ್ರಯತ್ನಿಸುತ್ತಿದ್ದರು. ಅವಿಭಕ್ತ ಕುಟುಂಬ ಸಹಜವಾಗಿಯೇ ಅಪವಾದವಿಲ್ಲದೆಯೇ ಈಗಲೂ ಸಹ ಪಾರಂಪರಿಕ ಕುಟುಂಬದಲ್ಲಿರುವಂತೆ

ಪಾಶ್ಚಾತ್ಯರ ಸ್ವಭಾವ, ವೈಜ್ಞಾನಿಕ - ತಾಂತ್ರಿಕ ಗಾಳಿಯ ಚಂಡಮಾರುತ ಬೀಸುತ್ತಿದ್ದರೂ ಸಹ, ಹೆಂಗಸರು ಹಿರಿಯರ ಸೇವೆ ಮಾಡುತ್ತಿದ್ದರು ಹಾಗೂ ಅತ್ತೆ ಮಾವಂದಿರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಅವರೇ ಸಮಾಜದ ಮುಖ್ಯ ಸವಲತ್ತಾಗಿರುತ್ತಿದ್ದರು. ಹಿರಿಯರನ್ನು ಗೌರವಿಸುವುದು ಗಂಡಸರ ಸಾಮಾನ್ಯ ನಿಯಮವಾಗಿತ್ತು. ಇದು ಅವರ ದಿನನಿತ್ಯದ ಬಯಕೆಯನ್ನು ಪೂರೈಸುವುದು ಮಾತ್ರವಲ್ಲದೆ ಅವರ ಭಾವನಾತ್ಮಕವಾದ ಸ್ತರದಲ್ಲೂ ಸಹ ಜಾತಿಬಾಹಿರರೆಂಬುದರಿಂದ ಕಾಪಾಡುತ್ತಿತ್ತು. ಮನೆಯಲ್ಲಿ ಸೊಸೆಯ ನಡವಳಿಕೆಯನ್ನು ಈ ಪ್ರಾಚೀಕ ಶ್ಲೋಕ ಸುಂದರವಾಗಿ ನಿರೂಪಿಸುತ್ತದೆ.

ಅಭ್ಯುತ್ಥಾನಂ ಉಪಗತೇ ಗೃಹಪತೌ ತದ್‌ಭಾಷಣೇ ನಮ್ರತಾ
ತತ್ಪಾದಾರ್ಪಿತದೃಷ್ಟಿರಾಸನವಿಧಿಃ ತಸ್ಯೋಽಪಚರ್ಯಾ ಸ್ವಯಮ್ ।
ಸುಪ್ತೇತತ್ರಶಯಿತಾ ತತ್ಪ್ರಥಮತೋ ಜಹ್ಯಾಚ್ಚ ಶಯ್ಯಾಮಿತಿ
ಪ್ರಾಚ್ಯೈಃ ಪುತ್ರಿ ನಿವೇದಿತಾ ಕುಲವಧೂ ಸಿದ್ಧಾಂತಧರ್ಮಾ ಅಮೀ ॥

(ಬಾಲರಾಮಾಯಣ. 4.43)

ಗಂಡನಾದ ಯಜಮಾನನು ಮನೆಗೆ ಬಂದಾಗ ಅವನನ್ನು ಗೌರವದಿಂದ ಬರಮಾಡಿಕೊಳ್ಳುವುದು, ವಿನಯದಿಂದ ಅವನೊಡನೆ ಮಾತನಾಡುವುದು, ಅವನ ಕಾಲಿನಲ್ಲಿ ದೃಷ್ಟಿಯಿಡುವುದು. ಅವನಿಗೆ ಆಸನ ನೀಡುವುದು, ತಾನೇ ಅವನ ಸೇವೆಯಲ್ಲಿ ತೊಡಗುವುದು, ಅವನು ಮಲಗಿದ ಬಳಿಕವೇ ತಾನು ಮಲಗುವುದು ಮತ್ತು ಅವನಿಗಿಂತಲೂ ಬೇಗ ಏಳುವುದು. ಇವು ನಮ್ಮ ಪೂರ್ವಜರು ಸೊಸೆಯರಿಗೆ ವಿಧಿಸಿರುವಂತಹ ಕೆಲವು ನಿಯಮಗಳು.

ದುರಾಸೆಯ ನಿಗ್ರಹ ಮತ್ತು ತ್ಯಾಗವು ಭಾರತೀಯರ ನಿಜವಾದ ಮೌಲ್ಯವಿಲ್ಲದಿರಬಹುದು, ಆದರೆ ಆದರ ಮೇಲೆ ಒತ್ತನ್ನು ನೀಡಿರುವುದು ಏಕೆಂದರೆ ವೈದ್ಯರಿಗೆ ದುರಾಸೆಯಿಲ್ಲದಂತೆ ನೋಡಿಕೊಳ್ಳುವುದಕ್ಕಾಗಿ - ಅಲೋಲುಪತಾ. ಸಾಧು ಸಂತರಿಗೆ ನೀಡುವ ಗೌರವ ರಾಜಮಹಾರಾಜರಿಗೆ ತೋರುವ ಗೌರವಕ್ಕಿಂತಲೂ ಅತ್ಯಧಿಕವಾದುದು. ಸಾಮಾನ್ಯರು ಅವರ ಪಾದಗಳನ್ನು ಸ್ಪರ್ಶಿಸಿ ಅವರಿಂದ ಆಪತ್ಕಾಲ ಹಾಗೂ ಕಷ್ಟ ಕಾಲದಲ್ಲಿ ಸಲಹೆ ಪಡೆಯುವವರಾಗಿದ್ದರು. ಅವರ ತಪಸ್ಸು ಸಾಮಾಜಿಕ ಪೀಡೆಗಳ ನಿವಾರಣೆಗೆ ಅತ್ಯುತ್ತಮ ಸಾಧನವಾಗಿತ್ತು.

ಭಾರತೀಯ ಸಮಾಜದಲ್ಲಿ ಹಬ್ಬಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಅವುಗಳನ್ನಾದರಿಸುವುದರಿಂದ ಅವುಗಳ ಮಹತ್ವವನ್ನರಿಯುವುದು ಮಾತ್ರವಲ್ಲ ನಮ್ಮ ಅಂತಃ ಸತ್ವವನ್ನು ಭಗವಂತನೆಡೆ ಸಮರ್ಪಿಸಲೂ ಅದು ಸಾಧನವಾಗುತ್ತದೆ. 16 ಸಂಸ್ಕಾರಗಳಲ್ಲಿ ಕೆಲವು ಪ್ರಾಪಂಚಿಕವಾದವುಗಳು, ಮತ್ತು ಕೆಲವು ಮೋಕ್ಷ ಸಂಬಂಧವುಳ್ಳವಂತಹವುಗಳು. ಹುಟ್ಟು ಉಪನಯನ ಮತ್ತು ವಿವಾಹಗಳು ಅತ್ಯಂತ ಹರ್ಷದಾಯಕವಾದವುಗಳು. ಅಂತ್ಯೇಷ್ಟಿ

ಸಂಸ್ಕಾರವು ಪ್ರಾಪಂಚಿಕ ನಶ್ವರತೆಯನ್ನು ಪ್ರತಿಪಾದಿಸುತ್ತದೆ. ಶ್ರಾದ್ಧಾದಿಗಳಲ್ಲಿ ಜನರು ತಮ್ಮ ಸ್ವಸುಖವನ್ನು ಬದಿಗೊತ್ತಿ ಬೇರೆಯವರ ಸುಖ ಸಂತೋಷಗಳಲ್ಲಿ ಪಾಲ್ಗೊಳ್ಳುತ್ತಾರೆ. ಅದು ಮಾನವೀಯ ಸಮಾಜವನ್ನು ವಿಸ್ತರಿಸುತ್ತದೆ. ದುಃಖಗೊಂಡಾಗ ಅಯ್ಯೋಪಾಪ ಎಂಬ ಮನೋಭಾವ ದುಃಖವನ್ನು ಕಡಿಮೆ ಮಾಡುತ್ತದೆ. ಸಂತೋಷದಾಯಕ ಸಂದರ್ಭಗಳಲ್ಲಿ ಅದು ಸಂತೋಷವನ್ನು ವರ್ಧಿಸುತ್ತದೆ. ಈ ಮೌಲ್ಯಗಳು ಕಡಿಮೆಯಾದುವೇನು?

ಭಾರತೀಯರ ಜೀವನ ಧ್ಯೇಯಕ್ಕಿರುವಂತೆಯೇ ಅದನ್ನು ಹೊಂದುವ ಗುರಿಗೂ ಪ್ರಾಶಸ್ತ್ಯವನ್ನು ನೀಡುತ್ತದೆ. ಅನೈತಿಕವಾದ ಮಾರ್ಗವು ನೈತಿಕವಾದ ಗುರಿಗೆ ಕಾರಣವಾಗದು. ಕ್ಷಣಿಕವಾಗಿ ಅದು ವಿರುದ್ಧವಾಗಿ ಅನ್ನಿಸಬಹುದು, ಆದರೆ, ವಾಸ್ತವಿಕವಾಗಿ ಅದು ಹಾಗಲ್ಲ, ನಮ್ಮ ಗುರಿಏನೇ ಇರಬಹುದು – ಹಣಗಳಿಸುವಿಕೆ, ಸ್ಥಾನಮಾನಗಳು, ಪ್ರಸಿದ್ಧಿ ಅಥವಾ ಯಾವುದೇ ಇಹಲೋಕದ ಸವಲತ್ತುಗಳು, ಸನ್ಮಾರ್ಗಕ್ಕೆ ತನ್ನದೇ ಆದ ಬೆಲೆಯಿದೆ. ಯುದ್ಧಗಳಲ್ಲೂ ಸಹ ನೀತಿಯನ್ನು ಸರಿಯಾಗಿ ಅನುಸರಿಸುತ್ತಿದ್ದರು. ಅವರು ಧರ್ಮ ಕಾಪಾಡಿಕೊಳ್ಳಲು ಯುದ್ಧ ಮಾಡುತ್ತಿದ್ದರು ಮತ್ತು ಆ ಯುದ್ಧ ಧರ್ಮಯುದ್ಧವೆಂದೇ ಪರಿಗಣಿತವಾಗುತ್ತಿತ್ತು.

ಭಾರತೀಯ ಮೌಲ್ಯಗಳಲ್ಲಿ ಅಂತರಿಕಾಂಶವು ಬಾಹ್ಯಾಂಶಕ್ಕಿಂತಲೂ ಹೆಚ್ಚಿನ ಮಹತ್ವವುಳ್ಳದ್ದಾಗಿತ್ತು. ಪ್ರಾಣವು ದೇಹಕ್ಕಿಂತಲೂ ಮುಖ್ಯವಾಗಿತ್ತು. ಹಾಕುವ ಬಟ್ಟೆ ಸ್ವಚ್ಛವಾಗಿರಬೇಕಿತ್ತು ಆದರೆ ಅದಕ್ಕಿಂತಲೂ ಮುಖ್ಯವಾಗಿ ಅದನ್ನು ತೊಡುವವರು ಸ್ವಚ್ಛವಾಗಿರಬೇಕಾಗಿತ್ತು. ಆದ್ದರಿಂದಲೇ ವಿವೇಕಾನಂದರು ಹೊಸದಾಗಿ ಮದುವೆಯಾದ ದಂಪತಿಗಳನ್ನು ಕುರಿತು ವಿದೇಶದಲ್ಲಿ ಹೇಳಿದರು – ನಿಮ್ಮ ನಾಡಿನಲ್ಲಿ ದರ್ಜಿ ಪ್ರಜೆಗಳನ್ನು ನಾಗರೀಕರನ್ನಾಗಿ ಸುಸಂಸ್ಕೃತರನ್ನಾಗಿ ಮಾಡಿದರೆ ನಮ್ಮ ನಾಡಿನಲ್ಲಿ ಉನ್ನತವಾದ ನಡವಳಿಕೆ ಮಾನವನನ್ನು ಸುಸಂಸ್ಕೃತನನ್ನಾಗಿಸುತ್ತದೆ. ''ಎಲ್ಲಿ ಸದಾಚಾರ ಮಾಯವಾಗುವುದೋ ಅಲ್ಲಿ ಕ್ರಿಯಾವಿಧಿಗಳು ತಲೆ ಎತ್ತುತ್ತವೆ.'' ಆದ್ದರಿಂದಲೇ ಬೌದ್ಧ ಹಾಗೂ ಜೈನಧರ್ಮಗಳು ತಲೆ ಎತ್ತಿದವು. ಮತ್ತೆ ಮಧ್ಯಯುಗದಲ್ಲಿ ಈ ಡಂಭಾಚಾರಗಳ ವಿರುದ್ಧ ಸಿಡಿದೇಳಲು ಕಬೀರರಂತಹ ಸಂತರು ಜನ್ಮ ತಾಳಿದರು.

ಅವರು ಜೀವನದ ನಿಜವಾದ ತತ್ತ್ವವನ್ನು ಪ್ರತಿಪಾದಿಸಿದರು. ಈ ನಮ್ಮ ನಾಡಿನ ಸಾಹಿತ್ಯದಲ್ಲಿ ಭಾಷೆ, ಛಂದಸ್ಸು, ಅಲಂಕಾರಗಳಿಗೆ ತನ್ನದೇ ಆದ ಪ್ರಾಮುಖ್ಯತೆಯಿದೆ. ಆದರೆ ರಸವೇ ಆತ್ಮ ಎಂದು ಪರಿಗಣಿಸಲಾಗಿದೆ. ಯಾವುದಾದರೂ ಶಿಲ್ಪ ಅಥವಾ ಚಿತ್ರದಲ್ಲಿ ನಿರೂಪಣಾ ಕಲೆಯಿರುತ್ತದೆ ಆದರೆ ಅದಕ್ಕಿಂತಲೂ ಮುಖ್ಯವಾದುದು ಅದರ ಕೊನೆಯೇ ಆಗಿರುತ್ತದೆ. ಸತ್ಯದೊಂದಿಗೆ ಶಿವ, ಸುಂದರವೂ ಮಿಲನಗೊಂಡಿರಬೇಕು.

ಸಮತೋಲನವು ಭಾರತೀಯ ಮೌಲ್ಯಗಳಲ್ಲಿರುವ ಮತ್ತೊಂದು ಗುಣ. ಆದರ್ಶವಾದ ಹಾಗೂ ವಾಸ್ತವವಾದಗಳ ಸಮತೋಲನ, ಅಂತರಿಕ ಬಾಹ್ಯಗಳ ಸಮತೋಲನ, ಬುದ್ಧಿ ಹಾಗೂ ಭಾವನೆಗಳ ಸಮತೋಲನ, ಸನ್ಮಾರ್ಗ ಹಾಗೂ ಕ್ರಿಯೆಗಳ ಸಮತೋಲನ, ಭೋಗ

ಹಾಗೂ ತ್ಯಾಗಗಳ ಸಮತೋಲನ, ಇಹಲೋಕದ ಹಾಗೂ ಪರಲೋಕದ ಸಮತೋಲನ, ಚಿಂತನೆ ಹಾಗೂ ಭಾವಪರವಶತೆಗಳ ಸಮತೋಲನ, ಸತ್ಯ ಹಾಗೂ ವಾಸ್ತವಿಕತೆಯ ಸಮತೋಲನ, ಹಕ್ಕು ಹಾಗೂ ಕರ್ತವ್ಯಗಳ ಸಮತೋಲನ, ಪರಿವಾರ ಹಾಗೂ ಸಮಾಜದ ಸಮತೋಲನ. ಕಲೆ ಹಾಗೂ ಸಾಹಿತ್ಯದ ಸಮತೋಲನ, ಸಮುದಾಯ ಹಾಗೂ ದೇಶಗಳ ಸಮತೋಲನ, ತಾಯ್ನಾಡು ಪರದೇಶಗಳ ನಡುವೆ ಸಮತೋಲನ, ಹಣ ಹಾಗೂ ಭೋಗಗಳ ನಡುವೆ ಸಮತೋಲನ, ಮಾನವ ಹಾಗೂ ಪ್ರಕೃತಿಯ ನಡುವೆ ಸಮತೋಲನ. ಆದ್ದರಿಂದ ಸಮತೋಲನವು ಮಾನವನ ಪ್ರತಿಯೊಂದು ಹಂತದಲ್ಲೂ ತನ್ನದೇ ಆದ ಪ್ರಾಮುಖ್ಯತೆ ಪಡೆದಿದೆ. ಈ ಸಮತೋಲನವೇ ಸರಿಯಾದ ಸಂಯೋಜನೆಯಿಂದ ಜೀವಿತದ ಸಾರ್ಥಕತೆಯನ್ನು ನಿರ್ಧರಿಸುತ್ತದೆ. ಪ್ರಕೃತಿಯಲ್ಲಿ ಹೇಗೆ ಪರಿಶುದ್ಧತೆ, ಆಸೆ, ಕತ್ತಲು ಮಿಶ್ರವಾಗಿದ್ದು ಕೆಲಸಕ್ಕೆ ಪ್ರಚೋದಿಸುತ್ತದೆಯೋ ಅಂತೆಯೇ ಮಾನವರಲ್ಲೂ ಅದು ರೂಪುಗೊಳ್ಳುತ್ತದೆ. ಆದ್ದರಿಂದ ಅದರ ಸಾಹಿತ್ಯದಲ್ಲಿ ಸರಿಯಾದ ಅಂಶದಲ್ಲಿ ರಸ, ಭಾವ, ಪದಗಳ ಅಭಿವ್ಯಕ್ತವಾಗುತ್ತದೆ. ಯಾವುದಾದರೂ ಚಿತ್ರದಲ್ಲಿ ಅನೇಕ ಬಣ್ಣಗಳ ಸಮೂಹವಿದ್ದರೆ ಮಾತನಾಡುವ ದನಿಯಲ್ಲೂ ಸಹ ಏರಿಳಿತಗಳಿರುತ್ತದೆ. ಸರಿಯಾದ ಸಮತೋಲನವನ್ನು ನಿಭಾಯಿಸುವುದರಲ್ಲೇ ಭಾರತೀಯ ಕಲೆಯ ಹೆಗ್ಗುರುತಿರುತ್ತದೆ.

ಶ್ರದ್ಧಾಯುಕ್ತ ಜೀವನವನ್ನು ಭಾರತೀಯರು ನಂಬುತ್ತಾರೆ. ಕರ್ಮಯೋಗದಲ್ಲಿ ನಂಬಿಕೆಯುಳ್ಳ ಇವರು ತಮ್ಮ ಕರ್ಮಕ್ಕೆ ತಕ್ಕ ಫಲ ದೊರೆತೇ ದೊರೆಯುವುದೆಂದು ನಂಬಿರುತ್ತಾರೆ. ಅದು ಕೂಡಲೇ ಸಿದ್ಧಿಸಬಹುದು ಅಥವಾ ಸ್ವಲ್ಪ ಕಾಲವಾದ ನಂತರ ಸಿದ್ಧಿಸಬಹುದು. ಇದು ಅವರನ್ನು ಅನಾವಶ್ಯಕ ನಿರಾಶಾವಾದದಿಂದ ರಕ್ಷಿಸಿ ಅವರಿಗೆ ಸಮಾಧಾನವನ್ನು ತಂದುಕೊಡುತ್ತದೆ. ಭಾರತೀಯರು ಮತ್ತು ಅವರ ಸಮಾಜ ಪುರಸ್ಕರಿಸಿರುವ ಕೆಲವು ಮೌಲ್ಯಗಳು ಈ ಕೆಳಗಿನಂತಿವೆ.

ಭಾರತೀಯನಿಗೆ ಹಸು ಹಾಗೂ ಬ್ರಾಹ್ಮಣರ ಬಗ್ಗೆ ಗೌರವವಿರುವುದು ಮಾತ್ರವಲ್ಲ ಅವರು ಅದನ್ನು ಪೂಜಿಸುತ್ತಾರೆ. ಅವನಿಗೆ ವೇದಗಳಲ್ಲಿ ಪುರಾಣ, ಹಾಗೂ ಸ್ಮೃತಿಗಳಲ್ಲಿ ನಂಬಿಕೆಯಲ್ಲದಿರಬಹುದು ಆದರೂ ಅವನಿಗೆ ತಾಯಿ, ತಂದೆ, ಗುರು ಹಿರಿಯರಲ್ಲಿ ಗೌರವವಿರುತ್ತದೆ. ಈ ಗೌರವವೇ ಅವರಿಗೆ ಸೇವೆ ಮಾಡಲು ಸಂತೋಷದಿಂದ ಪ್ರಚೋದಿಸುತ್ತದೆ. ಈ ಸೇವೆಯು ಹಣದ ರೂಪವಿರಬಹುದು ಅಥವಾ ಅಲ್ಲದಿರಬಹುದು ಆದರೆ, ಅದು ನಿಜವಾಗಿಯೂ ಮಾನಸಿಕವಾಗಿರುತ್ತದೆ. ಅದನು ತಾಯಿ, ತಂದೆ ಹಾಗೂ ಭಗವಂತನಿಗೆ ಋಣ ತೀರಿಸಲು ಇರುವುದು ಇದೊಂದೇ ಮಾರ್ಗ.

ವಿದ್ಯಾರ್ಥಿಯು ಎಂದೆಂದೂ ಸಹ ವಿನೀತನಾಗಿದ್ದು ಜ್ಞಾನಕ್ಕೋಸ್ಕರ ಮುಡುಪಾಗಿರುವವನಾಗಿರಬೇಕು. ಅವನು ಸತತ ಪ್ರಯತ್ನದಿಂದ ಜ್ಞಾನವನ್ನು ಪಡೆಯಬೇಕು. ಸುಖವನ್ನು ಕುರಿತು ಯೋಚಿಸುವುದೂ ಸಹ ಅವನಿಗೆ ಒಳ್ಳೆಯದಲ್ಲ, ಅವನು ಜ್ಞಾನವನ್ನಷ್ಟೇ ಗಳಿಸಿದರೆ ಸಾಲದು, ಒಳ್ಳೆಯ ನಡವಳಿಕೆಯನ್ನು ತನ್ನ ಗುರುವಿನಿಂದ ಪಡೆಯಬೇಕು. ಆಗಲೇ

ಅವನು ಸುಸಂಸ್ಕೃತನಾಗಿ, ನಾಗರೀಕ ಪ್ರಜೆಯಾಗಬಲ್ಲನು. ಭಾರತೀಯ ಸಮಾಜವು ಸನ್ನಡತೆಯುಳ್ಳವನನ್ನು ಪಂಡಿತನಿಗಿಂತಲೂ, ಬರಹಗಾರನಿಗಿಂತಲೂ ಹೆಚ್ಚು ಆದರಿಸುತ್ತದೆ.

ಸದ್ಗುಣಗಳನ್ನು ಅಳವಡಿಸಿಕೊಳ್ಳಲು ಮಕ್ಕಳಿಗೆ ಅರ್ಥಯುಕ್ತವಾದ ಸುಂದರ ಹೆಸರುಗಳನ್ನು ಕೊಡಲಾಗಿದೆ. ಭಾರತೀಯರು ಹೆಸರು, ಸೌಂದರ್ಯ, ಆಕಾರಗಳಲ್ಲಿ ಏಕಾತ್ಮತೆಯನ್ನು ನಂಬಿದ್ದಾರೆ. ಆದ್ದರಿಂದ ಪವಿತ್ರವಾದ ಧರ್ಮಬೋಧೆ, ಧರ್ಮಕ್ರಿಯೆ ಹಾಗೂ ಪವಿತ್ರ ಸಾಂಗತ್ಯ ಅವರಿಗೆ ಹೊಸ ಅರ್ಥದ ಆಯಾಮವನ್ನು ನೀಡುತ್ತದೆ. ಸರಿಯಾದ ವಾತಾವರಣ ಪವಿತ್ರ ಕ್ರಿಯೆಗಳಿಗೆ ದಾರಿ ಮಾಡುತ್ತದೆ ಮತ್ತು ಅದರ ಮುಖಾಂತರ ಪವಿತ್ರ ವ್ಯಕ್ತಿತ್ವವು ನಿರ್ಮಾಣವಾಗಿ ಭಾರತೀಯ ಮೌಲ್ಯಗಳು ಸ್ಥಾಪಿತವಾಗಿದೆ.

ಬೆಳಗಿನ ಜಾವ ಏಳುವುದು ಅತ್ಯಂತ ಪ್ರಶಸ್ತವಾದುದು. ಪವಿತ್ರವಾದ ವಾತಾವರಣ ಸಹಜವಾಗಿಯೇ ಪವಿತ್ರವಾದ ಚಿಂತನೆಗೆ ದಾರಿಮಾಡಿಕೊಡುತ್ತದೆ. ಆದ್ದರಿಂದಲೇ ಭಾರತೀಯರು ಬೆಳಗಿನ ಜಾವವೇ ಧ್ಯಾನ, ಪ್ರಾರ್ಥನೆಗಳಲ್ಲಿ ತೊಡಗಿಸಿಕೊಳುತ್ತಿದ್ದರು. ಸರಿಯಾದ ವ್ಯಕ್ತಿತ್ವ ವಿಕಸನಕ್ಕೆ ಪವಿತ್ರವಾದ ಹಾಗೂ ಆರೋಗ್ಯಕರವಾದ ದೇಹವೂ ಮುಖ್ಯ. ಬೆಳಿಗ್ಗೆ ಭಾರತೀಯರು ಸ್ನಾನದಿಂದ ತಮ್ಮ ದೇಹಶುದ್ಧಿ ಮಾಡಿಕೊಳ್ಳುತ್ತಾರೆ. ವ್ಯಾಯಾಮ ಅವನ ದೇಹವನ್ನು ಆರೋಗ್ಯಕರವಾಗಿಡುತ್ತದೆ. ಹಿರಿಯರಿಗೆ ಗೌರವ ಸಮರ್ಪಿಸಿದ ನಂತದ, ಅವರಿಂದ ಆಶೀರ್ವಾದ ಪಡೆದು, ವಿನಯಾದರ್ಶವನ್ನು ಹೊಂದಿ ಸೇವಾಭಾವ ಹಾಗೂ ಶ್ರದ್ಧೆಯನ್ನು ಬೆಳೆಸಿಕೊಳ್ಳುತ್ತಾನೆ. ಯಜ್ಞಾಚರಣೆಯಿಂದ ತನ್ನ ಮನೆಯ ಶುದ್ಧೀಕರಣ ಮಾಡಿಕೊಂಡು ತನ್ನ ಮನಸ್ಸು ಹಾಗೂ ಬುದ್ಧಿಯನ್ನು ಶುದ್ಧೀಕರಿಸಿಕೊಳ್ಳುತ್ತಾರೆ. ತನ್ನ ಕಷ್ಟಾರ್ಜಿತ ಹಣದಿಂದ ಸರಳ, ನುಡಿ ಆಹಾರವನ್ನು ಭುಂಜಿಸುತ್ತಾನೆ. ಈ ಆಹಾರವು ಅವನ ದೇಹವನ್ನು ಪುಷ್ಟೀಕರಿಸುತ್ತದೆ ಹಾಗೂ ಸೂಕ್ಷ್ಮ ಮನಸ್ಸನ್ನೂ ಸಹ. ಅಶುಚಿಯಾದ ಆಹಾರ ಶುದ್ಧ ಮನಸ್ಸುಂಟು ಮಾಡುವುದಿಲ್ಲ. ಆದ್ದರಿಂದ ಅದು ಭಾರತೀಯರಿಗೆ ಯುಕ್ತವಾದುದಲ್ಲ. ಯಾವುದನ್ನು ಭುಂಜಿಸಬೇಕು ಯಾವುದನ್ನಲ್ಲ ಎಂಬ ವಿವೇಚನೆ ಅವನಿಗಿದೆ.

ಅತಿಥಿ ಸತ್ಕಾರ ಭಾರತೀಯರ ಜೀವಿತದ ವಿಶೇಷ ಅಂಶ. ಅತಿಥಿಯನ್ನು ವಿಶೇಷ ಆದರದಿಂದ ನೋಡಿಕೊಳ್ಳಲಾಗುತ್ತದೆ ಮತ್ತು ಅವನ ಆಶೀರ್ವಾದಕ್ಕಾಗಿ ಎಂದೆಂದೂ ಹಲುಬುತ್ತಿರುತ್ತಾರೆ. ಈ ಕ್ರಿಯೆಯಲ್ಲಿ ವ್ಯಾಪಾರಕ್ಕಿಂತಲೂ ಹೆಚ್ಚಾಗಿ ಭಕ್ತಿಭಾವವಿರುತ್ತದೆ. ನಮ್ಮ ಮೌಲ್ಯಗಳ ಪ್ರಕಾರ, ಯಾವ ಮನೆಯಲ್ಲಿ ಗೌರವ ದೊರೆಯುವುದೋ ಅಲ್ಲಿಗೆ ಅವನು ಹೋಗಬೇಕು. ವೃದ್ಧರನ್ನೂ, ರೋಗಿಷ್ಠರನ್ನೂ ನೋಡಿಕೊಳ್ಳುವುದು ಮಾನವೀಯತೆ. ಇದು ಅತ್ಯಂತ ವಿನಮ್ರಭಾವದಿಂದ ಹಾಗೂ ಸೇವಾ ಭಾವನೆಯಿಂದ ಮಾಡಬೇಕು. ಸೇವೆಯು ಅಹಂಕಾರದಲ್ಲಿ ಕೊನೆಯಾದರೆ ಭಾರತೀಯರ ಜೀವನದಲ್ಲಿ ಅದಕ್ಕೆ ಸ್ಥಾನವಿಲ್ಲ. ದೇಣಿಗೆಯನ್ನು ನೀಡುವಾಗ ನಿಃಸ್ವಾರ್ಥತೆ ಹಾಗೂ ಪಾವಿತ್ರ್ಯತೆಯಿರಬೇಕು. ದೇಣಿಗೆಯು ಹಣವಾಗಲೀ, ಕಾಯಕವಾಗಲೀ, ಜ್ಞಾನವಾಗಲೀ, ಸೇವೆಯಾಗಲಿ, ಅದನ್ನು ಸತ್ಪಾತ್ರರಿಗೇ ನೀಡಬೇಕು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಗೋಪ್ಯವಾಗಿಯೇ ನೀಡಬೇಕು. ದೇಣಿಗೆಯು ಪ್ರಚಾರದಿಂದ ಅಥವಾ ದಾನ ರೂಪದಿಂದ ಅಥವಾ ಅದನ್ನು ಮನ್ನಣೆ ರೂಪದಲ್ಲಿ

ಸ್ವೀಕರಿಸಿದರೆ ಅದು ಅಹಂಕಾರಕ್ಕೆ ಕಾರಣವಾಗಿ ಅವನ ವ್ಯಕ್ತಿತ್ವವನ್ನು ಹೀಗಳೆಯುತ್ತದೆ. ''ಕೀರ್ತಿರ್ಹ್ರಸತಿ ಕೀರ್ತನಾತ್''. ಜ್ಞಾನದ ಕೊಡುಗೆಯೇ ನಿಜವಾದ ಕೊಡುಗೆ - ಸರ್ವೇಷಾಮೇವ ದಾನಾನಂ ವಿದ್ಯಾದಾನಂ ವಿಶಿಷ್ಯತೇ।

ಒಳ್ಳೆಯ ಸದಭಿರುಚಿ ಹಾಗೂ ನಯವಾಗಿರುವುದಕ್ಕೆ ಮಹತ್ವವಿದೆಯೇ ಹೊರತು ಹೇಯವಾದ ಪ್ರದರ್ಶನಕ್ಕಲ್ಲ. ಭಾರತೀಯರಲ್ಲಿ ವ್ಯಕ್ತಿತ್ವಕ್ಕೆ ಮನ್ನಣೆಯಿದೆಯೇ ಹೊರತು ಬಟ್ಟೆಗಲ್ಲ. ಹಿರಿಯರಲ್ಲಿ ಗೌರವ ಹಾಗೂ ವಿನಯವನ್ನು ಬೆಳೆಸಿಕೊಳ್ಳಬೇಕು. ಹಿರಿಯರನ್ನು ಗೌರವಿಸಿ ಅವರಿಂದ ಆಶೀರ್ವಾದವನ್ನು ಪಡೆಯಬೇಕು. ಅವರನ್ನು ಕುರಿತು ಸಂಬೋಧಿಸುವಾಗ ನಾಲ್ಕು ಅಂಶಗಳನ್ನು ಗಮನದಲ್ಲಿಡಬೇಕು - ಅವರಿಂದ ಕೇಳಲ್ಪಡದೆ ಮಾತನಾಡಬಾರದು, ನಯವಾಗಿ ಮಾತನಾಡಬೇಕು, ಒಳ್ಳೆಯ ಅಭಿವ್ಯಕ್ತಿಯಿರಬೇಕು, ಒಳ್ಳೆಯ ಮಾತನ್ನೇ ಆಡಬೇಕು, ಅಭಿವ್ಯಕ್ತಿ ಮೃದುವಾಗಿರಬೇಕು. ರಾತ್ರಿ ಬಹು ಹೊತ್ತು ಹೊರಗಿರಬಾರದು. ಬೇಗ ನಿದ್ದೆ ಮಾಡಿ ಬೇಗನೆ ಏಳಬೇಕು.

ಹಿಮಾಲಯದಂತಹ ಪರ್ವತಗಳು, ಗಂಗೆಯಂತಹ ನದಿಗಳು, ಕಾಶಿಯಂಥಹ ಪಟ್ಟಣಗಳು, ವೇದದಂತಹ ಗ್ರಂಥಗಳು, ಪುರಾಣಗಳು ಮೊದಲಾದ ಪವಿತ್ರಗ್ರಂಥಗಳಲ್ಲಿ ನಮಗೆ ಅಪಾರವಾದ ವಿಶ್ವಾಸವಿದೆ. ನಾವು ಅದನ್ನು ಆರಾಧಿಸುತ್ತೇವೆ.

ವ್ಯಕ್ತಿತ್ವ ವಿಕಸನಕ್ಕೆ ಭಾರತೀಯ ಮೌಲ್ಯಗಳಲ್ಲಿ ಶ್ರೇಷ್ಠ ಸ್ಥಾನ ನೀಡಲಾಗಿದೆ. ಆಚಾರವೇ ಪರಮಧರ್ಮ - ''ಆಚಾರಃ ಪರಮೋಧರ್ಮಃ'' ಯಾವ ಮತದಲ್ಲಿ ಅವನಿಗೆ ನಂಬಿಕೆಯಿದೆಯೆಂಬುದು ಮುಖ್ಯವಲ್ಲ, ಅವನ ನಡತೆಯೇ ಮುಖ್ಯವಾದುದು. ಮತ, ಕ್ರಿಯೆ, ಜಾತಿ, ಗುಂಪು, ಪ್ರದೇಶ, ಭಾಷೆ, ದೇಶ ಅವನ ಶ್ರೇಷ್ಠತೆಯನ್ನು ಪ್ರತಿಪಾದಿಸುವುದಿಲ್ಲ ಅವನ ಸನ್ನಡತೆಯೇ ಅವನನ್ನು ಮೇಲೇರಿಸುತ್ತದೆ. ಆದ್ದರಿಂದ ಮಾನವ ಮೇಲೆ ಹೇಳಿದಂತಹ ಬಹುತೇಕ ಮೌಲ್ಯಗಳನ್ನು ಅನುಸರಿಸುತ್ತಿದ್ದರೂ ಸಹ, ಅವನ ವಯಕ್ತಿಕ ಆಚಾರ ಧರ್ಮಕ್ಕೆ ಅನುಗುಣವಾಗಿರಬೇಕು, ಮನು ನಿರೂಪಿಸುವಂತೆ:-

ವಿದ್ವದ್ಭಿಃ ಸೇವಿತಃ ಸದ್ಭಿಃ ನಿತ್ಯಂ ಅದ್ವೇಷ ರಾಗಿಭಿಃ।
ಹೃದಯೇನಾಭ್ಯನುಜ್ಞಾತೋ ಯೋಧರ್ಮಸ್ತಂ ನಿಬೋಧತ ॥ (2.1)

ಯಾವುದನ್ನು ವೇದ ಬಲ್ಲವರು ತಮ್ಮ ಜೀವನದಲ್ಲಿ ಅನುಸರಿಸಿದರೋ ಆ ಪವಿತ್ರವಾದ ನಿಯಮವನ್ನು ಪಾಲಿಸಿರಿ. ಜ್ಞಾನಿಗಳು, ಸಜ್ಜನರು, ರಾಗ ದ್ವೇಷರಹಿತರಾದಂತಹವರು, ಅರಿತುಕೊಂಡು ಹೃದಯಪೂರ್ವಕವಾಗಿ ಆಚರಿಸುವ ದರ್ಮ ಯಾವುದು ಎಂಬುದನ್ನು ತಿಳಿದುಕೊಳ್ಳಿರಿ.

ಈ ಧರ್ಮವೇ ಮನುವಿನಿಂದ ನಿರೂಪಿತವಾಗಿದೆ :-

ಧೃತಿಃಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ (6.92)

ಸಂತೋಷ, ಆತ್ಮನಿಯಂತ್ರಣ, ಕಳ್ಳತನ ಮಾಡದೇ ಇರುವುದು, ದೇಹಶುದ್ಧಿ, ಇಂದ್ರಿಯನಿಗ್ರಹ, ಶಾಸ್ತ್ರಚಿಂತನೆ, ಸತ್ಯ, ಅಕ್ರೋಧ ಹಾಗೂ ಆಧ್ಯಾತ್ಮ ವಿದ್ಯೆ ಇವೇ ಧರ್ಮದ ಹತ್ತು ಲಕ್ಷಣಗಳಾಗಿದೆ.

ಅದನ್ನು ಮುಂದುವರೆದು ಮನು ಹೇಳುವಂತೆ

ದಶ ಲಕ್ಷಣಾನಿ ಧರ್ಮಸ್ಯ ಯೇ ವಿಪ್ರಾಃ ಸಮಧೀಯತೇ ।
ಅಧೀತ್ಯ ಚಾನುವರ್ತಂತೇ ತೇ ಯಾಂತಿ ಪರಮಾಂ ಗತಿಂ ॥(6.93)

ಧರ್ಮದ ಈ ಹತ್ತೂ ಲಕ್ಷ್ಯಗಳನ್ನು ಯಾವ ಬ್ರಾಹ್ಮಣರು ಅನುಸರಿಸುತ್ತಾರೋ, ತಿಳಿದುಕೊಳ್ಳುತ್ತಾರೋ ಹಾಗೂ ಆಚರಿಸುತ್ತಾರೋ ಅವರು ಪರಮ ಪದವಾದ ಬ್ರಹ್ಮ ಸಾಕ್ಷಾತ್ಕಾರವನ್ನು ಮತ್ತು ಬ್ರಹ್ಮಸಿದ್ಧಿಯನ್ನು ಹೊಂದುತ್ತಾರೆ.

ಕೃಷ್ಣ ಭಗವಾನನು ಗೀತೆಯಲ್ಲಿ ಧರ್ಮವನ್ನು ಇಪ್ಪತ್ತಕ್ಕೆ ಬೆಳೆಸಿದರೆ ಭಾಗವತಪುರಾಣ ಮೂವತ್ತಕ್ಕೆ ವಿಸ್ತರಿಸುತ್ತದೆ. ಯಾರು ಈ ಧರ್ಮವನ್ನು ಅನುಷ್ಠಾನದಲ್ಲಿಡುವರೋ ಮತ್ತು ಪ್ರಾಪಂಚಿಕ ದುರ್ಗುಣಗಳಾದ ಕಾಮ, ಕ್ರೋಧ, ಲೋಭ, ಮದ, ಮಾತ್ಸರ್ಯಗಳನ್ನು ಗೆಲ್ಲುವರೋ ಅವರು ತಮ್ಮ ಶಕ್ತಿ ಹಾಗೂ ಅಂತಃ ಸತ್ವವನ್ನು ಅರಿಯುವರು.

ಹೇಗೆ ಧರ್ಮದೊಂದಿಗೆ ಸದ್ಗುಣಗಳು ಸೇರ್ಪಡುವುದೇ ಮೊದಲ ನಾಲ್ಕನ್ನು ವಿಶೇಷವಾಗಿ ಇಲ್ಲಿ ಕೇಂದ್ರೀಕರಿಸಲಾಗಿದೆ. ಅಹಿಂಸೆ – ಪ್ರಾಣಹಿಂಸೆ ಮಾಡದಿರುವುದು, ಸತ್ಯ – ಸತ್ಯವನ್ನೇ ನುಡಿಯುವುದು, ಅಸ್ತೇಯ–ಬೇರೆಯವರ ವಸ್ತುಗಳನ್ನು ಕದಿಯದಿರುವುದು, ಇಂದ್ರಿಯಗಳನ್ನು ನಿಗ್ರಹಿಸುವುದು ಮತ್ತು ಕೊನೆಯದಾಗಿ ಅತ್ಯಂತ ಮುಖ್ಯವಾದುದೆಂದರೆ – "ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್" – ಯಾವುದು ಬೇರೆಯವರು ತನಗೆ ಮಾಡಬಾರದೆಂದು ಬಯಸುತ್ತಾನೋ ಅದನ್ನು ತಾನು ಬೇರೆಯವರಿಗೆ ಮಾಡಬಾರದು.

ಈಗ ಲಿಂಗ ಸಾಮರಸ್ಯದ ಬಗ್ಗೆ ಹೆಚ್ಚಿನ ಮಾತು ಕೇಳಿ ಬರುತ್ತಿದೆ ಹೆಂಗಸರು ಹೆಚ್ಚಾಗಿ ಅವಮಾನಿತರಾಗುತ್ತಿದ್ದಾರೆ. ಇದಾಗುತ್ತಿರುವುದು ತಾಯಿಯನ್ನು ದೇವರಂತೆ ಕಾಣು ಎಂಬಂತಹ ಮೌಲ್ಯವನ್ನು ಅನುಸರಿಸದಿರುವುದರಿಂದಲೇ. ಮಾತೃವತ್ ಪರದಾರೇಷು– ಬೇರೆ ಹೆಂಗಸರನ್ನು ತಾಯಿಯಂತೆ ಕಾಣು. ಹೆಂಗಸರಂತೆಯೇ ಹಣದ ಬಗ್ಗೆಯೂ ಅಷ್ಟೇ. ಬೇರೆಯವರ ಹಣ ಮಣ್ಣಿನ ಹೆಂಟೆಯಷ್ಟೇ ನಿಸ್ಸಾರ ಎಂಬ ಮೌಲ್ಯವನ್ನು ಮೀರಿರುವುದರಿಂದಲೇ ಹಣವನ್ನು ದುರ್ಬಳಕೆ ಮಾಡಿಕೊಳ್ಳಲಾಗುತ್ತಿದೆ.

ಈ ಮೌಲ್ಯಗಳನ್ನು ಅಳವಡಿಸಿಕೊಂಡಲ್ಲಿ ಮಾನವನು ಪವಿತ್ರನಾಗುತ್ತಾನೆ. ತನ್ನ ಅಂತರ್ಧ್ವನಿಯನ್ನು ಕೇಳುವುದರಿಂದ ತನ್ನ ಜೀವನವನ್ನು ನಿರ್ಭಯತೆಯಿಂದ, ದುಃಖವಿಲ್ಲದೆ ಶಾಂತಿ ಸಮಾಧಾನಗಳಿಂದ ನಡೆಸಲು ಸಾಧ್ಯವಾಗುತ್ತದೆ.

ಒಂದಾನೊಂದು ತಪ್ಪು ಹೊರಿಸುವುದು ಭಾರತೀಯರ ಮನಃಸ್ಥಿತಿಯ ಬಗ್ಗೆಯೆಂದರೆ ಅವರು ಅತ್ಯಂತ ವಯಕ್ತಿಕದ ಕಡೆ ವಾಲುತ್ತಾರೆಂದು, ಅದರ ಉದ್ಧಾರಕ್ಕೆ ಅದು ಕಾರಣವಾಗುತ್ತದೆ. ಆರ್ಥಿಕ, ಮಾನಸಿಕ, ಆದ್ಯಾತ್ಮಿಕ ಉನ್ನತಿ, ಎಷ್ಟರಮಟ್ಟಿಗೆ ಎಂದರೆ ಮೋಕ್ಷವನ್ನು ಪಡೆಯುವವರೆಗೆ, ಇಂತಹ ತಪ್ಪಾದ ಕಲ್ಪನೆಯನ್ನು ದೂರಮಾಡಬೇಕು. ಭಾರತೀಯ ಮೌಲ್ಯ ಪದ್ಧತಿಯು ವಯಕ್ತಿಕ ಮಾನವನನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದರೊಂದಿಗೆ ಎಲ್ಲರನ್ನೂ ತನ್ನ ಗಮನಕ್ಕೆ ತೆಗೆದುಕೊಳ್ಳುತ್ತದೆ. ಎಲ್ಲಾ ಮಾನವರನ್ನು ಮಾತ್ರವಲ್ಲದೆ ಎಲ್ಲರನ್ನೂ ತನ್ನ ಗಮನಕ್ಕೆ ತೆಗೆದುಕೊಳ್ಳುತ್ತದೆ. ಪ್ರತಿಯೊಬ್ಬನೂ ಎಲ್ಲರ ಒಳಿತಿಗಾಗಿಯೇ ಚಿಂತಿಸಬೇಕು – ಸರ್ವಭೂತಹಿತೇ ರತಾಃ. ಭಾರತೀಯರ ಪ್ರಾರ್ಥನೆಯೆಂದರೆ:–

ಸರ್ವೇಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇಭದ್ರಾಣಿ ಪಶ್ಯಂತು ಮಾಕಶ್ಚಿದ್ ದುಃಖಭಾಗ್ಬವೇತ್ ।

ಎಲ್ಲರೂ ಸುಖವಾಗಿರಲಿ, ಎಲ್ಲರೂ ಆರೋಗ್ಯವಾಗಿರಲಿ. ಎಲ್ಲರೂ ಮಂಗಳವಾದುದನ್ನೇ ಪಡೆಯಲಿ, ಯಾರೂ ದುಃಖದಿಂದಿರುವುದು ಬೇಡ.

ಭಾರತದಲ್ಲಿ ಭೂದೇವಿಗೆ ತಾಯಿಯ ಸ್ಥಾನವು ನೀಡಲಾಗಿದೆ. ಅಥರ್ವವೇದದ ಪೃಥ್ವೀ ಸೂಕ್ತದಲ್ಲಿ ಭೂಮಿಯೇ ತಾಯಿ, ತಾನು ಆ ತಾಯಿಯ ಮಗನೆಂದು ಹೇಳಿಕೆಯಿದೆ. ''ಮಾತಾ ಭೂಮಿಃ, ಪುತ್ರೋಽಹಂ ಪೃಥಿವ್ಯಾಃ''. ಭಾರತದಲ್ಲಿ ಭೂಮಿಯನ್ನು ಕ್ಷಮಿಸಲು ಬೇಡಲಾಗಿದೆ, ಏಕೆಂದರೆ ತಾನು ಅತ್ಯಂತ ಪೂಜ್ಯಳೂ, ಮಾನ್ಯಳೂ ಆದ ಅವಳ ಮೇಲೆ ಕಾಲಿಟ್ಟಿರುವುದರಿಂದ :–

ಸಮುದ್ರವಸನೇ ದೇವಿ ಪರ್ವತಸ್ತನ ಮಂಡಲೇ ।
ವಿಷ್ಣುಪತ್ನೀ ನಮಸ್ತುಭ್ಯಂ ಪಾದಕ್ಷೇಪಂ ಸಹಸ್ವಮೇ ॥

ಎಲೈ ಭಗವತಿಯಾದ ವಿಷ್ಣು ಪತ್ನಿಯೇ, ಸಮುದ್ರದಂತೆ ನಡುಕಟ್ಟು ಮತ್ತು ಪರ್ವತದಂತೆ ಸ್ತನವುಳ್ಳವಳೇ, ನಿನ್ನ ಮೇಲೆ ಕಾಲಿಟ್ಟ ನನ್ನ ಅಪರಾಧವನ್ನು ಮನ್ನಿಸು.

ಇದೇ ರೀತಿಯಾದ ಕ್ಷಮಾಪಣೆಯನ್ನೇ ಒಬ್ಬ ಬಡಗಿಯೂ ಸಹ ಮರವನ್ನು ಕಡಿದು ಮನೆಯ ಕಿಟಕಿ ಹಾಗೂ ಬಾಗಿಲುಗಳನ್ನು ಮಾಡುವಾಗ ಬೇಡುತ್ತಾನೆ :–

ಯಾನೀಹ ಭೂತಾನಿ ವಸಂತಿ ತಾನಿ ಬಲಿಂಗೃಹೀತ್ವಾ ವಿಧಿವತ್ ಪ್ರಯುಕ್ತಂ ।
ಅನ್ಯತ್ರವಾಸಂ ಪರಿಕಲ್ಪಯಂತು ಕ್ಷಮಂತು ತೇಽಚಾದ್ಯ ನಮೋಽಸ್ತು ತೇಭ್ಯಃ ॥

ಯಾವುದು ಅದರಲ್ಲಿ ಆಶ್ರಯ ಪಡೆದಿದೆಯೋ, ಅವು ಅದರಿಂದ ಹೊರಬಂದು ಮತ್ತೊಂದೆಡೆ ಆಶ್ರಯ ಪಡೆಯುವಂತಾಗಲಿ. ಅವು ನನ್ನನ್ನು ಕ್ಷಮಿಸಲಿ, ನಾನು ಅವುಗಳಿಗೆ ನಮಸ್ಕರಿಸುವೆ.

ಈ ದಿನಗಳಲ್ಲಿ ಪ್ರಕೃತಿಯ ರಕ್ಷಣೆಯ ಬಗ್ಗೆ ಬಹುವಾಗಿ ಕೇಳಿಬರುತ್ತಿದೆ. ಈ ದಿಸೆಯಲ್ಲಿ ಮಹಾಭಾರತದ ಒಂದು ಪ್ರಸಂಗವನ್ನು ಉದ್ಧರಿಸುವುದು ಅಸಂಗತವಾಗಬಾರದು. ಒಂದು ಸಲ ಪೃಥು ಚಕ್ರವರ್ತಿ ರಾಜ್ಯವಾಳುತ್ತಿದ್ದನು. ಭೂದೇವಿ ಬ್ರಹ್ಮನ ಬಳಿ ಬಂದು ಪೃಥು ತೊಂದರೆಕೊಡುತ್ತಿರುವನೆಂದು ದೂರು ನೀಡಿದಳು. ವಿಚಾರಿಸಿದಾಗ ರಾಜ ಭೂದೇವಿಯು ತನ್ನ ಪ್ರಜೆಗಳಿಗೆ ಸರಿಯಾದ ಸಾಕಾಗುವಷ್ಟು ಅನ್ನ ನೀಡುತ್ತಿಲ್ಲ ಎಂದು ಹೇಳಿದ. ಅದಕ್ಕೆ ಪ್ರತಿಯಾಗಿ ಭೂಮಿಯು ಹೇಳಿತು. ಜನರು ತನ್ನ ಮೇಲಿನ ಭಾಗವನ್ನು ಬಹಳ ಸವೆಸಿರುವುದರಿಂದ ತನ್ನ ಉತ್ಪಾದನಾ ಸಾಮರ್ಥ್ಯ ತಾನು ಕಳೆದುಕೊಂಡಿರುವುದಾಗಿ ಹೇಳಿತು. ಆಗ ಬ್ರಹ್ಮನು ಭೂಮಿಯನ್ನು ಹಸುವಿನ ರೂಪ ತಾಳುವಂತೆ ಆದೇಶವಿತ್ತು ಎಲ್ಲಾ ಹಾಲನ್ನು ನೀಡಲು ಆದೇಶಿಸಿದ. ಸ್ವಲ್ಪ ಸಮಯದವರೆಗೆ ಇದು ಚೆನ್ನಾಗಿ ನಡೆಯಿತು. ಸ್ವಲ್ಪ ಸಮಯದ ನಂತರ ಪೃಥು ಭಗವಂತನ ಬಳಿಹೋಗಿ ಪ್ರಜೆಗಳಿಗೆ ಮನೆಯಿಲ್ಲದೆ ಕಷ್ಟದಲ್ಲಿರುವರೆಂದು ತಿಳಿಸಿದ. ಆಗ ಭಗವಂತ ಭೂಮಿಯನ್ನು ಮೆತ್ತಗೆ ಅಗೆಯಿರಿ ಅದರಿಂದ ಭೂಮಿಗೆ ತೊಂದರೆಯಾಗಬಾರದೆಂದ.

ಈ ಪ್ರಪಂಚವು ಭಾರತೀಯರಲ್ಲಿ ಭೂಮಿಯನ್ನು ಸವೆಸಬಾರದೆಂಬ ಪ್ರಜ್ಞೆಯನ್ನು ಮನವರಿಕೆ ಮಾಡಿಕೊಡುತ್ತದೆ.

ಪುರಾಣ ಪ್ರಸಂಗವಾದ ಕೃಷ್ಣ ಪರಮಾತ್ಮ ಕಾಳಿಂಗ ಮರ್ದನ ಮಾಡುವುದು ಭಾರತೀಯರ ನೀರಿನ ಪ್ರದೂಷಣೆ ಮಾಡಬಾರದೆಂಬ ತತ್ವವನ್ನು ಹೊರಗೆಡಹುತ್ತದೆ. ಆ ಹಾವು ನದಿಯ ನೀರಿಗೆ ವಿಷವನ್ನು ಬೆರೆಸುತ್ತಿತ್ತು. ಸ್ಮೃತಿಗಳಲ್ಲಿ ನೀರಿನಲ್ಲಿ ಉಗುಳಬಾರದು, ನೀರನ್ನು ಮಲಿನಗೊಳಿಸಬಾರದೆಂಬುದಕ್ಕೆ ನಿಯಮಗಳನ್ನು ವಿಧಿಸಲಾಗಿದೆ. ಆಹಾರ ಮಿಕ್ಕಿದ್ದರೆ ಅದನ್ನು ನೀರಲ್ಲಿ ಹಾಕಬಾರದೆಂಬ ನಿಯಮವೂ ಸಹ ಇದೆ. ಇದರ ಹಿನ್ನಲೆಯೆಂದರೆ ಪರಿಶುದ್ಧವಾದ ಆರೋಗ್ಯಕರವಾದ ನೀರನ್ನು ರಕ್ಷಿಸುವುದೇ ಆಗಿತ್ತು.

ನಮ್ಮ ಪೂರ್ವದ ಭಾರತೀಯರು ಪ್ರಕೃತಿ ತಮಗೆ ಬೇಕೆಂದೂ, ಪ್ರಕೃತಿಗೂ ತಾವು ಬೇಕೆಂಬ ತತ್ವವನ್ನು ಅರಿತಿದ್ದರು. ಇದನ್ನೇ ಮಹಾಭಾರತದಲ್ಲಿ ಶ್ಲೋಕದ ಮುಖಾಂತರ ನಿರೂಪಿಸಲಾಗಿದೆ ಕಾಡಿಲ್ಲದೆ ಹುಲಿಯು ಕೊಲ್ಲಲ್ಪಡುತ್ತದೆ ಹುಲಿಯಿಲ್ಲದೆ ಕಾಡು ನಾಶವಾಗುತ್ತದೆ ಎಂದು.

ನಿರ್ವನೋ ವಧ್ಯತೇ ವ್ಯಾಘ್ರೋ ನಿರ್ವ್ಯಾಘ್ರಂ ಛಿದ್ಯತೇ ವನಮ್ ।

ಭಾರತೀಯರು ಪ್ರಕೃತಿಯನ್ನು ಗೌರವ, ಭಕ್ತಿ, ಕರುಣೆ ಹಾಗೂ ನಮ್ರತೆಯಿಂದ ಕಾಣುತ್ತಿದ್ದರು. ಇದು ಇವರಿಗೆ ಸ್ನೇಹಮಯವಾದ ರೀತಿಯಲ್ಲಿ ಪ್ರಕೃತಿಗೆ ಸಂಬಂಧಿಸಿದ ತೊಂದರೆಗಳನ್ನು ನಿವಾರಿಸಲು ಸಹಾಯಕವಾಗುತ್ತಿತ್ತು. ಅವರಿಗೆ ಪ್ರಕೃತಿಯ ಪ್ರತಿಯೊಂದು ಅಂಶದಲ್ಲಿ ಶಾಂತಿ ಹಾಗೂ ಸೌಹಾರ್ದತೆಯು ಅಪೇಕ್ಷೆಯಿದ್ದದ್ದರಿಂದಲೇ ಅನೇಕ ಪ್ರಾರ್ಥನೆಗಳು ಸಲ್ಲಿಸಲ್ಪಡುತ್ತಿತ್ತು. ಅತ್ಯಂತ ಜನಜನಿತವಾದ ಅಥರ್ವವೇದದ

ವಾಣಿಯೆಂದರೆ ಭೂಮಿ, ಅಂತರಿಕ್ಷ, ಜಲ, ಪ್ರಕೃತಿ, ಸಸ್ಯಗಳು ಶಾಂತವಾಗಿರಲಿ ಎಂಬುದು ಎಲ್ಲೆಲ್ಲೂ ಶಾಂತಿ ಇರಲಿ ಎಂಬುದು.

ದ್ಯೌಃಶಾಂತಿಃ ಪ್ರಥಿವೀಶಾಂತಿಃ ಆಪಃಶಾಂತಿಃ,
ಓಷಧಯಃ ಶಾಂತಿಃ ...ಶಾಂತಿರೇವ ಶಾಂತಿಃ ।

ಭಾರತೀಯ ಸಮಾಜವನ್ನು ಬೆಸೆದಿರುವುದೇ ಈ ಮಾನವೀಯ ಮೌಲ್ಯಗಳು. ಭಾರತೀಯತೆ ಮೂಲತಃ ಅದನ್ನು ಬೋಧಿಸುತ್ತದೆ. ಅದರಲ್ಲಿ ಕೆಲವು ನಿತ್ಯವಾದುದು ಮತ್ತೆ ಕೆಲವು ಭಾರತೀಯ ಸಂಪ್ರದಾಯವನ್ನನುಸರಿಸಿ ರೂಪುಗೊಂಡಿದೆ. ಪ್ರಸಕ್ತ ಭಾರತೀಯರಲ್ಲಿ ಮಾನವೀಯ ಮೌಲ್ಯಗಳ ಬಗ್ಗೆ ಇರುವ ಗೌರವ ಕುಸಿಯುತ್ತಿರುವುದು ವಿಷಾದನೀಯ.

ಈ ದಿಸೆಯಲ್ಲಿ ಪ್ರೋತ್ಸಹವನ್ನಿತ್ತು ಕಳೆದುಹೋಗುವ ಅಂಚಿನಲ್ಲಿ ಮೌಲ್ಯಗಳನ್ನು ಪುನಃ ಪ್ರತಿಷ್ಠಾಪಿಸುವುದೇ ಆಗಿದೆ. ಪ್ರಸಕ್ತ ಪುಸ್ತಕ ಆ ದಿಸೆಯಲ್ಲಿ ಸಮರ್ಪಿತವಾಗಿದೆ.

# 1. ಅಹಿಂಸೆ

ಅಹಿಂಸಾಪರಮೋಧರ್ಮಃ - ಅಹಿಂಸೆಯೇ ಉತ್ಕೃಷ್ಟವಾದ ಗುಣ ಎಂಬುದು ಶ್ಲೋಕದ ನಾಲ್ಕನೆಯ ಒಂದು ಭಾಗವಾಗಿದ್ದು ಭಾರತೀಯರಲ್ಲಿ ಜನಜನಿತವಾಗಿದೆ. ಇದು ಯಾವುದೇ ಜೈನಗ್ರಂಥದಿಂದ ಉದ್ಧರಿಸಿಲ್ಲ, ಏಕೆಂದರೆ ಜೈನರು ಅಹಿಂಸೆಯನ್ನು ಮೂಲತತ್ವವನ್ನುಳ್ಳವರಾಗಿದ್ದಾರೆ. ಮಹಾಭಾರತದಲ್ಲಿ ಈ ಹೇಳಿಕೆಯಿದೆ. ಸಂದರ್ಭವೆಂದರೆ ಶರಶಯ್ಯೆಯಲ್ಲಿರುವ ಭೀಷ್ಮರನ್ನು ಕುರಿತು ಯುಧಿಷ್ಠಿರ ಕೇಳುವಂತಹ ಮಾಲಾಕಾರದ ಪ್ರಶ್ನೆಗಳು. ಅನುಸಾಶನ ಪರ್ವದಲ್ಲಿ ಯಾವ ರೀತಿ ಮಾನವ ದುಃಖದಿಂದ ಹೊರಬರಲು ಸಾಧ್ಯ ಏಕೆಂದರೆ ಮಾತು, ಕೃತಿ ಹಾಗೂ ಮನಸ್ಸಿನಲ್ಲಿ ಕ್ರೌರ್ಯದಿಂದ ಕೂಡಿರುವಾಗ ಅಹಿಂಸೆಯೆಂದರೆ ಕಾಯಾ, ವಾಚಾ, ಮಾನಸಿಕವಾಗಿ ನಾವು ಹಿಂಸೆಯಿಂದ ದೂರವಿರಬೇಕು. ಈ ಮಾತು ಸುಂದರವಾದ ಉಪಮಾಲಂಕಾರದಿಂದ ನಿರೂಪಿಸಲಾಗಿದೆ. ನಾಲ್ಕು ಕಾಲುಗಳುಳ್ಳ ಪ್ರಾಣಿಯು ಮೂರು ಕಾಲುಗಳಿಂದಲೇ ಜೀವಿಸಲಾರದು. ಹಾಗೇ ಮುಂದುವರೆಸಿ ಆನೆಯ ಒಂದು ಕಾಲಿನಲ್ಲಿ ಅನೇಕ ಸಣ್ಣ ವಸ್ತುಗಳಿರಬಹುದಾದಂತೆ ಎಲ್ಲಾ ಒಳ್ಳೆಯ ಅಂಶಗಳೂ ಸಹ ಅಹಿಂಸೆಯಲ್ಲೇ ಹುದುಗಿದೆ. ಅದೇ ಅಹಿಂಸೆಯ ಸ್ಥಾನವು. ಮಾಂಸಾಹಾರವನ್ನು ತ್ಯಜಿಸಬೇಕು. ಅದಕ್ಕೆ ಪೂರ್ವಭಾವಿಯಾಗಿ ಮೂರು ವಿಷಯಗಳಿದೆ. ಮೊದಲಿಗೆ ನಾನು ಮಾಂಸಾಹಾರ ಮುಟ್ಟುವುದಿಲ್ಲವೆಂದು ದೃಢ ನಿಲುವನ್ನು ತಾಳಬೇಕು. ಇದು ಮನೋಸ್ಥೈರ್ಯವು. ಅನಂತರ ಅವನು ಯಾವುದೇ ರೀತಿಯ ಮಾಂಸವನ್ನೂ ಮುಟ್ಟುವುದಿಲ್ಲವೆಂದು ನಿರ್ಧರಿಸಿಕೊಳ್ಳಬೇಕು. ಈ ಮಾಂಸವಲ್ಲ, ಆ ಮಾಂಸವಲ್ಲ ಎಂದಲ್ಲಿ ಕೆಲವರು ಹೇಳುವಂತೆ ನಾನು ಹಂದಿಮಾಂಸ ತಿನ್ನುವುದಿಲ್ಲ, ಹಸುವಿನ ಮಾಂಸ ತಿನ್ನುವುದಿಲ್ಲ, ಆದರೆ, ಅವರು ಕೋಳಿಯನ್ನು ಅಥವಾ ಮೀನನ್ನು ತಿನ್ನುತ್ತಾರೆ, ಮೂರನೆಯದಾಗಿ ಅವನು ಯಾವ ಪ್ರಾಣಿಯನ್ನೂ ಕೊಲ್ಲಬಾರದು. ಇದೇ ನಿಜವಾದ ಹಿಂಸೆಯಿಂದ ಹೊರಬರುವ ದಾರಿ. ಅನಂತರ ಭೀಷ್ಮಾಚಾರ್ಯರು ಮಾಂಸಾಹಾರದ ವಿರುದ್ಧ ದೃಢವಾಗಿ ಹೇಳುತ್ತಾರೆ. ಮಂಸಾಹಾರವನ್ನು ಅನುಮೋದಿಸಿ ಮಾತನಾಡುವವರಿಗೇನೂ ಕಡಿಮೆಯಲ್ಲ. ಅದು ದೇಹಕ್ಕೆ ಕೊಬ್ಬಿನ ಅಂಶವನ್ನು ನೀಡುತ್ತದೆ. ಅದು ದೇಹದ ತೂಕವನ್ನು ಹೆಚ್ಚಿಸುತ್ತದೆ. ಸಾಮಾನ್ಯವಾದ ಹೇಳಿಕೆಯೆಂದರೆ ಮಾಂಸಂ ಮಾಂಸೇನ ವರ್ಧತೇ (ಮಾಂಸವು ಮಾಂಸದಿಂದ ವರ್ಧಿಸುತ್ತದೆ) ಇದು ಕೇವಲ ಅವರ ವರ್ಣಫಲಕದಂತೆ ಮಾತ್ರವು. ಈ ರೀತಿಯಾದ ಮಾಂಸಾಹಾರದ ಅನುಮೋದನೆ ವಿನಾಶಕಾರಿಯಾದುದು ಭೀಷ್ಮರ ಪ್ರಕಾರ. ಚಾರಿತ್ರಿಕವಾಗಿ ಉಲ್ಲೇಖಿಸಿರುವಂತೆ ಸತ್ಪುರುಷರು ತಮ್ಮ ಜೀವವನ್ನು ಮಾಂಸವನ್ನು ನೀಡಿ ಬೇರೆಯವರಿಗೆ ಸಹಕರಿಸಿದ್ದಾರೆ. ಸ್ವಮಾಂಸಂ ಪರಮಾಂಸೇನ ಪರಿಪಾಲ್ಯ ಮತ್ತು ಸ್ವರ್ಗವನ್ನು ಹೊಂದಿದ್ದಾರೆ - ದಿವಂಗತಾಃ. ಇದು ಅಹಿಂಸೆಯ ಬಗ್ಗೆ ಭೀಷ್ಮರ ವ್ಯಾಖ್ಯಾನವಾಗಿದ್ದರೂ ಯುಧಿಷ್ಠಿರನಿಗೆ ಅದರ ಬಗ್ಗೆ ನಂಬಿಕೆಯುಂಟಾಗಲಿಲ್ಲ. ಭೀಷ್ಮನ ಪೂರ್ವಾಪರ ವಿರುದ್ಧ ಹೇಳಿಕೆಗಳಿಗೆ ಹೇಗೆ ಪರಿಹರಿಸಿಕೊಳ್ಳಬೇಕೆಂಬ ಅಹಿಂಸೆಯ ಬಗ್ಗೆ ''ಪರಮೋ ಧರ್ಮಃ'' ಮತ್ತು ಅದೇ ಹೊತ್ತಿನಲ್ಲೆ

ಶ್ರದ್ಧೆಯಿಂದ ವಿಭಿನ್ನ ರೀತಿಯ ಮಾತುಗಳಿಂದ ಪಿತೃಗಳಿಗೆ ಹೇಗೆ ಶ್ರಾದ್ಧ ಮಾಡಬೇಕು. ಪ್ರಾಣಿ ಹಿಂಸೆ ಮಾಡದೆ ಮಾಂಸವನ್ನು ಗಳಿಸುವುದಾದರೂ ಹೇಗೆ? ಕೊಲ್ಲದೆ ಮಾಂಸವನ್ನು ನೀಡುವುದು ಎಂಬುದು ಪರಸ್ಪರ ವಿರುದ್ಧವಾಗಿದ್ದು ಒಂದನ್ನೊಂದು ಹೊರಗೆಡಹುತ್ತದೆ. ಭೀಷ್ಮರ ಹಿಂದಿನ ಹೇಳಿಕೆಯಂತೆ ಮಾಂಸವನ್ನು ನಿರಾಕರಿಸುವುದೆಂಬ ಬಗ್ಗೆ ಧರ್ಮಜನಿಗೆ ಸಂದೇಹ ''ಜಾತೇನೋ ಸಂಶಯೋ ಧರ್ಮೇ ಮಾಂಸಸ್ಯ ಪರಿವರ್ಜನೇ'' ಭೀಷ್ಮನಿಂದ ವಿವರಣೆ ಬಯಸುವ ವಿಷಯವೆಂದರೆ ಮಾಂಸಾಹಾರ ವರ್ಜನೆಯಿಂದಾಗುವ ಪ್ರಯೋಜನ, ಅದನ್ನು ವರ್ಜಿಸುವುದಿಲ್ಲವಾದರೆ ಆಗುವ ಹಾನಿಯೇನು? ಅದಕ್ಕಿಂತಲೂ ಹೆಚ್ಚಾಗಿ ಮಾಂಸವನ್ನು ವರ್ಜಿಸುವುದರಿಂದ ಹಿಂಸೆ ಹೇಗೆ ವರ್ಧಿಸುತ್ತದೆ? ಯಾರು ಪ್ರಾಣಿಗಳನ್ನು ಕೊಂದು ಅದರ ಮಾಂಸವನ್ನು ಸೇವಿಸುವರೋ, ಬೇರೆಯವರು ಕೊಟ್ಟ ಮಾಂಸವನ್ನು ಯಾರು ತಿನ್ನುವರೋ, ಯಾರು ಮಾಂಸವನ್ನು ಕೊಂಡು ಭುಂಜಿಸುವರೋ, ಈ ಎಲ್ಲಾ ಅಂಶಗಳಲ್ಲೂ ಯುಧಿಷ್ಠಿರನಿಗೆ ಭೀಷ್ಮನಿಂದ ಸಲಹೆ ಬೇಕು. ತಮ್ಮ ಉತ್ತರ ರೂಪವಾದ ಪ್ರತಿ ಕ್ರಿಯೆಯಲ್ಲಿ ಭೀಷ್ಮರು ಮಾಂಸಾಹಾರವನ್ನು ತ್ಯಜಿಸುವುದರ ಬಗ್ಗೆ ಒತ್ತಿ ಹೇಳುವರು, ಯುಧಿ ಷ್ಠಿರನ ಮೊದಲ ಪ್ರಶ್ನೆಯೆಂದರೆ ಮಾಂಸಾಹಾರ ತ್ಯಜಿಸುವುದರಿಂದಾಗುವ ಒಳಿತೇನು? ಅದಕ್ಕೆ ಭೀಷ್ಮರ ಉತ್ತರವೆಂದರೆ ಅದು ಸುಂದರವಾದ ದೇಹವನ್ನು ನೀಡಿ, ಶರೀರದ ಯಾವ ಅಂಗಾಂಗವೂ ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳದಂತೆ ನೋಡಿಕೊಂಡು ಅವನ ಆಯಸ್ಸನ್ನು ಹೆಚ್ಚಿಸುತ್ತದೆ. ಅವನು ದೈಹಿಕ ಮಾನಸಿಕ ಶಕ್ತಿಯನ್ನು ವೃದ್ಧಿಪಡಿಸಿ ಜ್ಞಾಪಕಶಕ್ತಿಯನ್ನೂ ಸಹ ಹೆಚ್ಚಿಸುತ್ತದೆ. ಮಾಂಸಾಹಾರವನ್ನು ಬಿಟ್ಟರೆ ಪ್ರತಿ ತಿಂಗಳೂ ಅಶ್ವಮೇಧಯಾಗ ಮಾಡಿದ ಫಲವುಂಟಾಗುತ್ತದೆ. ಒಂದು ಬಾರಿ ಮಾಂಸಾಹಾರಕ್ಕೆ ರೂಢಿಯಾದರೆ ಅದನ್ನು ಬಿಡುವುದು ಸುಲಭವಲ್ಲ. ವೇದ ಹಾಗೂ ಶಾಸ್ತ್ರಗಳು ಅಂತಹವರನ್ನು ಹೊರಹಾಕುತ್ತದೆ. ಅಹಿಂಸೆಯೇ ಅತ್ಯಂತ ಶ್ರೇಷ್ಠ ಗುಣ. ಅದೇ ಅತಿ ಕಠಿಣವಾದ ತಪಸ್ಸು. ಅದೇ ಪರಮತತ್ವವು, ಅದರಿಂದಲೇ ಧರ್ಮವೂ ಹರಿಯುವುದು :-

ಅಹಿಂಸಾ ಪರಮೋಧರ್ಮಸ್ತಥಾಹಿಂಸಾ ಪರಮಂತಪಃ ।
ಅಹಿಂಸಾ ಪರಮಂಸತ್ಯಂ ಯತೋ ಧರ್ಮಃ ಪ್ರವರ್ತತೇ ॥

ಈಗ ಯುಧಿಷ್ಠಿರನ ಎರಡನೆಯ ಪ್ರಶ್ನೆಯೆಂದರೆ ಮಾಂಸ ತಿನ್ನುವುದರಿಂದಾಗುವ ನಷ್ಟವೇನು? ಅದಕ್ಕೆ ಭೀಷ್ಮರ ಉತ್ತರವೆಂದರೆ ಮಾಂಸವು ಹುಲ್ಲಿನಿಂದಾಗಲೀ, ಮರದಿಂದಾಗಲೀ, ಕಲ್ಲಿನಿಂದಾಗಲೀ ಗಳಿಸಲು ಸಾಧ್ಯವಿಲ್ಲ. ಒಂದು ಜೀವವನ್ನು ಕೊಲ್ಲುವುದರಿಂದ ಅದು ದೊರೆಯುತ್ತದೆ, ಅದನ್ನು ಸೇವಿಸುವುದು ಅತ್ಯಂತ ಕೆಟ್ಟದ್ದು. ತಸ್ಮಾದ್ ದೋಷಸ್ತು ಭಕ್ಷಣೇ. ಇಲ್ಲಿ ಭೀಷ್ಮರು ಒಂದು ಒಳ್ಳೆಯ ಅಂಶ ಹೇಳಿದ್ದಾರೆ. ಒಂದು ವೇಳೆ ಮಾಂಸಾಹಾರಿಗಳೇ ಇಲ್ಲವಾಗಿದ್ದರೆ, ಕಟುಕರೇ ಇರುತ್ತಿರಲಿಲ್ಲ. ಕಟುಕರು ಜೀವಿಸಿರುವುದೇ ಅವರಿಂದ. ಮಾಂಸಾಹಾರಿಗಳು ಮಾಂಸವನ್ನು ಕೊಳ್ಳುವುದರಿಂದ ಯಾರು ಒದ್ದಾಡುತ್ತಿರುವ ಜೀವಿಯನ್ನು ಕೊಲ್ಲುತ್ತಾರೋ ಅವರೇ ಕಟುಕರು. ಯಾವ ಕಟುಕ ಒಂದು

ಜೀವಿಯನ್ನು ಕಟ್ಟಿಹಾಕಿ ಅದನ್ನು ಕೊಲ್ಲುವನೋ ಅವನಿಗಿಂತಲೂ ಯಾರು ಮಾಂಸವನ್ನು ಕೊಂಡು ಅದರಿಂದ ತೃಪ್ತಿಪಡುವವರೋ ಆ ಕಟುಕನಿಗಿಂತಲೂ ಯಾವುದೇ ರೀತಿಯಲ್ಲಿ ಭಿನ್ನರಲ್ಲ. ಇದು ಮೂರು ರೀತಿಯ ಕೊಲ್ಲುವಿಕೆ. ಏಷತ್ರಿವಿಧೋ ವಧಃ।

ಎರಡನೆಯ ಬಾರಿ ಭೀಷ್ಮನು ಇಲ್ಲಿ ಈ ಅಂಶವನ್ನು ನಿರೂಪಿಸಿರುವುದು. ಹಿಂದಿನ ಕಾಲದಲ್ಲಿ ಜನರು ಅಕ್ಕಿಯಿಂದ ಪ್ರಾಣಿಯನ್ನು ಮಾಡುತ್ತಿದ್ದರು – ವ್ರೀಹಿಮಯಃ ಪಶುಃ ಮತ್ತು ಅದನ್ನು ಯಜ್ಞದಲ್ಲಿ ಬಲಿಯ ರೂಪದಲ್ಲಿ ಸಮರ್ಪಿಸುತ್ತಿದ್ದರು. ಪ್ರಾಣಿಗಳನ್ನು ಕೊಲ್ಲುವುದಕ್ಕೆ ಮುಂಚೆ ಅದಕ್ಕೆ ಪ್ರೋಕ್ಷಣೆ ಮಾಡಬೇಕು (ವಿಧಿಗನುಗುಣವಾಗಿ) ಅನಂತರವೇ ಅದರ ಮಾಂಸವು ಸೇವಿಸಲ್ಪಡುತ್ತದೆ. ಇದು ಚೇದಿ ಪ್ರಾಂತ್ಯದ ರಾಜನಾದ ವಸುವಿನ ಆದೇಶವಾಗಿತ್ತು. ಅನಂತರ ಭೀಷ್ಮರು ಋತುಗಳನ್ನು ವರ್ಣಿಸುತ್ತಾರೆ. ಯಾವ ತಿಂಗಳು ಹಾಗೂ ವಾರದ ಯಾವ ದಿನಗಳಲ್ಲಿ ಮಾಂಸವನ್ನು ತ್ಯಜಿಸಬೇಕು? ಅವರು ಎಷ್ಟೋ ಕಾಲ ಮಾಂಸವನ್ನು ಬಿಟ್ಟರೆ ಅಷ್ಟಕ್ಕೇನೇ ಅವರು ಸಾಧಿಸಿದಂತಾಗುತ್ತದೆ.

ಈ ಸಮಯಕ್ಕೆ ಸರಿಯಾಗಿ ಭೀಷ್ಮರು ಮಾಂಸ ವರ್ಜಿಸಿದ ರಾಜರ ಪಟ್ಟಿಯನ್ನು ನೀಡುತ್ತಾರೆ ಮತ್ತು ಅವರು ಹೇಗೆ ಸ್ವರ್ಗಕ್ಕೆ ಹೋದರೆಂದೂ ನಿರೂಪಿಸುತ್ತಾರೆ. ಪವಿತ್ರ ಸಂತತಿ ಅಹಿಂಸಾ ತತ್ಪರರಾಗಿದ್ದು ಮಾಂಸ ಮತ್ತು ಮದ್ಯವರ್ಜಿತರಾಗಿ ಹುಟ್ಟಿನಿಂದಲೇ ಇರುತ್ತಾರೋ ಅವರನ್ನು ಮುನಿಗಳೆಂದು ಪರಿಗಣಿಸಲ್ಪಡುತ್ತಾರೆ – ಈ ಹಂತದಲ್ಲಿ ಭೀಷ್ಮರಿಂದ ಹೊರಹೊಮ್ಮುವ ಮಾಂಸ ನಿಷೇಧಾತ್ಮಕವಾಗಿದ್ದು ಗುಣಗಾನರೂಪವಾಗಿ ಸ್ತೋತ್ರದ ಸ್ವರೂಪವನ್ನೇ ತಾಳುತ್ತದೆ ಮತ್ತು ಕೊನೆಗೆ ಫಲಶ್ರುತಿಯೂ ಇರುತ್ತದೆ. ಯಾರು ಮಾಂಸವನ್ನು ತಿನ್ನುವುದಿಲ್ಲವೋ ಅವರು ಖಂಡಿತವಾಗಿಯೂ ನರಕಕ್ಕೆ ಹೋಗುವುದಿಲ್ಲ ದುರಾಚಾರಿಗಳಾಗಿದ್ದರೂ ಸಹ ಯಾರು ಈ ಭೀಷ್ಮರಿಂದ ಹೇಳಲ್ಪಟ್ಟ ಸ್ತೋತ್ರವನ್ನು ಉಚ್ಚರಿಸುತ್ತಾರೋ ಅಥವಾ ಕೇಳುತ್ತಾರೋ ಅವರು ಸರ್ವ ಪಾಪಮುಕ್ತರಾಗಿ ಇಷ್ಟಾರ್ಥಗಳನ್ನೆಲ್ಲಾ ಸಾಧಿಸಿಕೊಳ್ಳುತ್ತಾರೆ.

ಪಠೇದ್‌ವಾ ಇದಂ ರಾಜನ್ ಶೃಣುಯಾದ್ ವಾಪ್ಯಭೀಕ್ಷ್ಣಶಃ।
ವಿಮುಕ್ತಃ ಸರ್ವಪಾಪೇಭ್ಯಃ ಸರ್ವಕಾಮ್ಯೈರ್ಮಹೀಯತೇ ॥

ಈ ಸ್ತೋತ್ರವು ಯುಧಿಷ್ಠಿರ – ಭೀಷ್ಮರ ಮಾಂಸಾಶನ ಸಂವಾದದ ಕೊನೆಯಲ್ಲಿ ಬರುತ್ತದೆ. ಯುಧಿಷ್ಠಿರನಿಗೆ ಅರ್ಥವಾಗದ ವಿಷಯವೆಂದರೆ ಯಾವಾಗ ತರಕಾರಿಗಳು, ಸಿಹಿತಿಂಡಿ ತಿನಿಸುಗಳು, ಕಡುಬು ಮುಂತಾದ ತಿನಿಸುಗಳಿರುವಾಗ ಏತಕ್ಕೋಸ್ಕರ ಜನರು ಮಾಂಸಾಹಾರಿಯಾಗುತ್ತಾರೆ? ಹಾಗಾಗ್ಯೂ ಅವರು ಮಾಂಸವನ್ನೇ ಬಯಸುವುದಾದರೆ ಅವರಿಗೆ ಅದಕ್ಕಿಂತ ರುಚಿಕರವಾದುದು ಯಾವುದೂ ಇಲ್ಲವೆಂದಾಗುತ್ತದೆ. ಯುಧಿಷ್ಠಿರನಿಗೆ ಭೀಷ್ಮರು ಮತ್ತೂ ವಿಸ್ತಾರವಾಗಿ ಮಾಂಸನಿಷೇಧದ ಮಾತನ್ನು ವಿವರಿಸಲೆಂದು ಹೇಳುತ್ತಾರೆ. ನಿಜವಾಗಿಯೂ ಸಹ ಮಾಂಸವು ಅತ್ಯಂತ ರುಚಿಕರ ಅದು ಗಾಯಾಳುಗಳಿಗೆ, ದೇಹ ಸವೆದವರಿಗೆ, ತೊಂದರೆಗೀಡಾದವರಿಗೆ ಅತ್ಯಂತ ಕಠಿಣವಾದ ದಿನಚರಿಯಿರುವವರಿಗೆ,

ಒಂದೇ ಸಮನೆ ಪ್ರಯಾಣ ಮಾಡಿ ದಣಿವನ್ನು ನಿವಾರಿಸಿಕೊಳ್ಳುವವರಿಗೆ. ನೂತನವಾದ ಉಸಿರಾಟವನ್ನುಂಟುಮಾಡಿ, ದೈಹಿಕ ಶಕ್ತಿಯನ್ನು ವೃದ್ಧಿಗೊಳಿಸುತ್ತದೆ. ಆಹಾರದ ದೃಷ್ಟಿಯಿಂದ ಅದಕ್ಕೆ ಸಮಾನವಾದುದು ಯಾವುದೂ ಇಲ್ಲ. ಹಾಗೆಂದ ಮಟ್ಟಿಗೆ ಅದಕ್ಕೆ ದಾಸರಾಗಬೇಕಾಗಿಲ್ಲ. ಯಾರು ಬೇರೆಯವರ ಮಾಂಸದಿಂದ ತನ್ನ ಮಾಂಸವನ್ನು ವೃದ್ಧಿಸಿಕೊಳ್ಳಲು ಬಯಸುವರೋ ಅವರು ಹೇಯರಾದವರಲ್ಲಿ ಹೇಯರು ಮತ್ತು ಕ್ರೂರಿಗಳಾದವರಲ್ಲಿ ಕ್ರೂರಿಗಳು. ಈ ಜಗತ್ತಿನಲ್ಲಿ ಪ್ರಾಣಕ್ಕಿಂತಲೂ ಪ್ರಿಯವಾದುದು ಯಾವುದೂ ಇಲ್ಲ. ಒಬ್ಬನು ತನ್ನ ಪ್ರಾಣವನ್ನು ಹಿಡಿದುಕೊಳ್ಳಬೇಕಾದರೆ ಬೇರೆಯವರ ಪ್ರಾಣವನ್ನು ತೆಗೆಯಬೇಕಾಗಿಲ್ಲ. ಅವನು ತನ್ನ ಬಗ್ಗೆ ಹೇಗೆ ನಡೆದುಕೊಳ್ಳುವನೋ ಇತರರ ಬಗ್ಗೆಯೂ ಅದೇ ರೀತಿ ನಡೆದುಕೊಳ್ಳಬೇಕು. ಮಾಂಸದಿಂದ ದೂರವಿರುವುದು ಶ್ರೇಯಸ್ಕರ, ಅವನ್ನು ಭುಂಜಿಸುವುದೇ ಅಶ್ರೇಯಸ್ಕರ.

ಈಗ ನಮ್ಮ ಮುಂದಿರುವುದೇ ಅನುಸಿದ್ಧಾಂತ, ವೈದಿಕ ಅನುಷ್ಠಾನದ ದೃಷ್ಟಿಯಿಂದ ಮಾಂಸ ತಿನ್ನುವುದು ತಪ್ಪಲ್ಲ ಎಂದು ಭೀಷ್ಮರು ನುಡಿಯುತ್ತಾರೆ. ಶೃತಿಯು ಹೇಳುವಂತೆ ಅದು ಕೇವಲ ಯಜ್ಞದ ದೃಷ್ಟಿಯಿಂದ. ಹಾಗೆ ಮಾತ್ರವಲ್ಲದೆ, ಕ್ಷತ್ರಿಯರಿಗೆ ಬೇರೆ ನಿಯಮವೇ ಇದೆ. ಅವರು ತಮ್ಮ ಪ್ರಾಣವನ್ನು ಲೆಕ್ಕಿಸದೆ ಪ್ರಾಣಿಗಳನ್ನು ಕೊಲ್ಲಬೇಕಾಗುತ್ತದೆ. ಆಗ ಅದು ಅವರ ಮೇಲೆ ಎರಗಿ ಹಿಂಸಿಸಬಹುದು. ಬೇಟೆಯಾಡುವುದು ಅವರಿಗೆ ನಿಷೇಧವಲ್ಲ. ಆದ್ದರಿಂದಲೇ ಅಗಸ್ತ್ಯರು ಅದನ್ನು ಅನುಮೋದಿಸಿದರು. ಬೇಟೆಯಾಡುವಾಗ ಕೊಲ್ಲುವುದು ಪಾಪವಲ್ಲ.

ಆದರೆ ಇದು ಕೇವಲ ಅಪವಾದವೇ ಹೊರತು ನಿಯಮವಲ್ಲ. ಭೀಷ್ಮರು ತಾವು ಹಿಂದೆ ಪ್ರತಿಪಾದಿಸಿದಂತೆ ಭೂತದಯೆಗೆ ಹಿಂದಿರುಗುತ್ತಾರೆ. ಯಾವ ಜೀವಿಯೂ ಸಾಯಲು ಬಯಸುವುದಿಲ್ಲ, ಹಾಗಿದ್ದರೆ ಅದರ ಜೀವವನ್ನೇಕೆ ಉಳಿಸಬೇಕು?

ಅಹಿಂಸೆಯೆಂದರೆ ಯಾವ ಜೀವಿಯನ್ನೂ ಕೊಲ್ಲದಿರುವುದು, ಭೀಷ್ಮರ ಪ್ರಕಾರ ಅದೇ ಮಾನವನ ಸರ್ವಶ್ರೇಷ್ಠ ಗುಣವು. ತನ್ನ ಬಗ್ಗೆ ಇರುವ ನಿಯಂತ್ರಣ, ಹೆಚ್ಚಿನ ದಾನ, ಹೆಚ್ಚಿನ ತಪಸ್ಸು, ಹೆಚ್ಚಿನ ತ್ಯಾಗ, ಅತ್ಯುತ್ತಮವಾದ ಹಣ್ಣು, ಅತ್ಯುತ್ತಮ ಸ್ನೇಹಿತ ಮತ್ತು ಅತ್ಯುತ್ತಮ ಸುಖ, ಇವು ಎಲ್ಲ ರೀತಿಯ ದಾನಗಳನ್ನು ಬಲಗೊಳ್ಳುತ್ತದೆ, ಎಲ್ಲ ಪವಿತ್ರ ಜಲಗಳಲ್ಲೂ ಮಿಂದಂತೆ. ಎಲ್ಲ ದಾನಗಳ ಫಲವೂ ಅದಕ್ಕೆ ಸಮವಾದುದಲ್ಲ. ಅದರ ಗುಣಗಳನ್ನು 100 ವರ್ಷಾವಧಿಯಲ್ಲೂ ಸಹ ಎಣಿಸಲಾಗುವುದಿಲ್ಲ ಎಂದು ಭೀಷ್ಮರು ಮುಕ್ತಾಯ ಮಾಡುತ್ತಾರೆ.

ಅಹಿಂಸಾ ಪರಮೋ ಧರ್ಮಸ್ತಥಾಹಿಂಸಾ ಪರೋದಮಃ ।
ಅಹಿಂಸಾ ಪರಮಂ ದಾನಂ ಅಹಿಂಸಾ ಪರಮಂ ತಪಃ ॥
ಅಹಿಂಸಾ ಪರಮೋ ಯಜ್ಞ ಸ್ತಥಾ ಹಿಂಸಾ ಪರಂ ಫಲಂ ।
ಅಹಿಂಸಾ ಪರಮಂ ಮಿತ್ರಂ ಅಹಿಂಸಾ ಪರಮಂ ಸುಖಂ ॥
ಸರ್ವಯಜ್ಞೇಷು ವಾ ದಾನಂ ಸರ್ವತೀರ್ಥೇಷು ವಾ ಫಲಂ ।
ಅಹಿಂಸಾಯ "ನಹಿಶಕ್ಯಾ ಗುಣಾ ವಕ್ತುಂ ವರ್ಷಶತೈರಪಿ" ॥

ಹಿಂಸೆ ಅಥವಾ ಕ್ರೌರ್ಯವನ್ನು ಮಾನಸಿಕವಾಗಿ, ಮಾತಿನಿಂದ, ಕೃತ್ಯದಿಂದ ಮಾಡಬಹುದು – ಮನೋ ವಾಕ್ಕಾಯ, ಅಹಿಂಸೆಯೆಂದರೆ ತ್ರಿಕರಣಶುದ್ಧಿಯು. ಇದರ ಮೂಲೋದ್ದೇಶವೆಂದರೆ ಯಾರಿಗೂ ಗಾಯಗೊಳಿಸದಿರುವುದು, ಕೊಲ್ಲುವುದು ಎಂಬುದಕ್ಕೆ ಯಾವ ವಿವರಣೆಯೂ ಬೇಕಿಲ್ಲ. ಮಾನಸಿಕವಾದ ಕ್ರೌರ್ಯವು ಬೇರೆಯವರ ಬಗ್ಗೆ ಕೆಟ್ಟದ್ದನ್ನು ಯೋಚಿಸುವುದರಿಂದ ಕೆಟ್ಟ ತರಂಗಗಳನ್ನು ಎಬ್ಬಿಸುತ್ತದೆ. ಅದನ್ನು ವೈಜ್ಞಾನಿಕವಾಗಿ ವಿವರಿಸಲು ಆಗದಿದ್ದರೂ ಸಹ ಕೆಟ್ಟ ಭಾವನೆಗಳು, ನಿಃಶಬ್ದವಾದ ಶಾಪವಾದರೂ ಯಾರ ಬಗ್ಗೆ ಅದು ಮಾಡಲಾಗಿದೆಯೋ ಅದು ಅದರ ಗುರಿಯನ್ನು ಮುಟ್ಟೇ ಮುಟ್ಟುತ್ತದೆ. ವಾಚಿಕ ಹಿಂಸೆಯೆಂದರೆ ಶಬ್ದಗಳಿಂದ ಬೇರೆಯವರನ್ನು ಬಯ್ಯುವುದು, ಅವರ ಬಗ್ಗೆ ಕೆಟ್ಟದಾಗಿ ಮಾತನಾಡುವುದು ಅವರ ಬಗ್ಗೆ ಖಂಡಿಸುವುದು. ಮಹಾಭಾರತದ ಕರ್ಣಪರ್ವದಲ್ಲಿ ಇದರ ಬಗ್ಗೆ ಒಂದು ಸುಂದರವಾದ ದೃಷ್ಟಾಂತವಿದೆ. ಅರ್ಜುನ ಕೃಷ್ಣನೊಡಗೂಡಿ ಯುಧಿಷ್ಠಿರನ ವಾಸ್ತವ್ಯದ ಬಳಿ ಬರುತ್ತಾನೆ. ಉದ್ದೇಶವೆಂದರೆ ಅವನ ಉಳಿವನ್ನು ವಿಚಾರಿಸುವುದೇ ಆಗಿರುತ್ತದೆ. ಏಕೆಂದರೆ ಭೀಮ ನಿರೂಪಿಸಿರುವಂತೆ ಕರ್ಣನಿಂದ ಅವನಿಗೆ ಗಾಯಗಳಾಗುತ್ತದೆ ಮತ್ತು ಕರ್ಣನು ಅವನ ಸಾರಥಿಯೊಡನೆ ಹಿಮ್ಮೆಟ್ಟಲ್ಪಟ್ಟು ನಕುಲಸಹದೇವರೂ ಅದೇ ಭಾಗ್ಯವನ್ನೇ ಹೊಂದಿರುತ್ತಾರೆ. ಭೀಮ ಅರ್ಜುನನಿಗೆ ಯುಧಿಷ್ಠಿರನನ್ನು ನೋಡಲು ಹೇಳಿರುತ್ತಾನೆ ಏಕೆಂದರೆ ಅಷ್ಟು ಹೊತ್ತಿಗೆ ಕರ್ಣನನ್ನು ಹಿಮ್ಮೆಟ್ಟಬಹುದೆಂದು. ಯುಧಿಷ್ಠಿರ ತನ್ನ ನೋವಿನ ದುಃಖದಲ್ಲಿ ಅತ್ಯಂತ ಕುಪಿತನಾಗಿ ಅರ್ಜುನನ ಮುಖದ ಮೇಲಿದ್ದ ತೇಜಸ್ಸನ್ನು ಸಂಶಪ್ತಕರ ಗುಂಪನ್ನು ಅಡಗಿಸಿ, ಕರ್ಣನನ್ನು ಕೊಂದು ಯುಧಿಷ್ಠಿರನಿಗಾದ ಅವಮಾನಕ್ಕೆ ಪ್ರತೀಕಾರವೇ ಆಗಿರುತ್ತದೆ. ಅವನು ಗುಣಗಾನ ಮಾಡಲಾರಂಭಿಸಿದನು. ಅರ್ಜುನ ಹೇಳುವಂತೆ ಅವನು ಯುಧಿಷ್ಠಿರನ ಒಳಿತನ್ನು ವಿಚಾರಿಸಲು ಬಂದವನು, ಏಕೆಂದರೆ ಕರ್ಣನು ಇನ್ನೂ ಬದುಕಿದ್ದನು ಮತ್ತು ಅವನನ್ನು ಸದೆಬಡಿಯುವುದಿತ್ತು. ಯುಧಿಷ್ಠಿರ ಆ ಸಮಯಕ್ಕೆ ತಾಳ್ಮೆ ಕಳೆದುಕೊಂಡು ಕ್ರೋಧಪೂರಿತ ಶಬ್ದಗಳ ಸುರಿಮಳೆಯನ್ನೇ ಗಯ್ಯುತ್ತಾನೆ ಮತ್ತು ಗಾಂಡೀವವೂ ಸಹ ಈಗ ತನ್ನ ಸಾಮರ್ಥ್ಯ ಕಳೆದುಕೊಂಡಿದೆಯೆಂದೂ ಅದಕ್ಕೂ ಹೊಸ ವಾರಸುದಾರರು ಬೇಕಾಗಿರುವರೆಂದೂ ನುಡಿದಾಗ ಅರ್ಜುನ ತನ್ನ ಕತ್ತಿಯನ್ನು ಸೆಳೆಯುತ್ತಾನೆ. ಕೃಷ್ಣ ಅದನ್ನು ಸೂಕ್ಷ್ಮವಾಗಿ ಗಮನಿಸಿ ಆಗಬಾರದ, ಎಣಿಸಲಸಾಧ್ಯವಾದ ಸನ್ನಿವೇಶ ಒದಗಿಬಂದಾಗ ಅವನು ಬಂದ ಉದ್ದೇಶವೇನೆಂದೂ ಈಗ ಅದಕ್ಕಾಗುತ್ತಿರುವ ಫಲವೇನೆಂದೂ ಎಚ್ಚರಿಸುತ್ತಾನೆ. ಆಗ ಅರ್ಜುನ ಹೇಳುತ್ತಾನೆ. ತನಗೆ ಯಾರಾದರೂ ಗಾಂಡೀವವನ್ನು ಹಸ್ತಾಂತರಿಸುವಂತೆ ಹೇಳಿದರೆ ಅವರ ತಲೆ ಕಡಿಯುವಂತೆ ತಾನು ಪ್ರತಿಜ್ಞೆ ಮಾಡಿದ್ದೆನೆಂದು ಅದು ಗೋಪ್ಯವಾಗಿತ್ತೆಂದೂ ನುಡಿಯುತ್ತಾನೆ. ಅವನ ಅಣ್ಣನಾದ ಯುಧಿಷ್ಠಿರ ಹಾಗೆ ಹೇಳಿದ್ದ. ಅದರಿಂದ ಈಗ ಯುಧಿಷ್ಠಿರ ತನ್ನ ತಲೆಯನ್ನು ಕಳೆದುಕೊಳ್ಳಬೇಕು. ಕೃಷ್ಣ ಅದಕ್ಕೆ ಹೇಳುತ್ತಾನೆ ತಾನು ಯುಧಿಷ್ಠಿರನನ್ನು ಶಪಿಸುವೆನೆಂದೂ, ಅವನು ಗೌರವವಿರುವವರೆಗೆ ಮಾತ್ರವೇ ಬದುಕಲು ಅರ್ಹನಾಗಿರುತ್ತಾನೆ. ಅವನು ಅವಮಾನಿಸಿದ ಪಕ್ಷದಲ್ಲಿ ಬದುಕಿದ್ದರೂ ಸತ್ತಂತೆಯೇ. ಇನ್ನೂ ಹೆಚ್ಚಿಗೆ ಹೇಳುವುದಾದರೆ ಹಿರಿಯರನ್ನು ''ನೀನು'' ಎಂದು ಸಂಬೋಧಿಸಿದರೆ, ಸಾವಿಗೀಡಾಗುವನು. ಅರ್ಜುನ ಕೃಷ್ಣನ

ನುಡಿಗಳನ್ನು ಅನುಸರಿಸಿದನು, ಯುಧಿಷ್ಠಿರನನ್ನು ಕರೆದನು. ತನ್ನ ಹಾಗೂ ತನ್ನ ತಮ್ಮಂದಿರ ದುಃಖಕ್ಕೆ ಅವನನ್ನೇ ಗುರಿಪಡಿಸಿದನು, ಎಲ್ಲಕ್ಕೂ ಅವನ ಜೂಜಿನ ಮೋಹವೇ ಕಾರಣವೆಂದೂ ನೆನಪಿಸಿದನು. ಬಹಳ ಹೊತ್ತು ಅರ್ಜುನ ಅದನ್ನೇ ಎತ್ತಿ ಆಡಿದನು. ಅನಂತರ ತನ್ನ ಬತ್ತಳಿಕೆಯಿಂದ ಕತ್ತಿ ಆಚೆಗೆ ಸೆಳೆದು ತನ್ನ ಪ್ರಾಣಹತ್ಯೆಗೆ ಪ್ರಯತ್ನಿಸಿದನು. ಏಕೆಂದರೆ ತನ್ನ ಪ್ರಿಯವಾದ ಅಗ್ರಜನನ್ನು ಅವಮಾನಿಸಿದ ಪ್ರಾಯಶ್ಚಿತ್ತಕ್ಕೋಸ್ಕರವಾಗಿ. ಕೃಷ್ಣ ಅದನ್ನು ಗಮನಿಸಿ ಆತ್ಮಶ್ಲಾಘನೆಗೆ ಅಪ್ಪಣೆ ನೀಡಿದನು. ಅದೇ ಅವನಿಗೆ ಪಶ್ಚಾತ್ತಾಪದಂತಿತ್ತು. ಅರ್ಜುನ ಹಾಗೇ ಮಾಡಿ ಸಂದರ್ಭ ಮತ್ತೂ ಹಾಳಾಗುವುದರಿಂದ ತಪ್ಪಿಸಿದನು.

ಈ ಮೇಲಿನ ಪ್ರಸಂಗದ ನೀತಿಯೆಂದರೆ ಹಿಂಸೆಯು ಕೇವಲ ಶಸ್ತ್ರಾಸ್ತ್ರಗಳಿಂದ ಮಾತ್ರವಲ್ಲ, ಆದರೆ ಶಬ್ದಗಳಿಂದಲೂ ಆಗಬಹುದು. ಅದು ಮಾನಸಿಕ ಹಾಗೂ ದೈಹಿಕವಾಗಿ ಪರಿಣಾಮ ಮಾಡಬಹುದು. ಶಬ್ದಗಳಿಂದ ಕೆಟ್ಟದಾಗಿ ಮಾತನಾಡುವುದು ವಾಚಿಕ ಹಿಂಸೆ. ತನ್ನನ್ನು ತಾನು ಹೊಗಳಿಕೊಳ್ಳುವುದು ತನಗೇ ತಾನೇ ಹಿಂಸಿಸಿಕೊಂಡಂತೆ. ಈ ಎರಡೂ ರೀತಿಯಾದ ವಾಚಿಕ ಹಿಂಸೆಗಳಿಂದ ತಪ್ಪಿಸಿಕೊಳ್ಳಲು ಅಹಿಂಸೆಯಿಂದ ಮಾತ್ರ ಸಾಧ್ಯ. ಈ ಹಿಂಸೆಗೆ ಗುರಿಯಾಗುವುದು ಅದಕ್ಕಿಂತಲೂ ದುಷ್ಟವಾದ ದೈಹಿಕ ಹಿಂಸೆಯಿಂದ ಪಾಂಡವರನ್ನು ಪಾರು ಮಾಡಿತು. ಯುಧಿಷ್ಠಿರ ಈ ಹಿಂಸೆಯನ್ನು ತಪ್ಪಿಸಿದ್ದರೆ, ಅದು ಮಹಾಭಾರತದ ಸಾಲುಗಳಲ್ಲಿ ದಾಖಲಾಗುತ್ತಿರಲಿಲ್ಲ. ದ್ರೌಪದಿಯು ಒಂದು ವೇಳೆ ಮೇಲೆ ಹೇಳಿದಂತಹ ಆ ರೀತಿಯಾದ ಅಹಿಂಸೆಯನ್ನನುಸರಿಸಿದ್ದರೆ ಮಹಾಭಾರತದ ಯುದ್ಧವನ್ನೇ ತಪ್ಪಿಸಬಹುದಾಗಿತ್ತು.

''ಹಿಸಿ'' ಎಂಬ ಧಾತುವಿನಿಂದ ನಿಷ್ಪನ್ನವಾದ ಹಿಂಸಾ ಎಂಬ ಪದ ಪಾಣಿನಿಯ ಧಾತು ಪಾಠದಲ್ಲಿ ತನ್ನ ಮೂಲದಿಂದಲೇ ನಿಷ್ಪನ್ನವಾಗಿದೆ (ಇದರ ಸರಿಯಾದ ಅರ್ಥವನ್ನು ತಿಳಿಸುವುದು ಕಷ್ಟ) ನುಮ್ ಎಂಬ ನಾಮಪದದಿಂದ ಬಂದಿದ್ದು ಐ ಎನ್ನುವುದರಿಂದ ಕೊನೆಗೊಳ್ಳದೆ ಪಾಣಿನಿಯ ಇದಿತೇನುಮ್ ಧಾತೋಃ (7.1.58) ಕೃತ್ ಎಂಬ ಪ್ರತ್ಯಾಹಾರವನ್ನೊಳಗೊಂಡು ಗುರೇಶ್ಚ ಹಲಃ (3.3.103) ಎಂಬುದರಿಂದ ಟಾಪ್ ಬಂದು ''ಅಜಾದ್ಯತಃಷ್ಟಾಪ್'' (4.1.4) ನಿಷೇಧಾತ್ಮಕವಾದ ನ ಇಂದ ನಲೋಪೋ ನೋಣಃ'' (63.73) ಅಹಿಂಸಾ ಎಂಬ ಪದನಿಷ್ಪನ್ನವಾಗಿ ಹಿಂಸೆಯಿಂದ ರಹಿತವಾದುದು ಎಂಬ ಅರ್ಥದಲ್ಲಿ ತೊಂದರೆ ಕೊಡದಿರುವುದು, ಹಿಂಸಿಸದಿರುವುದು. ಯಾವುದೇ ರೀತಿಯ ಹಿಂಸೆಗೆ ಅವಕಾಶವಿಲ್ಲದಿರುವುದು ಎಂದು ಸಿದ್ಧವಾಗುತ್ತದೆ. ಇದು ಮೌಲ್ಯಗಳಲ್ಲಿ ಅನಾದಿಕಾಲದಿಂದಲೂ ಪ್ರಮುಖ ಸ್ಥಾನ ಪಡೆದಿದೆ ಮತ್ತು ನಾಲ್ಕು ವರ್ಗದವರಿಗೆ ಹೇಳಿರುವ ನಿಯಮಗಳಲ್ಲಿ ಇದೇ ಮೊದಲನೆಯದು :-

ಅಹಿಂಸಾ ಸತ್ಯ ಮಸ್ತೇಯಂ ಶೌಚಂ ಇಂದ್ರಿಯನಿಗ್ರಹಃ ।
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇ ಬ್ರವೀನ್ಮನುಃ ॥1

ಅಹಿಂಸೆ, ಸತ್ಯ, ಕಳ್ಳತನ ಮಾಡದಿರುವುದು, ಶುಚಿ, ಇಂದ್ರಿಯನಿಗ್ರಹ ಇವು

ಬ್ರಹ್ಮಣಾದಿ ಎಲ್ಲ ನಾಲ್ಕು ಜಾತಿಯವರು ಆಚರಿಸಲೇಬೇಕಾದ ಮುಖ್ಯ ಧರ್ಮಗಳಾಗಿದೆ ಎಂದು ಮನು ಹೇಳಿದ್ದಾನೆ. ಲಿಂಗಪುರಾಣ ಅದನ್ನು ಈ ರೀತಿ ನಿರೂಪಿಸುತ್ತದೆ :-

ಆತ್ಮವತ್ ಸರ್ವಭೂತಾನಾಂ ಹಿತಾಯೈವ ಪ್ರವರ್ತನಮ್ ।
ಅಹಿಂಸೈಷಾ ಸಮಾಖ್ಯಾತಾ ಯಾಚಾತ್ಮಜ್ಞಾನಸಿದ್ಧಿದಾ ॥[3]

ಎಲ್ಲರಲ್ಲೂ ಸಹ ಹಿತವನ್ನು ಬಯಸುವ ಉದ್ದೇಶದಿಂದಿದ್ದು ಅವರೆಲ್ಲರೂ ತನ್ನವರೆಂದೇ ಭಾವಿಸುವುದೇ ಆತ್ಮಜ್ಞಾನಕ್ಕೆ ಕಾರಣವಾಗುತ್ತದೆ.

ಅಹಿಂಸೆಯ ಬಗ್ಗೆ ಸಮಗ್ರ ಸಂಸ್ಕೃತ ಸಾಹಿತ್ಯದಲ್ಲಿ ಇದು ಅತ್ಯಂತ ಸಕಾರಾತ್ಮಕವಾದ ನಿರೂಪಣೆಯಾಗಿದೆ. ಇಲ್ಲಿ ನಕಾರಾತ್ಮಕವಾದುದು ಒಂದೂ ಇಲ್ಲ. ಕೊಲ್ಲದಿರುವುದು, ಹಿಂಸಿಸದಿರುವುದು, ತೊಂದರೆಕೊಡದಿರುವುದು, ಗಾಯಗೊಳಿಸದಿರುವುದು. ಇದು ಬೇರೆಯವರನ್ನು ತನ್ನಂತೆ ಕಾಣುವುದನ್ನು ಬೋಧಿಸುತ್ತದೆ.

ಇದನ್ನು ಪಾಲಿಸುವುದಾದರೆ, ಹಿಂಸೆಯಾಗಲೀ, ತೊಂದರೆಕೊಡುವುದಾಗಲೀ, ಇರುವುದಿಲ್ಲ. ಯಾರೂ ಸಹ ಇವೆಲ್ಲವನ್ನೂ ಬಯಸುವುದಿಲ್ಲ. ಶಂಕರಭಾಷ್ಯ ಸರಿಯಾಗಿಯೇ ಹೇಳುತ್ತದೆ - "ನ ಕಸ್ಯಚಿತ್ ಪ್ರತಿಕೂಲಂ ಆಚರತಿ ಅಹಿಂಸಕಃ"[4] ಅಹಿಂಸೆಯನ್ನಾಚರಿಸುವವನು ಯಾರಿಗೂ ಸಹ ತೊಂದರೆ ಕೊಡುವುದಿಲ್ಲ. ಲಿಂಗ ಪುರಾಣದ ಹೇಳಿಕೆಯು ಅಹಿಂಸೆಯ ಮೂಲತತ್ವವನ್ನೇ ಸೇರುತ್ತದೆ ಮತ್ತು ಅದನ್ನು ಸಾಮಾನ್ಯವಾದ ಇಹಲೋಕದ ಮಟ್ಟದಿಂದ ಮೇಲೇರಿಸುತ್ತದೆ. ಆಗ ಅಹಿಂಸೆಯು ಎಲ್ಲವನ್ನೂ ಒಳಗೊಂಡಂತಾಗುತ್ತದೆ. ಇದು ಅತ್ಯಂತ ಮುಖ್ಯವಾದ ನೀತಿಯೂ ಹೌದು. ಅಹಿಂಸಾ ಪರಮೋ ಧರ್ಮಃ.[5]

ಸಮಗ್ರವಾದ ವಿಶ್ವವನ್ನು ಹಿಡಿದಿಡುವಂತಹ ನಿಯಮವಾಗಿಟ್ಟುಕೊಂಡು ಅದು ಋಷಿಗಳಿಂದ, ಮುನಿಗಳಿಂದ, ವೇದಾಂತಿಗಳಿಂದ, ಗಂಡಸರು, ಹೆಂಗಸರು ಮತ್ತು ಎಲ್ಲಾ ಕಾಲಗಳಿಂದಲೂ ಮಾನ್ಯತೆ ಪಡೆದಿದೆ. ಈ ಎರಡು ಗೊರಸಿನ ಪ್ರಾಣಿಯನ್ನು ಕೊಲ್ಲಬೇಡ,[6] ಹಸುವನ್ನೂ, ಕುದುರೆಗಳನ್ನೂ, ಮಾನವರನ್ನೂ ಕೊಲ್ಲಬೇಡ ಎಂದು ಶೃತಿ ಘೋಷಿಸುತ್ತದೆ[7]. ಸಾಮಾನ್ಯವಾಗಿ ರಾಗದ್ವೇಷಗಳಿಂದ ಕೊಲ್ಲಬೇಕೆಂಬ ಪ್ರವೃತ್ತಿಯುಂಟಾಗುವುದರಿಂದ ಶೃತಿಯು ಅದರಿಂದ ಹೊರಗಿರುವಂತೆ ಬೋಧಿಸುತ್ತದೆ. ಯಾರೂ ನನಗೆ ವಿರುದ್ಧವಾಗದಿರಲಿ[8]. ಯಾರೂ ಸಹ ಪರಸ್ಪರ ಸೌಹಾರ್ದತೆಯಿಂದ ವಂಚಿತರಾಗದಿರಲಿ[9] ಶತಪಥ ಬ್ರಾಹ್ಮಣವೂ ಪರಸ್ಪರ ಕೊಲ್ಲದಿರಿ ಎಂದು ಎಚ್ಚರಿಸುತ್ತದೆ[10].

ವಿಜ್ಞಾನಭಿಕ್ಷು ಪ್ರಣೀತವಾದ ಯೋಗಸಾರಸಂಗ್ರಹವು ಸಂಸ್ಕೃತ ಸಾಹಿತ್ಯದಲ್ಲಿ ಅಹಿಂಸೆಯ ಬಗ್ಗೆ ವ್ಯಾಖ್ಯಾನಿಸುತ್ತದೆ :-

ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।
ಅಕ್ಲೇಶ ಜನಕಂ ಪ್ರೋಕ್ತಾತ್ವಹಿಂಸಾ ಪರಮರ್ಷಿಭಿಃ ॥ [11]

ಕಾಯಾ, ಮನಸಾ, ವಾಚಿಕವಾಗಿ ಸರ್ವಭೂತಗಳಿಗೂ ಸರ್ವ ಕಾಲಗಳಲ್ಲೂ ತೊಂದರೆಕೊಡದಿರುವುದೇ ಅಹಿಂಸೆಯೆಂದು ಮುನಿಗಳಿಂದ ಹೇಳಲ್ಪಟ್ಟಿದೆ. ಇದು ಎಲ್ಲವನ್ನೂ ಒಳಗೊಳ್ಳುತ್ತದೆ. ಆನೆಯ ಕಾಲುಗಳಲ್ಲಿ ಎಲ್ಲವೂ ಅಂತರ್ಗತವಾಗುವಂತೆ ಧರ್ಮ ಮತ್ತು ಅರ್ಥಗಳಲ್ಲಿ ಎಲ್ಲವೂ ಅಂತರ್ಗತವಾಗುತ್ತದೆ.

ಸರ್ವಾಣ್ಯೇವಾಪಿಧೀಯಂತೇ ಪದಜಾತಾನಿ ಕುಂಜರೇ ।
ಏವಂ ಸರ್ವಂ ಅಹಿಂಸಾಯಾಂ ಧರ್ಮಾರ್ಥಮಭಿಧೀಯತೇ ॥ 12

ಪ್ರಾಣಿಗಳನ್ನು ಕೊಲ್ಲುವುದಕ್ಕೆ ಪ್ರಾಯಶ್ಚಿತ್ತವಿಲ್ಲ. ಎಷ್ಟೇ ಪ್ರಭಾವಪೂರ್ಣವಾಗಿದ್ದರೂ ಸಹ ಯಾಗಾದಿಗಳು ಪಾಪವನ್ನು ತೊಳೆಯಲು ಅಸಮರ್ಥವಾಗುತ್ತದೆ. ಕೊಳಕು ನೀರಿನಿಂದ ನೀರಿನಲ್ಲಿರುವ ಕೊಳೆಯನ್ನು ತೆಗೆಯಲಾಗುವುದಿಲ್ಲ ಅಥವಾ ಮದ್ಯದಿಂದ ಮದ್ಯವನ್ನು ತೆಗೆಯಲಾಗುವುದಿಲ್ಲ ಎಂದು ಭಾಗವತ ಸಾರುತ್ತದೆ. [13]

ಜೀವಿಗಳನ್ನು ಕೊಲ್ಲುವುದರಿಂದ ಏನು ತಡೆಯಲಾಗುವುದೋ ಅದನ್ನು ತಡೆಯಬೇಕು ಏಕೆಂದರೆ ಅದು ಲೋಕಗಳನ್ನೇ ನಾಶ ಮಾಡುತ್ತದೆ.[14]

ಪ್ರಪಂಚವೆಂಬ ಮರುಭೂಮಿಯಲ್ಲಿರುವ ಅಮೃತದ ಕಾರಂಜಿಯೆಂದರೆ ಅಹಿಂಸೆಯೇ. ಅಹಿಂಸೈವ ಸಂಸಾರ ಮರೌ ಅಮೃತಸರಣಿಃ15. ತಾಯಿಯು ಎಲ್ಲರ ಬಳಿ ಹೋಗುವಂತೆ ಅದೂ ಎಲ್ಲರ ಬಳಿ ಹೋಗುತ್ತದೆ. ಬಾಣಗಳೆಂಬ ಕಾಳ್ಗಿಚ್ಚಿಗೆ ಅದು ನೀರನ್ನು ಕೊಡುವಂತಹ ವೇದಗಳ ಸಾಲು. ಹುಟ್ಟು ಸಾವುಗಳೆಂಬ ಸಂಸಾರ ಚಕ್ರದಿಂದ ಪೀಡಿತರಾದವರಿಗೆ ಅದೇ ದಿವ್ಯೌಷಧ[16]. ಮುನಿಗಳ ಪ್ರಕಾರ ಅಹಿಂಸೆಯೇ ಧರ್ಮದ ದ್ವಾರ – ಅಹಿಂಸಾ ಧರ್ಮಸ್ಯ ದ್ವಾರಂ ಉಕ್ತಂ ಮಹರ್ಷಿಭಿಃ17. ಅದೇ ಧರ್ಮದ ಲಕ್ಷಣ–ಅಹಿಂಸಾ ಲಕ್ಷಣ[18]. ಅಂದರೆ ಅದನ್ನು ಅನುಷ್ಠಾನದಲ್ಲಿಟ್ಟುಕೊಂಡಿರುವವನೇ ಧಾರ್ಮಿಕ. ಯಾರು ಧರ್ಮವನ್ನನುಸರಿಸುವರೋ ಅವರು ಅಹಿಂಸೆಯಿಲ್ಲದ ಧರ್ಮವೆಂತಹದು? ಪ್ರತಿಯೊಂದು ಜೀವಿಯೂ ಸಹ ಶರೀರಾತ್ಮವನ್ನು ಹಿಡಿದಿಟ್ಟುಕೊಳ್ಳುತ್ತದೆ. ಮಾನವನಿಗೆ ತನ್ನ ಜೀವಿತಕ್ಕಿಂತ ಪ್ರಿಯವಾದದ್ದು ಯಾವುದೂ ಇಲ್ಲ. ಯಾರು ಅನುಕಂಪದಿಂದ ಕೂಡಿದ್ದು ಅಹಿಂಸಾ ವ್ರತವನ್ನು ಕೈಗೊಂಡು ಎಲ್ಲ ಜೀವಿಗಳ ರಕ್ಷಣೆಗೆ ಹಾತೊರೆಯುವರೋ ಅಂತಹವರ ಸದ್ಗುಣಗಳು ಎಣಿಕೆಗೆ ನಿಲುಕುವಂಥಹದಲ್ಲ:-

ಪ್ರಾಣಾನಾಂ ಪರಿರಕ್ಷಣಾಯ ಸತತಂ ಸರ್ವಾಃ ಕ್ರಿಯಾಃ ಪ್ರಾಣಿನಾಂ
ಪ್ರಾಣೇಭ್ಯೋಽಪ್ಯಧಿಕಂ ಪ್ರಿಯಂ ಸಮಗ್ರ ಜಗತಾಂ ನಾಸ್ತ್ಯೇವ ಕಿಂಚಿತ್ಪ್ರಿಯಮ್ ।
ಪುಣ್ಯಂ ತಸ್ಯ ನ ಶಕ್ಯತೇಗಣಯಿತುಂ ಯಃ ಪೂರ್ಣಕಾರುಣ್ಯವಾನ್
ಪ್ರಾಣಾನಾಮಭಯಂ ದದಾತಿ ಸುಕೃತೀ ತೇಷಾಂ ಅಹಿಂಸಾವ್ರತಃ ॥19

ಸಾಮಾನ್ಯ ನಿಯಮದಂತೆ ಹಿಂಸೆಯಿಂದ ದೂರವಿರಬೇಕೆಂದಿದ್ದರೂ, ಸ್ವೇಚ್ಛಾಹನನ ಅತ್ಯಂತ ಹೇಯವಾದುದು. ಯಾರು ವಿನಾಕಾರಣ ಪ್ರಾಣಿಗಳನ್ನು ಕೊಲ್ಲುವರೋ ಅವರು ಆ

ಪ್ರಾಣಿಗಳ ದೇಹದ ಮೇಲಿರುವ ಕೂದಲುಗಳಷ್ಟು ಜನ್ಮಗಳವರೆಗೂ ಸಹ ಕೊಲ್ಲಲ್ಪಡುತ್ತಿರುತ್ತಾರೆ :-

ಯಾವಂತಿ ಪಶುರೋಮಾಣಿ ತಾವತ್ ಕೃತ್ವಾ ಹಿ ಮಾರಣಂ ।
ವೃಥಾ ಪಶುಘ್ನಃ ಪ್ರಾಪ್ನೋತಿ ಪ್ರೇತ್ಯ ಜನ್ಮನಿ ಜನ್ಮನಿ ॥ [20]

ಮನುವಿನ ಪ್ರಕಾರ ತೊಂದರೆ ಮಾಡದ ಪ್ರಾಣಿಗಳನ್ನು ಯಾರು ಕೇವಲ ರಂಜನೆಗಾಗಿ ಕೊಲ್ಲುವರೋ ಅವರಿಗೆ ಈ ಜನ್ಮದಲ್ಲಿ ಹಾಗೂ ಮುಂದಿನ ಜನ್ಮದಲ್ಲಿ ಸುಖವಿಲ್ಲ.

ಯೋ ಹಿಂಸಕಾನಿ ಭೂತಾನಿ ಹಿನಸ್ತ್ಯಾತ್ಮ ಸುಖೇಚ್ಛಯಾ ।
ಸಜೀವಂಶ್ಚಮೃತಶ್ಚೈವ ನ ಕ್ವಚಿತ್ ಸುಖಮೇಧತೇ ॥ [21]

ಈ ಮೇಲಿನ ಹೇಳಿಕೆಯಿಲ್ಲಿರುವ ಎರಡು ಪದಗಳ ಬಗ್ಗೆ ಹೆಚ್ಚಿನ ಗಮನವಹಿಸಬೇಕು. ಅದೇ ಅಹಿಂಸಕಾನಿ ಭೂತಾನಿ ತೊಂದರೆ ಮಾಡದ ಪ್ರಾಣಿಗಳು ಮತ್ತು ಆತ್ಮಸುಖೇಚ್ಛಯಾ – ಸ್ವಾರ್ಥ ಸುಖಕ್ಕಾಗಿ. ಅಹಿಂಸೆಗೆ ಒತ್ತುಕೊಡುವ ದೃಷ್ಟಿಯಿಂದ ಮನುವು ಕ್ರೂರ ಪ್ರಾಣಿಗಳ ಬಗ್ಗೆ ಈ ಮಾತನ್ನಾಡಿಲ್ಲ ಏಕೆಂದರೆ ಅವುಗಳನ್ನು ಕೊಲ್ಲದಿದ್ದರೆ, ಅವು ನಮ್ಮನ್ನು ಕೊಲ್ಲುತ್ತವೆ. ಏಕೆಂದರೆ ಅವುಗಳ ಆಹಾರವೇ ಮಾಂಸವಾಗಿರುವುದರಿಂದ, ಇದೇ ಅಂಶವನ್ನೇ ಇಟ್ಟುಕೊಂಡು ಹದ್ದು (ಮಾರುವೇಷದ ಇಂದ್ರ) ಪಾರಿವಾಳದ ರಕ್ಷಣೆಗೆ ಇಂಬು ಕೊಡದಿರುವುದು (ಅಗ್ನಿಯೇ – ವೇಷಾಂತರದಿಂದ – ಈ ಎರಡೂ ಪಕ್ಷಿಗಳೂ ಶಿಬಿ ಚಕ್ರವರ್ತಿಯು ಸದಾಚಾರ ನಿಷ್ಠೆಯನ್ನು ಪರೀಕ್ಷಿಸಲು) ಅವೆರಡೂ ಶಿಬಿಯಲ್ಲಿ ರಕ್ಷಣೆ ಪಡೆದು ಇದ್ದರೂ ಸಹ ಪಾರಿವಾಳ ಶಿಬಿಯ ವಿಶೇಷ ರಕ್ಷಣೆಯಲ್ಲಿತ್ತು. ಯಾವಾಗ ಸದ್ದಾಗದಂತೆ ಕ್ರೂರಪ್ರಾಣಿಗಳು ಸುತ್ತುತ್ತಿರುವುದೋ ಆಗ ಅದನ್ನು ಕೊಲ್ಲುವುದೂ ಧರ್ಮವಾಗುತ್ತದೆ. ಅದೇನಾದರೂ ಗ್ರಾಮಗಳನ್ನು ಪ್ರವೇಶಿಸಿ ಅಲ್ಲಿರುವ ಅಮಾಯಕರನ್ನೇ ಕೊಂದರೆ ಆಗ ಆ ಕ್ರೂರ ಪ್ರಾಣಿಗಳನ್ನು ಗುಂಡಿಟ್ಟು ಕೊಲ್ಲುವುದೊಂದೇ ಉಪಾಯವಾಗಿರುತ್ತದೆ. ಈ ಹಿಂಸೆಯು ಆ ಪ್ರಾಣಿಗಳ ಹಿಂಸೆಗೆ ಪೂರಕವಾಗಿದ್ದು ಜೀವಿಗಳ ಉಳಿವಿಗಾಗಿ ಅಗತ್ಯವಾಗಿರುತ್ತದೆ. ಇಲ್ಲಿ ಆತ್ಮಸುಖೇಚ್ಛಾ – ಸ್ವಾರ್ಥಸುಖವು ಇಂಗಿತವಲ್ಲ, ಆದರೆ ಮಾನವರ ರಕ್ಷಣೆಯೇ ಆಗಿರುತ್ತದೆ. ಅಮಾಯಕ ಪ್ರಾಣಿಗಳಾದ ಹಸು, ಮೇಕೆ ಇತ್ಯಾದಿಗಳ ರಕ್ಷಣೆಯೇ ಆಗಿರುತ್ತದೆ. ರಾಜನು ಬೇಟೆಗಾಗಿ ಹೋದಾಗ ವಿಷಯ ಬೇರೆ. ಅವನು ದುಷ್ಟ ಪ್ರಾಣಿ ಅಥವಾ ಬೇರೆ ಪ್ರಾಣಿಗಳನ್ನು ಕೊಲ್ಲುತ್ತಾನೆ ವಿನೋದಕ್ಕಾಗಿ. ಬೇಟೆ ಅವನಿಗೆ ಒಂದು ವ್ಯಾಯಾಮ ಅಥವಾ ಆಟ. ಇದು ಅವನ ಮನಸ್ಸಿನ ಚಿಂತನೆಯನ್ನು ಬದಲಾಯಿಸಿಕೊಳ್ಳಲು ಬಯಸುವಂತಹ ಕ್ರಿಯೆ.

ಹೇಗೆ ದುಷ್ಟಮೃಗಗಳನ್ನು ಕೊಲ್ಲಲು ಅನುಮತಿಯಿದೆಯೋ ಅದೇ ಮನುವಿನ ಇಂಗಿತ. ಅದರಂತೆಯೇ ಕೊಲೆಗಡುಕತನ, ವಿದ್ರೋಹ ಮಾಡುವವನ, ಕ್ರೂರಿಯಾದವನ ವಿಷಯವೂ ಕೂಡ ಏಕೆಂದರೆ ಅವನಿಗೆ ಬದುಕಿಗೆ ಗೌರವವಿಲ್ಲ. ಅಂತಹವನು ಸಿಕ್ಕಿದಾಗ ಎರಡನೇ ಯೋಚನೆಯಿಲ್ಲದೆ ಅವನನ್ನು ಕೊಲ್ಲುವುದೇ ಲೇಸು. ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್.[22] ಅವನು ಒಬ್ಬನ ಗುರುವೇ ಆಗಿರಬಹುದು, ಮಗುವಾಗಿರ

ಬಹುದು, ವೃದ್ಧನಾಗಿರಬಹುದು, ಬ್ರಾಹ್ಮಣನೇ ಆಗಿರಬಹುದು. ಗುರುಂವಾ ಬಾಲವೃದ್ಧೌ ವಾ ಬ್ರಾಹ್ಮಣಂ ವಾ ॥ ಅವರನ್ನು ಕೊಲ್ಲುವುದರಲ್ಲಿ ಪಾಪವಿಲ್ಲ – ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ.[23]

ಇದೇ ವೃದ್ಧಹಾರೀತಮುನಿಯ ಅಭಿಪ್ರಾಯ. ಅದೇ ಮುನಿಯೇ ಯಾವ ಜೀವಿಯನ್ನು ಕೊಲ್ಲಬಾರದೆಂಬ ಆದೇಶವನ್ನು ನೀಡಿದ್ದನು.ಭಿನ್ನ ಜೀವಿಗಳಿಗೆ ಭಿನ್ನ ಸಮಯಕ್ಕನುಗುಣವಾಗಿ ನಿಯಮವೂ ಸಹ ಬದಲಿಸಬೇಕಾಗುತ್ತದೆ. – ಮಾ ಹಿಂಸ್ಯಾದ್ ಸರ್ವಾಭೂತಾನಿ [24]

ಅತತಾಯಿಯಾದವನ ಹಿಂಸೆಯು ಹಿಂಸೆಯನ್ನು ತಡೆಯಲು. ಆದ್ದರಿಂದ ಅದು ಸ್ವೀಕಾರ್ಯವು.

ಅದೇ ರೀತಿ ವೈದಿಕ ಯಾಗಾದಿಗಳಲ್ಲೂ ಸಹ ಹಿಂಸೆಯು ಗ್ರಾಹ್ಯ. ವೇದದಲ್ಲಿ ಹೇಳಿರುವುದರ ಮಟ್ಟಿಗೆ. ಸುಪ್ರಸಿದ್ಧವಾದ ಉಕ್ತಿಯಿದೆ – ವೈದಿಕೀ ಹಿಂಸಾ ನ ಭವತಿ ॥ ವೈದಿಕ ಯುಗದಲ್ಲಿ ಕೊಂದ ಪ್ರಾಣಿಯು ಪ್ರಾಣಿಹಿಂಸೆಯಲ್ಲ. ಇದನ್ನು ಅಹಿಂಸೆ ಎಂದೇ ಸ್ವೀಕರಿಸಬೇಕೆಂದು ಮನುವಿನ ಅಭಿಪ್ರಾಯ. ಏಕೆಂದರೆ ಧರ್ಮವು ವೇದದಿಂದಲೇ ಹೊರ ಹೊಮ್ಮುತ್ತದೆ – ಅವನು ತನ್ನ ಹೇಳಿಕೆಯನ್ನು ಸಮರ್ಥಿಸಿಕೊಳ್ಳುತ್ತಾ ಹೇಳುತ್ತಾನೆ – ಯಾಗಾದಿಗಳ ಆಚರಣೆಗೋಸ್ಕರವೇ ಕೆಲವು ಪ್ರಾಣಿಗಳು ಸೃಷ್ಟಿಸಲ್ಪಟ್ಟವು ಯಜ್ಞಾರ್ಥಂ ಪಶವಃ ಸೃಷ್ಟಾಃ ಸ್ವಯಮೇವ ಸ್ವಯಂಭುವಾ[25] ಈ ವಿಷಯದಲ್ಲಿ ವೃದ್ಧಗೌತಮನ ಅಭಿಪ್ರಾಯ ಭಿನ್ನವಾಗಿದೆ. ಅವನ ಪ್ರಕಾರ ''ಅಹಿಂಸಾ ವೈದಿಕಂ ಕರ್ಮ'' ಅಹಿಂಸೆಯನ್ನು ವೇದವೇ ವಿಧಿಸಿದೆ. ವೈದಿಕಯುಗದಲ್ಲಾಗುವ ಹಿಂಸೆಯೂ ಅಹಿಂಸೆಯೆಂದೇ ಪರಿಗಣಿಸಬೇಕು. ವೈದಿಕ ಕ್ರಿಯೆಯಲ್ಲಿ ಮೊದಲಿಗೆ ಪ್ರಾಣಿಗೆ ಪ್ರೋಕ್ಷಣೆ ಮಾಡಲಾಗುವುದು ಪವಿತ್ರವಾದ ನೀರಿನಿಂದ. ಮಹಾಭಾರತದ ಅನುಶಾಸನ ಪರ್ವದಲ್ಲಿ ಇದಕ್ಕೆ ಅನೇಕ ಕಡೆ ಉಲ್ಲೇಖಗಳಿವೆ: ಅಲ್ಲಿ ಅಹಿಂಸೆ ಹಾಗೂ ಮಾಂಸಾಹಾರದ ವರ್ಜನೆಯ ಬಗ್ಗೆ ಸುದೀರ್ಘವಾದ ವಿವರಣೆಯಿದೆ. ಅನಂತರ ಆ ಪ್ರಾಣಿಯು ಯೂಪ ಸ್ತಂಭಕ್ಕೆ ಕಟ್ಟಲಾಗುತ್ತಿತ್ತು. ಅನಂತರ ಅದನ್ನು ಕೊಲ್ಲುತ್ತಿದ್ದರು ಅಶ್ವಮೇಧಯಾಗವೂ, ಅಥವಾ ಹಸುವಿನ ಯಾಗವೂ ರಾಜರಿಂದ ಮಾಡಲ್ಪಟ್ಟಾಗ ಅದರ ಮಹತ್ವವೂ ಹೆಚ್ಚಾಗುತ್ತಿತ್ತು. ಕಾಳಿದಾಸನು ವರ್ಣಿಸುವಂತೆ ಅಯೋಧ್ಯೆಯಲ್ಲಿ ಸರಯೂ ನದಿ ಹರಿಯುತ್ತಿದ್ದಾಗ ಅದರ ದಂಡೆಯಲ್ಲಿ ನೂರಾರು ಯೂಪ ಸ್ತಂಭಗಳು ನಿರ್ಮಾಣವಾಗಿ, ತೀರನಿಖಾತಯೂಪ[27] ತಮ್ಮ ಪೂರ್ವಜರು ಮಾಡಿದ ನೂರಾರು ಯಾಗಗಳು ಶುರುವಾಗುತ್ತಿತ್ತು. ರಂತಿದೇವನು ಅನೇಕ ಗೋಹತ್ಯೆ ಮಾಡಿ ಅದರಿಂದ ರಕ್ತದ ನದಿಯು ಹರಿಯುವಂತೆ ಮಾಡಿದ್ದನು :- ಸ್ರೋತುಂಮೂರ್ತ್ಯಾಭುವಿ ಪರಿಣತಾಮ್ ರಂತಿದೇವಸ್ಯ ಕೀರ್ತಿಂ.[28]

ಸಾಮಾನ್ಯವಾಗಿ ಪ್ರಾಣಿಹತ್ಯೆಯು ಪಾಪವೆಂದು ಪರಿಗಣಿತವಾಗಿದ್ದರೂ ಸಹ ಪವಿತ್ರವಾದ ಪ್ರಾಣಿಹತ್ಯೆಯು ಅತ್ಯಂತ ಹೇಯವೆಂದೇ ಪರಿಗಣಿತವಾಗುತ್ತಿತ್ತು.

ಬ್ರಾಹ್ಮಣರನ್ನೂ, ಗೋವುಗಳನ್ನೂ ಕೊಲ್ಲಬಾರದು ಎಂದು ಮನುವು ಪ್ರತಿಪಾದಿಸಿದ್ದಾನೆ. ''ನ ಹನ್ಯಾದ್ ಬ್ರಾಹ್ಮಣಾನ್ ಗಾಶ್ಚ'' ಸಮಾಜದ ಉನ್ನತ ಸ್ತರದಲ್ಲಿದ್ದ ಬ್ರಾಹ್ಮಣರು ಹಾಗೂ ಅವರ ಬಗ್ಗೆ ಯಾವುದೇ ಕೇಡುಂಟಾದರೂ ಅದು ಅತ್ಯಂತವಾಗಿ ನಿಂದಿತವಾಗುತ್ತಿತ್ತು.

ಜೀವನದಲ್ಲಿ ಬರುವ ಕೆಲವು ಸಂದರ್ಭಗಳಲ್ಲಿ ಯಾವುದು ಹಿಂಸೆ, ಯಾವುದು ಅಹಿಂಸೆ ಎಂದು ವಿಭಜಿಸುವುದು ಕಷ್ಟವಾಗುತ್ತದೆ. ಮಹಾತ್ಮಾಗಾಂಧಿಯವರು ಗುಜರಾತಿನ ರಸ್ತೆಯಲ್ಲಿ ಒಂದು ಹಸು ನೋವಿನಿಂದ ನರಳುತ್ತಿದ್ದುದನ್ನು ನೋಡಿದರು. ಅವರಿಂದ ಆ ದೃಶ್ಯ ತಡೆಯಲಾಗಲಿಲ್ಲ. ಅವರು ಅದಕ್ಕೆ ವಿಷಕೊಟ್ಟು ಕೊಂದರು, ಆದರೆ, ಅದರ ಯಾತನೆಯನ್ನು ಅವರಿಂದ ನೋಡಲಾಗಲಿಲ್ಲ. ಆ ವಿಷತಿಂದು ಆ ಹಸು ಶಾಂತವಾಗಿ ಮರಣವನ್ನಪ್ಪಿತು. ಈ ರೀತಿಯಾದ ಸಾವಿಗೆ ಮಹಾತ್ಮಾಗಾಂಧಿಯವರ ಮೇಲೆ ಅನೇಕ ರೀತಿಯ ಆಪಾದನೆಗಳು ಬಂದಿತು ಅಹಿಂಸಾವಾದಿಗಳಿಂದಲೇ. ಅದಕ್ಕೆ ಗಾಂಧೀಯವರ ಪ್ರತಿಕ್ರಿಯೆಯೆಂದರೆ ಅವರಿಂದ ಯಾವುದೇ ವಿಧವಾದ ಹಿಂಸೆಯೂ ಮಾಡಲ್ಪಟ್ಟಿಲ್ಲ. ಅವರಿಗೆ ಹಸುವನ್ನು ಕೊಲ್ಲುವುದು ಉದ್ದೇಶವಾಗಿರಲಿಲ್ಲ. ಅವರಿಗೆ ಕೇವಲ ಹಸುವಿಗಾಗುತ್ತಿದ್ದ ದುಃಖ ಹಾಗೂ ತೊಂದರೆಯಿಂದ ಪಾರುಮಾಡುವುದೇ ಆಗಿದ್ದಿತು. ಆ ಸಂಧರ್ಭದಲ್ಲಿ ಅದು ಹೆಚ್ಚು ಕಾಲ ಬದುಕಿದ್ದರೆ, ಹೆಚ್ಚು ಕಾಲ ನೋವು ಯಾತನೆಯನ್ನು ಅನುಭವಿಸುತ್ತಿತ್ತು. ಆದ್ದರಿಂದ ಅವರ ಕೃತ್ಯವು ಅಹಿಂಸಾ ಕೃತ್ಯವೇ ಆಗಿದ್ದಿತು.

ಈ ಪಂಕ್ತಿಗಳನ್ನು ಬರೆಯುತ್ತಿರುವವರ ಅನುಭವವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು ಅದು ಯಾರ ಅನುಭವ ಬೇಕಾಗಿದ್ದರೂ ಆಗಿದ್ದಿರಬಹುದು. ಅದೂ ಹಿಂಸೆ ಹಾಗೂ ಅಹಿಂಸೆಯ ನಡುವೆ ಇರುವ ವ್ಯತ್ಯಾಸಕ್ಕೆ ಗೆರೆಯನ್ನು ಹಾಕುತ್ತದೆ. ಆ ಸಂದರ್ಭವೆಂದರೆ ಅವರು ಬೆಲ್ಜಿಯಂನ ಲೂವಿನ ಪ್ರದೇಶದಲ್ಲಿದ್ದಾಗ ನಡೆದದ್ದು. ತಾವು ಕೆಲಸ ಮಾಡುವ ಪ್ರದೇಶದತ್ತ ನಡೆಯುತ್ತಿದ್ದಾಗ ಚಿಕ್ಕದಾದ ಹಕ್ಕಿಯು ತೆವಳುತ್ತಿರುವುದನ್ನು ಕಂಡರು. ಕೂಡಲೇ ಅದನ್ನು ಕಂಡು ಹೊಂಚು ಹಾಕುತ್ತಿದ್ದಂತಹ ಒಂದು ಬೆಕ್ಕನ್ನು ಕಂಡರು. ಆ ಚಿಕ್ಕ ಪಕ್ಷಿಯ ಮೇಲೆ ದಯೆಯಿಂದ ತನ್ನ ಛತ್ರಿಯಿಂದ ಆ ಬೆಕ್ಕನ್ನು ದೂರ ಓಡಿಸಿದರು ಮತ್ತು ಆ ಚಿಕ್ಕ ಹಕ್ಕಿಯು ಪೊದೆಯನ್ನು ಸೇರುವವರೆಗೂ ಅಲ್ಲೇ ಇದ್ದರು. ತಮ್ಮ ಕೆಲಸ ಮಾಡುವ ಪ್ರದೇಶದತ್ತ ಹೋಗುತ್ತಿರುವಾಗ ಆಲೋಚನಾಮಗ್ನರಾಗಿ ವ್ಯಾಕುಲಗೊಂಡವರಾಗಿ, ತಾವು ಮಾಡಿದ್ದು ಸರಿಯೇ, ತಪ್ಪೇ ತಾವು ಹಿಂಸೆ ಮಾಡಿದರೇ ಅಥವಾ ಅಹಿಂಸೆ ಮಾಡಿದರೇ, ಒಂದು ಪ್ರಾಣಿಗೆ ಊಟ ತಪ್ಪಿಸಿದಾಗ ಪ್ರಕೃತಿಯೇ ಅದಕ್ಕೆ ಒದಗಿಸಿದ್ದಾಗ ಹಾಗೆ ಮಾಡುವುದು ಸರಿಯೇ? ಪ್ರಾಯಶಃ ಬೆಕ್ಕು ಹಸಿದಿರಬೇಕು. ಅದಕ್ಕೆ ದೈವಿಕವಾಗಿ ಒದಗಿಬಂದಿದ್ದಂತಹ ಊಟ ತಪ್ಪಿಸಿ ತಾವೇ ಅದಕ್ಕೆ ಹಿಂಸೆಯುಂಟುಮಾಡಲಿಲ್ಲವೇ । ಅವರ ಮನಸ್ಸು ಪ್ರತಿಯೊಂದು ಆಲೋಚನೆಯಿಂದಲೂ ಸಹ ಭಾರವಾಗುತ್ತಾ ಬಂದಿತು. ಅಂತಹ ಸಂದರ್ಭಗಳಲ್ಲಿ ಹಿಂಸೆ ಅಹಿಂಸೆಯಲ್ಲೂ, ಅಹಿಂಸೆ ಹಿಂಸೆಯಲ್ಲೂ ಮಗ್ನವಾಗುತ್ತದೆ.

ಅಹಿಂಸೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಹಿಂಸೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಅಹಿಂಸೆಯೆಂದರೆ ಹಿಂಸೆಯಿಂದ ರಹಿತವಾದದ್ದು.

ಹಿಂಸೆಯು ಮೂರು ಹಂತಗಳಲ್ಲಾಗುತ್ತದೆ :- ಸಂರಂಭ, ಸಮಾರಂಭ ಹಾಗೂ ಆರಂಭ. ನಮ್ಮೆಲ್ಲಾ ಕ್ರಿಯೆಗಳಿಗೂ ಮನಸ್ಸು ಮೂಲ. ಆದ್ದರಿಂದ ಸಂಕಲ್ಪವೇ ಮಾನವನ ಎಲ್ಲಾ ಹಿಂಸೆಯಲ್ಲೂ ತೊಡಗಿಸುತ್ತದೆ. ಹಿಂಸೆ ಮಾಡಬೇಕೆಂಬ ಪ್ರಚೋದನೆಯೇ ಆದರತ್ತ ತೊಡಗಿಸುತ್ತದೆ. ಹಿಂಸಕ ಭಾವನೆಗಳು, ಪ್ರವೃತ್ತಿ, ಮೊದಲನೆಯ ಹಂತವಾಗಿದ್ದು ಸಂರಂಭವೆನಿಸುತ್ತದೆ. ಹಿಂಸಾಕೃತ್ಯವೆಸಗಲು ಸಹಾಯಕವಾದ ಕತ್ತಿ, ಚಾಕು, ಪಿಸ್ತೂಲು ಅಥವಾ ನೋವನ್ನುಂಟುಮಾಡುವ ವಸ್ತು. ಅದು ಕಾಗದದ ಮೇಲಿಡುವ ಭಾರವೂ ಆಗಬಹುದು. ಇದು ಸಮಾರಂಭವು, ಇವೆರಡರ ಬೆಸುಗೆ ಅಂದರೆ ಸಂರಂಭ, ಸಮಾರಂಭಗಳ ಬೆಸುಗೆ ಆರಂಭವಾಗಿದ್ದು ನಿಜವಾದ ಆರಂಭದಿಂದ ಕೊನೆಯವರೆಗೂ ಆಗುವ ಕ್ರಿಯಾದಿ ಶೇಷವಾಗಿರುತ್ತದೆ.

ಈಗ ಪ್ರಶ್ನೆಯೆಂದರೆ, ಏತಕ್ಕೋಸ್ಕರ ಹಿಂಸಾ ಸೂಚಕವಾದ ಭಾವನೆ ಬರಬೇಕು ಮನಸ್ಸಿನಲ್ಲಿ ಎಂದು. ಇವು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಿಂದ ಆಗಬಹುದು. ಇವುಗಳಿಂದ ಮೇಲೆ ಹೇಳಿದ ಮೂರು ವಿಧವಾದುದು ಸೇರಿದಾಗ ಹಿಂಸೆಯು ಹನ್ನೆರಡು ವಿಧವಾಗಬಹುದು.

ಹಿಂಸೆಯು ಮಾನಸಿಕವಾಗಿ ಮಾಡುವುದಾದ್ದರಿಂದ ಮಾತು ಹಾಗೂ ಕ್ರಿಯೆ, ಮನೋವಾಕ್ಕಾಯ ಮೇಲೆ ಹೇಳಿದಂತಹ ಯಾವುದೇ ಒಂದು ವಿಧವೂ ಸಹ 36 ವಿಧವಾದ ಹಿಂಸೆಗೆ ಕಾರಣವಾಗಬಹುದು. (12X3=36)

ಮಾನಸಿಕ, ವಾಚಿಕ, ಕಾಯಿಕವಾದ ಹಿಂಸೆಯು ಮೂರು ಕ್ರಮಗಳನ್ನು ಪಡೆಯುತ್ತದೆ.

ತಾವಾಗಿಯೇ ಅದನ್ನು ಮಾಡುವುದು; ಮತ್ತೊಬ್ಬರಿಂದ ಹಾಗೆ ಮಾಡಿಸಲ್ಪಡುವುದು ಮತ್ತು ಅದನ್ನು ಗುರುತಿಸುವುದು. ಮೊದಲ 36 ಈ ಮೂರರಿಂದ ಗುಣಿತವಾದರೆ 108 ತಲುಪುತ್ತದೆ. ಆದ್ದರಿಂದಲೇ ರುದ್ರಾಕ್ಷಿಗೆ 108 ಮಣಿಗಳಿರುವುದು ಅನೌಚಿತ್ಯವೇನಲ್ಲ. ಅದು 108 ರೀತಿಯ ಹಿಂಸೆಗಳಿಂದ ತಡೆಗಟ್ಟುತ್ತದೆ.

ಅಹಿಂಸೆಯ ಬಗ್ಗೆ ವಾದವನ್ನು ಮುಂದುವರೆಸುತ್ತಾ, ಅಹಿಂಸೆಯೆಂದರೆ ಕೇವಲ ಕೊಲ್ಲುವುದಾಗಲೀ, ನೋವುಂಟು ಮಾಡುವುದಾಗಲೀ, ತೊಂದರೆಯುಂಟು ಮಾಡುವುದಾಗಲೀ ಮಾತ್ರವಲ್ಲ. ಅದು ಒಬ್ಬರ ಅಂತಃಸತ್ವವನ್ನು ಕಡಿಮೆ ಮಾಡಿಕೊಳ್ಳುವುದು ಅಥವಾ ತಮ್ಮ ಮನಸ್ಸಿನ ನೆಮ್ಮದಿಯನ್ನು ಹಾಳುಮಾಡಿಕೊಳ್ಳುವುದು ಅಥವಾ ಬೇರೆಯವರ ವಯಕ್ತಿಕ ವಿಷಯಗಳಲ್ಲಿ ತಲೆ ಹಾಕುವುದು ಅಥವಾ ಇಷ್ಟವಿಲ್ಲದ್ದನ್ನು ಮಾಡುವುದಾಗಬಹುದು. ಪೋಷಕರು ಸಮಾಜದಲ್ಲಿ ತಮ್ಮ ಗೌರವವನ್ನು ಹೆಚ್ಚಿಸಿಕೊಳ್ಳಲು ತಮ್ಮ ಮಕ್ಕಳನ್ನು ಭಾರತೀಯ ಆಡಳಿತದತ್ತ ಹೋಗಲು ಪುಸಲಾಯಿಸುವುದು. ಅವರಿಗೆ ಕಲೆ ಅಥವಾ ವಾಸ್ತುಶಿಲ್ಪ ಅಥವಾ ನಗರಾಭಿವೃದ್ಧಿ ಅಥವಾ ರಂಗಕಲೆ ಅಥವಾ ಭಾಷೆಗಳ ಬಗ್ಗೆ ಅಥವಾ ಸಾಮಾಜಿಕ ವಿಜ್ಞಾನದ ಬಗ್ಗೆ ಆಸಕ್ತಿಯಿರುವಂತೆ ಮಾಡುವುದು ಅವರಿಗೆ ಹಿಂಸೆ

ಮಾಡಿದಂತೆಯೇ ಸರಿ. ತಮಗೆ ಇಷ್ಟಬಂದದ್ದೇ ತಮ್ಮ ಮಕ್ಕಳೂ ಮಾಡಬೇಕೆಂದು ಒತ್ತಾಯಿಸಿರುವುದು. ಅದರಲ್ಲಿ ಅವರಿಗೆ ಅನಾಸಕ್ತಿಯಿರುವಾಗ ಅವರು ಚೆನ್ನಾಗಿ ಮಾಡಲು ಆಗುವುದಿಲ್ಲ. ಅವರು ಅವರನ್ನು ಹಿಂಸಿಸುತ್ತಿರುತ್ತಾರೆ. ಇಲ್ಲಿ ದೈಹಿಕವಾದ ಹಿಂಸೆಯಲ್ಲ ಆದರೆ ಮಾನಸಿಕವಾದ ಹಿಂಸೆ. ಈ ಹಿಂಸೆಯ ಗುರುತನ್ನು ಅವರು ಬಹಳ ಕಾಲದವರೆಗೆ ಸವೆಸಬೇಕಾಗುತ್ತದೆ ಅಥವಾ ತಮ್ಮ ಜೀವನದ ಉದ್ದಕ್ಕೂ ಸವೆಸಬೇಕಾಗುತ್ತದೆ. ಅದರಿಂದ ಅವರ ವ್ಯಕ್ತಿತ್ವಕ್ಕೆ ಹಾನಿಯಾಗಬಹುದು. ಇವರಿಂದ ಅವರಲ್ಲಿ ಸಹಜವಾದ ಕ್ರಿಯಾಶೀಲತೆಗೆ ಧಕ್ಕೆ ಬಂದು ಅವರ ಇಷ್ಟ ಬಂದ ಕ್ರಿಯೆಗೆ ಅಡ್ಡ ಬಂದಂತಾಗುತ್ತದೆ. ವೃತ್ತ ಪತ್ರಿಕೆಗಳು ಚಿಕ್ಕ ಹುಡುಗ ಅಥವಾ ಹುಡುಗಿಯರು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಕರಣಗಳನ್ನು ಪ್ರಕಟಿಸುತ್ತಲೇ ಇರುತ್ತದೆ. ಇದು ಅವರು ಪರೀಕ್ಷೆಯಲ್ಲಿ ಸರಿಯಾಗಿ ಮಾಡದಿದುದ್ದಕ್ಕೂ ಅವರ ಪೋಷಕರ ಕೋಪಕ್ಕೆ ತುತ್ತಾಗಬಹುದೆಂಬ ಅಂಜಿಕೆಯಿಂದಲೂ ಇರಬಹುದು. ಹಾಗೆಯೇ ಒಬ್ಬ ರಾಜಕೀಯ ವ್ಯಕ್ತಿಯು ಅತ್ಯಂತ ಬೇಸರಗೊಂಡ ಪ್ರೇಕ್ಷಕರ ಮೇಲೆ ಕೃತಕವಾದ ಉದ್ದನೆಯ ಭಾಷಣ ಮಾಡುವುದೂ ಸಹ ಹಿಂಸೆಯೇ. ರಾತ್ರಿಯಹೊತ್ತು ಮದುವೆಯ ಊಟವನ್ನು ನೀಡುವಾಗ ಸಮಯ 8 ಎಂದು ನಿಗದಿಪಡಿಸಿರುವಾಗ ಅದೂ ಹಿಂಸೆಯೇ ಒಬ್ಬ ಅತಿಥಿ ಹೇಳದೆಯೇ ಬೆಳಗಿನ ಜಾವದಲ್ಲಿ ಬಂದು ಎಲ್ಲಾ ಮರ್ಯಾದೆಗಳೂ ತನಗೆ ದಕ್ಕಬೇಕೆಂದು ಎಣಿಸುವುದೂ ಹಿಂಸೆಯೇ. ಒಬ್ಬ ಮನುಷ್ಯನನ್ನು ಕಡೆಗಾಣಿಸುವುದು, ಅವನನ್ನು ಪಕ್ಕಕ್ಕಿರಿಸುವುದು, ಪರವಾಗಿ ಅವನ ಕಡೆ ಬೆಟ್ಟನ್ನು ಮಾಡುವುದು ಮತ್ತು ಅಗೌರವಯುಕ್ತವಾದ ಕ್ರಿಯೆಗಳಲ್ಲಿ ತೊಡಗುವುದೂ ಹಿಂಸೆಯೇ.

ಮೇಲೆ ಹೇಳಿರುವುದು ಕೇವಲ ಸಮುದ್ರದ ಮೇಲೆ ಕಾಣುವ ಗುಳ್ಳೆಯಷ್ಟು ಮಾತ್ರವೇ. ಹಿಂಸೆಗೆ ಅನಂತವಾದ ಮುಖಗಳೂ, ಮಾರ್ಪಾಡುಗಳೂ ಇರುತ್ತದೆ. ಅದು ಅವರ ದೃಷ್ಟಿಕೋನ ಹಾಗೂ ನಡವಳಿಕೆಯ ಭಾವನೆಯಿಂದ ಎಲ್ಲ ಮೂಲಭೂತವಾದ ಹಿಂಸೆಗೂ ಕಾರಣವಾಗಿ ಬೇರೆ ರೀತಿಯಾದ ಹಿಂಸೆಗಿಂತಲೂ ಅತ್ಯಧಿಕವಾಗಿರುತ್ತದೆ.

ಹಿಂಸೆಯನ್ನು ನಿತ್ಯಜೀವನದಲ್ಲಿ ಸಂಪೂರ್ಣವಾಗಿ ಮಾಡದಿರುವುದು ಅಸಾಧ್ಯವೇ ಸರಿ. ದಿನನಿತ್ಯದ ಜೀವನದಲ್ಲಿ ಅನೇಕ ಜೀವರಾಶಿಗಳನ್ನು ಗೊತ್ತಿದ್ದೋ, ಗೊತ್ತಿಲ್ಲದೆಯೋ, ಕ್ರಿಮಿಕೀಟಗಳ ರೂಪದಲ್ಲಿ ಕೊಲ್ಲುತ್ತಿರುತ್ತೇವೆ. ಕೆಲವು ನಮ್ಮ ಕಾಲಿನ ಕೆಳಗೆ ಸಿಕ್ಕಿ ಸಾಯಬಹುದು ನಾವು ರಸ್ತೆಯಲ್ಲಿ ನಡೆಯುತ್ತಿರುವಾಗ.. ನಾವು ಉಸಿರನ್ನು ತೆಗೆದುಕೊಳ್ಳುವಾಗ ಅಥವಾ ಬಿಡುವಾಗ ಅದು ಸಾಯಬಹುದು. ನಾವು ತರಕಾರಿ ಅಥವಾ ಹಣ್ಣನ್ನು ತೊಳೆಯುವಾಗ ಅದು ಸಾವನ್ನಪ್ಪಬಹುದು. ಅದನ್ನು ಸಾಯಿಸುವ ಮನೋಭಾವ ನಮಗಿಲ್ಲದಿರಬಹುದು. ಹಾಗಿದ್ದಾಗ್ಯೂ ಪ್ರಕೃತಿಯ ನಿಯಮವೇ ಹಾಗಿರುತ್ತದೆ. ನಾವು ಮಾಡುವ ಪ್ರತಿಯೊಂದು ಕ್ರಿಯೆಯಲ್ಲೂ ಅದಿರುತ್ತದೆ. ನಮ್ಮ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಳ್ಳಲು ನಮ್ಮ ಕುಟುಂಬದವರಿಗೆ ಕಲ್ಪಿಸಲು ಊಟ, ಬಟ್ಟೆ ಹಾಗೂ ಮನೆ ಸ್ವಲ್ಪಮಟ್ಟಿಗೆ ಹಿಂಸೆಯುಂಟಾಗುತ್ತದೆ. ನಮ್ಮ ಕ್ರಿಯೆಗಳು ವೃದ್ಧಿಯಾದಂತೆಲ್ಲಾ ಹಿಂಸೆಯೂ ವೃದ್ಧಿಯಾಗುತ್ತದೆ. ಮನೆಕಟ್ಟಲು ಭೂಮಿಯನ್ನು ಅಗೆಯಬೇಕಾಗುತ್ತದೆ. ಊಟ

ಮಾಡಲು ಅಡಿಗೆ ಮಾಡಬೇಕಾಗುತ್ತದೆ. ಆರೋಗ್ಯಕರವಾದ ವಾಸಕ್ಕೆ ಮನೆಯನ್ನು ಸ್ವಚ್ಛಗೊಳಿಸಬೇಕಾಗುತ್ತದೆ. ಈ ಎಲ್ಲಾ ಕ್ರಿಯೆಗಳಲ್ಲೂ ಅನೇಕ ಕ್ರಿಮಿ, ಕೀಟಗಳು ಸಾವನ್ನಪ್ಪುತ್ತದೆ. ಕೆಲವು ಸಲ ಅದು ಎಷ್ಟು ಚಿಕ್ಕದಾಗಿರುತ್ತದೆಂದರೆ ಅದರ ಇರುವಿಕೆಯನ್ನು ಊಹೆಯಿಂದಲೇ ಅರಿತುಕೊಳ್ಳಬೇಕಾಗುತ್ತದೆ. ಮಹಾಭಾರತ ನಿರೂಪಿಸುವಂತೆ – ಸೂಕ್ಷ್ಮ ಯೋನಿನಿ ಭೂತಾನಿ ತರ್ಕ ಗಮ್ಯಾನಿ ಕಾನಿಚಿತ್ ನಮ್ಮ ಕಣ್ಣಿನ ರೆಪ್ಪೆ ಮುಚ್ಚಿ ತೆಗೆಯುವುದರಿಂದಲೂ ಅದು ಸಾವನ್ನಪ್ಪಬಹುದು. ಆದರಿಂದ ಅದನ್ನು ತಪ್ಪಿಸಲಾಗುವುದಿಲ್ಲ. ಹಿಂಸೆ ಮಾಡುವುದಕ್ಕೋಸ್ಕರವೇ ಯಾರೂ ಹಿಂಸೆಯನ್ನೆಸಗಬಾರದು. ವಯಕ್ತಿಕವಾಗಿಯೇ ಆಗಲೀ, ಅಥವಾ ಬೇರೆಯವರಿಂದಲೇ ಆಗಲಿ. ಇದಕ್ಕೆ ಸಂಕಲ್ಪ ಹಿಂಸೆಯೆಂದು ಹೆಸರು. ಇಲ್ಲಿ ಒಂದು ಎಚ್ಚರಿಕೆಯನ್ನು ವಹಿಸಬೇಕು. ಒಂದು ಪ್ರಾಣಿಯ ಜೀವವನ್ನು ಉಳಿಸುವ ಹಾಗಿದ್ದರೂ ಸಹ ಈ ರೀತಿಯಾದ ಹಿಂಸೆಯನ್ನು ತ್ಯಜಿಸಬೇಕು ಅಥವಾ ತಾಯ್ನಾಡಿಗೆ ಏನಾದರೂ ಶತ್ರುಗಳಿಂದ ಭಯವಿದ್ದಾಗ್ಯೂ ಸಹ. ಈ ಕಾರಣಕ್ಕಾಗಿಯೇ ಕಾರವೇಲ ಎಂಬ ಜೈನ ಚಕ್ರವರ್ತಿ ಡೊಮೆಟ್ರಿಯಸ್ ಎಂಬ ವಿದೇಶೀಯನೊಡನೆ ಯುದ್ಧವೆಸಗಿದ ಮತ್ತು ಸಿಂಧ್ ಪ್ರಾಂತ್ಯದವರೆಗೂ ಅವನನ್ನು ಹಿಮ್ಮೆಟ್ಟಿದ. ಈ ಯುದ್ಧವು ಹಿಂಸೆಯನ್ನು ಒಳಗೊಂಡಿತ್ತು. ವಿರೋಧೀ ಹಿಂಸಾ ಎಂದು ಗ್ರಂಥಗಳಲ್ಲಿ ಉಲ್ಲಿಖಿತವಾದ ಇದು ಖಂಡನೀಯವಾದುದಾಗಲೀ, ಟೀಕೆಗಾಗಲೀ ಕಾರಣವಾಗಲಿಲ್ಲ.

ಅಹಿಂಸೆಯ ಅನುಯಾಯಿಗಳು ತಪ್ಪುಮಾಡಿದವರ ಮೇಲೆ ಸೇಡುತೀರಿಸಿಕೊಳ್ಳುವುದೂ ಸಹ ತಪ್ಪೆಂದೇ ಭಾವಿಸುತ್ತಾರೆ. ಅವರನ್ನು ತಡೆಯುವುದಾಗಲೀ, ಹಿಮ್ಮೆಟ್ಟುವುದಾಗಲೀ ಸರಿ, ಆದರೆ ಅದನ್ನು ದ್ವೇಷಿಸುವುದಾಗಲೀ, ಅವನಲ್ಲಿ ಕೋಪಬರುವಂತೆ ಮಾಡುವುದಾಗಲೀ ಅಥವಾ ಪ್ರತೀಕಾರವೆಸಗುವುದಾಗಲೀ ಸರಿಯಲ್ಲ. ಮಹಾತ್ಮ ಗಾಂಧಿ ಯವರು ಬ್ರಿಟೀಷರನ್ನು ದೇಶದಿಂದ ಹೊರಗಟ್ಟಲು ಹಾಗೂ ದೇಶವನ್ನು ಸ್ವತಂತ್ರವಾಗಿರಿಸಲು ಪ್ರಯತ್ನಿಸಿದರೇ ಹೊರತು ಬ್ರಿಟೀಷರನ್ನು ದ್ವೇಷಿಸಲಿಲ್ಲ. ಸ್ನೇಹವನ್ನು ಕಳೆದುಕೊಳ್ಳದೆ ಪ್ರೀತಿಯನ್ನು ಕಡೆಗಾಣಿಸದೆ ಅವರು ಬ್ರಿಟೀಷ್ ದಬ್ಬಾಳಿಕೆ ಕೊನೆಗಾಣಿಸಿದರು. ಅದೇ ನಿಜವಾದ ಅಹಿಂಸೆ. ಈ ರೀತಿಯಾದ ಮನೋಭಾವವು ಕ್ರೂರಿಗಳಲ್ಲಿ ಕ್ರೂರಿಗಳಿಗೂ ಸಹ ಮನಃ ಪರಿವರ್ತನೆ ಮಾಡುತ್ತದೆ ಮತ್ತು ಅದನ್ನೇ ಪ್ರತಿಯೊಬ್ಬರೂ ಸಹ ಅವಶ್ಯಕವಾಗಿ ಅನುಸರಿಸಬೇಕಾಗುತ್ತದೆ.

ಅಹಿಂಸೆಯೇ ಐದು ವಿಶ್ವನಿಯಮಗಳಲ್ಲಿ ಮೊದಲನೆಯದು – ಯಮ. ಇದನ್ನೇ ಯೋಗದರ್ಶನವು ಜಾತಿ, ದೇಶ, ಕಾಲ ಅತೀತವೆಂದು ಸಾರುತ್ತದೆ "ಜಾತಿ ದೇಶಕಾಲ ಸಮಯಾವಚ್ಛಿನ್ನಃ"[30] ಇದೇ ದೈವೀ ಸಂಪತ್ತಿನ ಮೊದಲ ಕಾರಣವೂ ಹೌದು.[31] ಭಗವದ್ಗೀತೆಯಲ್ಲಿ ನಿರೂಪಿತವಾಗಿರುವ ದೈವೀ ಗುಣ. ಅಹಿಂಸೆಯು ಸ್ಥಿರವಾಗಿ ನಿಂತರೆ ಯೋಗಸೂತ್ರ ತಿಳಿಸುವಂತೆ ದ್ವೇಷವು ಮಾಯವಾಗುತ್ತದೆ – ಅಹಿಂಸಾ ಪ್ರತಿಷ್ಠಾಯಾಂ .... ವೈರತ್ಯಾಗಃ.[32] ಇದರಿಂದ ಎಲ್ಲ ಸಮಯದಲ್ಲೂ ಯಾವುದೇ ರೀತಿಯಾದ ಶತ್ರುತ್ವವಿರುವುದಿಲ್ಲ. ಅಹಿಂಸಾ ಸರ್ವಥಾ ಸರ್ವದಾ ಸರ್ವಭೂತಾನಾಂ ಅನಭಿದ್ರೋಹಃ.33

ಯಾವಾಗ ದ್ವೇಷವು ಮಾಯವಾಗುತ್ತದೆಯೋ ಅಲ್ಲಿ ಪ್ರೇಮವು ಹರಿಯುತ್ತದೆ. ಆಗ ಅಹಿಂಸಕನು ಎಲ್ಲಾ ಜಯಗಳನ್ನೂ, ಪದಾರ್ಥಗಳನ್ನೂ ಸ್ನೇಹ ಹಾಗೂ ಪ್ರೀತಿಯ ಕಣ್ಣಿನಿಂದ ನೋಡುತ್ತಾನೆ.

### ಆಕರಗ್ರಂಥಗಳು

1) 10.03 2) ಜಿ.ಬ್ಯೂಹ್ಲರ್ ಅವರ ಅನುವಾದ. ಸೇಕ್ರೆಡ್ ಬುಕ್ಸ್ ಆಫ್ ದಿ ಈಸ್ಟ್, ಮೋತಿಲಾಲ್ ಬನಾರಸೀದಾಸ್, ದಿಲ್ಲಿ. 1993. 3) 8.11 4) ಕೆ.ಯು.6.32 5) ಮಹಾಭಾರತ. ಅನುಶಾಸನ ಪರ್ವ 116.38 6) ವಾಜಸೇನೇಯ ಸಂಹಿತಾ 13.47 7) ಅದೇ 8) ಮನೋ ದ್ವಿಕ್ಷತ ಕಶ್ಚನ. ಋಗ್ವೇದ 12.1.18 9) ಮನೋ ಮರ್ತಾ ಅಭಿದ್ರುಹನ್. ಅದೇ 1.5.10. 10) ನಾನ್ಯೋನ್ಯಂ ಹಿಂಸ್ಯತಾಂ 3.4.1.24 11) ತ್ರ.36 12) ವಿಜ್ಞಾನಭಿಕ್ಷುವಿನ ಯೋಗಸೂತ್ರ.2.30. 13)1.8.52. 14) ಯುಕ್ತಿದೀಪಿಕಾ.50 15) ಯೋಗಸೂತ್ರ.2.50. 16) ಯೋಗಸೂತ್ರ.2.51.2. 17) ಬ್ರಹ್ಮಪುರಾಣ. ಪೂರ್ವಾರ್ಧ.30.35 18) ಪ್ರಬಂಧಚಿಂತಾಮಣಿ.ಪು.42 19) ಚತುರ್ವರ್ಗ ಸಂಗ್ರಹ. 1.13 20)ಮನುಸ್ಮೃತಿ.5.38 21) ಅದೇ 5.45 22) ಅದೇ.8.350 23) ಅದೇ.8.351 24) ವೃದ್ಧಗೌತಮಸ್ಮೃತಿ.5.74 25)ಮನುಸ್ಮೃತಿ.5.39. 26) ಅದೇ.4.162 27)ರಘುವಂಶ.13.61 28) ಪೂರ್ವಮೇಘ.49. 29) ಮನುಸ್ಮೃತಿ.4.162 30)2.30. 31) ಭಗವದ್ಗೀತಾ.16.2. 32) ಯೋಗಸೂತ್ರ.2.35 33) ಯೋಗಸೂತ್ರ-ವ್ಯಾಸಭಾಷ್ಯ.2.30. 34)ಮಿತ್ರಸ್ಯಮಾ ಚಕ್ಷುಷಾ ಸರ್ವಾಣಿಭೂತಾನಿ ಸಮೀಕ್ಷಂತಾಂ. -ವಾಜಸನೇಯಿಸಂಹಿತಾ.36.18.

# 2. ಸತ್ಯ

ಭಾರತೀಯ ಪರಂಪರೆಯು ಅನಾದಿಕಾಲದಿಂದಲೂ ಸತ್ಯಕ್ಕೆ ಒತ್ತುಕೊಟ್ಟಿದೆ. ಗುರುಕುಲವಾಸ ಮುಗಿಸಿ ಶಿಷ್ಯ ಯಾವಾಗ ಸಮಾವರ್ತನ ಕ್ರಿಯೆಯೊಂದಿಗೆ ಸಾಂಸಾರಿಕ ಹೊರೆ ಹೊರಲು ತನ್ನ ಮನೆಗೆ ಹಿಂದಿರುಗುತ್ತಿದ್ದನೋ ಆಗ ಗುರು ಅವನಿಗೆ ಬೋಧಿಸುತ್ತಿದ್ದನು. ಅದಕ್ಕೊಂದು ಮಾದರಿ ತೈತ್ತಿರೀಯೋಪನಿಷತ್ತಿನಲ್ಲಿದೆ. ಇದೇ ನಮಗೆ ದೊರಕುವಂತಹ ಮೊಟ್ಟಮೊದಲ ಮಾಹಿತಿ. ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಘಟಿಕೋತ್ಸವ ಸಂದೇಶ. ಆ ಘಟಿಕೋತ್ಸವದ ಮೊದಲ ಸಂದೇಶ ಗುರು ನೀಡುವುದೇ "ಸತ್ಯಂವದ"[1] ಎಂದು. ಸತ್ಯವನ್ನೇ ನುಡಿ ಎಂದು. ಯಾವುದನ್ನು ಕಡೆಗಾಣಿಸಬಾರದೆಂಬ ಸಂದೇಶದಲ್ಲೂ ಸಹ ಸತ್ಯವನ್ನು ಮತ್ತೆ ಹೇಳಾಗಿದೆ. ಸತ್ಯಾನ್ನ ಪ್ರಮದಿತವ್ಯಂ[2]. ಸತ್ಯವನ್ನು ಕಡೆಗಾಣಿಸಬಾರದು. ಉಪನಿಷತ್ತಿನ ಋಷಿಗಳಿಗೆ ಗೊತ್ತಿರುವಂತೆ ಸತ್ಯವನ್ನು ನುಡಿಯುವುದು ಬಹಳ ಕಠಿಣವಾದುದು. ಬಂಗಾರದ ಮರೆಗಿನಿಂದ ಹಿಮ್ಮೆಟ್ಟುವುದು ನಿಜಕ್ಕೂ ಕಠಿಣಸಾಧ್ಯವೇ ಸರಿ – ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ[3]. ಸತ್ಯವು ಬಂಗಾರದ ಮುಚ್ಚಳದಿಂದ ಮುಚ್ಚಲ್ಪಟ್ಟಿದೆ4. ಅವರು ಭಗವಂತನಲ್ಲಿ ಬೇಡುವುದೆಂದರೆ ಆ ಮುಚ್ಚಳವನ್ನು ತೆಗೆಯಬೇಕು. ಅದರಿಂದ ಸತ್ಯವನ್ನು ಪ್ರೀತಿಸುವವರು ಅದನ್ನು ಕಾಣಬಹುದು. ತನ್ನೇ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ.[5]

ವಾಜಸನೇಯ ಸಂಹಿತಾ ಹೇಳುವಂತೆ ಸತ್ಯವೊಂದೇ ಗೆಲ್ಲುತ್ತದೆ. ಸತ್ಯಮೇವ ಜಯತೇ[6]. ಸತ್ಯದ ಮಾರ್ಗದಿಂದಲೇ ಭಗವಂತನ ದ್ವಾರವೂ ತೆರೆಯಲ್ಪಡುತ್ತದೆ – ಸತ್ಯೇನ ಪಂಥಾ ವಿತತೋ ದೇವಯಾನಃ [7].

ಯಾಜ್ಞವಲ್ಕಸ್ಮೃತಿ 8 ಸತ್ಯವನ್ನು ಹತ್ತು ಯಮಗಳಲ್ಲಿ ಸೇರಿಸುತ್ತದೆ. ಮನುವೂ ಸಹ ಈ ಯಮನನ್ನು ನಿರಂತರವಾಗಿ ಅಭ್ಯಸಿಸ ಬೇಕೆನ್ನುತ್ತಾನೆ. ಯಮಾನ್ ಸೇವೇತ ಸತತಂ.[9]

ರಾಮಾಯಣದಲ್ಲಿ ಬರುವ ಒಂದು ಶ್ಲೋಕವು ಸತ್ಯವು ಸಾವಿರ ಅಶ್ವಮೇಧಯಾಗಗಳಿಗಿಂತಲೂ ಶ್ರೇಷ್ಠವೆಂದು ಪ್ರತಿಪಾದಿಸುತ್ತದೆ :-

ಅಶ್ವಮೇಧ ಸಹಸ್ರಂಚ ಸತ್ಯಂಚ ತುಲಯಾ ಧೃತಮ್ ।
ಅಶ್ವಮೇಧ ಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥ [10]

ಸಾವಿರ ಅಶ್ವಮೇಧಗಳನ್ನೂ ಸತ್ಯವನ್ನೂ ಒಂದೇ ತಕ್ಕಡಿಯಲ್ಲಿ ತೂಗಿದರೆ, ಸತ್ಯವೇ ಸಾವಿರ ಅಶ್ವಮೇಧಗಳಿಗಿಂತಲೂ ಭಾರವಾಗಿರುತ್ತದೆ. ಅಶ್ವಮೇಧವು ನಮ್ಮ ಪಾರಂಪರಿಕ ಗ್ರಂಥಗಳಲ್ಲಿ ನಿರೂಪಿಸಲಾಗಿದೆ. ಅದನ್ನು ಯಾಗಗಳ ರಾಜ ಎಂದೂ ಹೆಸರಿಸಲಾಗಿದೆ. ಕ್ರತುರಾಟ್ ಮತ್ತು ಪಾಪನಿವಾರಕವು. ಸರ್ವಪಾಪ ಪ್ರಣೋದನಃ ಒಂದು ಅಶ್ವಮೇಧದಿಂದಲೇ ಈ ರೀತಿಯಾದರೆ, ಸಾವಿರದಿಂದ ಹೇಗಾಗಬಹುದು? ಸತ್ಯವು ಅ ಸಾವಿರಕ್ಕೂ ಮಿಗಿಲಾದುದು.

ರಾಮಾಯಣದಲ್ಲಿ ಆ ಶ್ಲೋಕ ಇದೆಯೆಂಬುದು ಆಶ್ಚರ್ಯವೇನಲ್ಲ. ಆ ಕೃತಿಯೇ ಸತ್ಯವನ್ನು ಹೊಗಳುವ ವೀರಗಾಥೆಯಾಗಿದೆ. ದಶರಥನು ರಾಮನ ಯುವರಾಜ್ಯವನ್ನು ಘೋಷಿಸಿದಾಗ ಕೈಕೇಯಿಯು ಎರಡು ವರಗಳನ್ನು ಬೇಡಿದಳು. ರಾಮನ ಸ್ಥಾನದಲ್ಲಿ ಭರತನಿಗೆ ಪಟ್ಟಾಭಿಷೇಕ ಮತ್ತು ರಾಮನ ಹದಿನಾಲ್ಕು ವರ್ಷಗಳ ಕಾಲ ವನವಾಸವೇ ಆ ವರಗಳು. ದಶರಥ ವರಗಳನ್ನು ನೀಡುವುದಾಗಿ ಹೇಳಿದ್ದರೂ ಸಹ, ಅದನ್ನು ಕೇಳಿದಾಗ ತಾನು ಕೊಡುವ ಸ್ಥಿತಿಯಲ್ಲಿರಲಿಲ್ಲ. ಅವನಿಂದ ಏನನ್ನೂ ಹೇಳಲು ಆಗಲಿಲ್ಲ- ಅನುಕ್ರೋಷ್ಯತ್ರಭವತಾ[11]. ಅವನು ಮೌನದಿಂದಿದ್ದನು. ರಾಮನಿಗೆ ಕೈಕೇಯಿಯೇ ಎಲ್ಲವನ್ನೂ ತಿಳಿಸಿದಳು. ಅಂತರಾರ್ಥ ಗ್ರಹಿಸುವುದರಲ್ಲಿ ರಾಮನಿಗೆ ಹೆಚ್ಚಿನ ಸಮಯವೇನೂ ಆಗಲಿಲ್ಲ. ಅವನು ಒಂದು ಕ್ಷಣವನ್ನೂ ಮೀರದೆ ತಂದೆಯ ಮಾತನ್ನು ಸತ್ಯವಾಗಿಸಲು ಮುಂದಾದನು. ಅದನ್ನೇ ಕೈಕೇಯಿಯೂ ಅವನಿಗೆ ತಿಳಿಸಿದ್ದಳು – ಸತ್ಯೇನ ಮಹತಾ ರಾಮ ತಾರಯಸ್ವ ನರೇಶ್ವರಂ[12] ತಾನೇ ರಾಜ್ಯವನ್ನು ತೊರೆದು ಕಾಡಿಗೆ ತೆರಳಿದನು. ಅವನ ತಂದೆಯು ಇದಾವುದನ್ನೂ ತಿಳಿಸಿರಲಿಲ್ಲ. ಆದ್ದರಿಂದ ಅವನಿಂದ ಯಾವ ಅವಮರ್ಯಾದೆಯೂ ಮಾಡಿರಲಿಲ್ಲ. ಲಕ್ಷ್ಮಣ ಹಾಗೂ ಕೌಸಲ್ಯರ ಬೇಡಿಕೆಗಳನ್ನು ರಾಮ ತಡೆದಿದ್ದನು. ಕೌಸಲ್ಯೆ ಹೇಳಿದಂತೆ ತಾಯಿಯಾದ ಅವರ ಸ್ಥಾನ ತಂದೆಯ ಸ್ಥಾನಕ್ಕಿಂತ ಮಿಗಿಲೆಂದೂ ತಾಯಿ ಹಾಗೆ ಮಾಡಲು ಬಿಡುವುದಿಲ್ಲವೆಂದೂ ಅದು ಕೇವಲ ಕೈಕೇಯಿಯ ನಿರ್ಧಾರವೆಂದೂ. ತನ್ನ ತಂದೆಯು ಕೊಟ್ಟ ವರ ರಾಮನಿಗೆ ತಿಳಿದಿತ್ತು ಮತ್ತು ಅವನು ಆ ಪ್ರತಿಜ್ಞೆಯನ್ನು ನಡೆಸಬೇಕಿತ್ತು. ಅದಿಲ್ಲವಾದರೆ ಅವನು ಸತ್ಯಭ್ರಷ್ಟನಾಗುವನು. ಆ ಕುರುಹು ತನಗೆ ಅಂಟುವುದು ಅವನಿಗೆ ಇಷ್ಟವಿರಲಿಲ್ಲ. ಅವನಿಗೆ ಸತ್ಯವನ್ನು ಹಿಡಿದೆತ್ತಬೇಕಾಗಿತ್ತು. ವಾಲ್ಮೀಕಿ ನಾರದರಿಗೆ ತಿಳಿಸಿದಂತೆ ಸತ್ಯದ ವಿಷಯದಲ್ಲಿ ರಾಮ ಎರಡನೇ ಧರ್ಮರಾಜನೇ ಆಗಿದ್ದನು.

ಸತ್ಯಕ್ಕಿಂತ ಮಿಗಿಲಾದ ತಪವಿಲ್ಲ. ನಾಸ್ತಿ ಸತ್ಯಾತ್ ಪರಂತಪಃ[13] ಎನ್ನುತ್ತಾನೆ ಚಾಣಕ್ಯ. ಅದನ್ನು ಹೇಳುವುದು ಸುಲಭ, ಆದರೆ ಅನುಷ್ಠಾನಕ್ಕೆ ತರುವುದು ಅತ್ಯಂತ ಕಠಿಣ. ಧರ್ಮರಾಜ ಎಂಬ ಖ್ಯಾತಿವಂತನಾದ ಯುಧಿಷ್ಠಿರನೂ ಸಹ ಸತ್ಯಾನುಷ್ಠಾನ ವಿಧಿಯಲ್ಲಿ ಒಂದು ಬಾರಿ ಎರಡರ್ಥ ಬರುವಂತಹ "ಅಶ್ವತ್ಥಾಮಾ ಹತೋನರೋವಾ ಕುಂಜರೋವಾ ಎಂದನು. ಅಶ್ವತ್ಥಾಮ ಮಾನವನಾಗಬಹುದು ಅಥವಾ ಆನೆಯಾಗಬಹುದು. ಅದು ಸತ್ತಾಗ ಅವನ ರಥ ನೆಲದಲ್ಲಿ ಮುಟ್ಟಿತು, ಅದಿಲ್ಲದಿದ್ದರೆ ಅದು ನೆಲದಿಂದ ಐದು ಬೆರಳಿನಷ್ಟಾದರೂ ಮೇಲಿರುತ್ತಿತ್ತು.

ಸತ್ಯವೆಂಬುದು ನುಣುಚಿಕೊಳ್ಳುವಂತಹದು ಮಾತ್ರವಲ್ಲ ಅಮಾನುಷವಾದುದು ಆದರೆ ಸುಳ್ಳು ಹಾಗಲ್ಲ. ಸತ್ಯವನ್ನೇ ಹೇಳಬೇಕೆಂದು ಪಣತೊಟ್ಟ ಮಹಾತ್ಮಾಗಾಂಧಿಯವರಿಗೆ ತಮ್ಮ ಸಾಫಲ್ಯದಲ್ಲಿ ಅತ್ಯಂತ ಕಠಿಣವಾಗಿರಬೇಕು. ನಾನು ಸತ್ಯದೊಂದಿಗೆ ಪ್ರಯೋಗ ಮಾಡುತ್ತಿರುವೆ ಎಂದು ಅವರು ಹೇಳಿದರೇ ಹೊರತು ಅದನ್ನು ಪ್ರಸಾರ ಮಾಡುತ್ತಿರುವೆ ಎಂದಾಗಲೀ ಅದನ್ನೇ ನಂಬಿದ್ದೇನೆ ಎಂದಾಗಲೀ ಹೇಳಲಿಲ್ಲ. ಸತ್ಯವೆಂಬುದು ನೈತಿಕತೆಗೆ ಸಂಬಂಧಿಸಿದ್ದು, ಕಲಿಸಬೇಕು ಅಥವಾ ಹೇರಬೇಕು. ಆದರೆ ಸುಳ್ಳು ಸಹಜವಾಗಿಯೇ

ಬರುವಂತಹದು. ಸುಳ್ಳನ್ನು ಕಂಡಿಹಿಡಿಯಲು ಯಂತ್ರವಿರಬಹುದು, ಆದರೆ ಸತ್ಯವನ್ನು ಕಂಡುಹಿಡಿಯಲು ಯಾವ ಉಪಕರಣವೂ ಇಲ್ಲ.

ಸತ್ಯವನ್ನು ಹಿಡಿದಿಡುವುದು ಮತ್ತು ಸುಳ್ಳನ್ನು ದೂರವಿಡುವುದು ಅತ್ಯಂತ ಕಠಿಣವಾಗಿರುವುದರಿಂದ ನಮ್ಮ ಹಿಂದಿನ ಗುರುಗಳು ಸುಳ್ಳಿನ ಪಾತ್ರವನ್ನು ಮಾನವನ ಜೀವನದಲ್ಲಿಟ್ಟರು. ದೈನಂದಿಕ ಕ್ರಿಯೆಗಳಲ್ಲಿ ಸತ್ಯ ಹಾಗೂ ಸುಳ್ಳನ್ನು ಅವರು ಮಿಶ್ರಣ ಮಾಡುತ್ತಿದ್ದರು. ಸತ್ಯಾನೃತಶಬ್ದೌ ಮಿಥುನೀತೃತ್ಯ ನೈಸರ್ಗಿಕೋಯಂ ಲೋಕವ್ಯವಹಾರಃ.[14]

ಬಲಿಚಕ್ರವರ್ತಿಯ ಗುರುವಾದ ಶುಕ್ರಾಚಾರ್ಯ ವಾಮನನಿಂದ (ವಿಷ್ಣುವಿನ ಅವತಾರ) ಎತ್ತರವಾಗಿರುವಂತೆ ಶುಕ್ರನಿಗೆ ಬೋಧಿಸುತ್ತಾರೆ ಮತ್ತು ತಾನು ಅವಿತಿಟ್ಟುಕೊಂಡು ತಾನು ಉಪಸ್ಥಿತನಿಲ್ಲವೆಂದೂ ವಾಮನ ಬಂದಾಗ ಕಳುಹಿಸುವಂತೆ ಹೇಳುತ್ತಾನೆ. ಸುಳ್ಳನ್ನು ಹೇಳದಿರುವಂತಹ ಮಾದರಿ ರಾಜನಾದ ಬಲಿ ಆದಕ್ಕೆ ಸಮ್ಮತಿಸಿದೆ ಗುರುವಾದ ಶುಕ್ರಾಚಾರ್ಯರಿಗೆ ಹೇಳುತ್ತಾನೆ.

ನ ನರ್ಮಯುಕ್ತಂ ವಚನಂ ಹಿನಸ್ತಿ
ನ ಸ್ತ್ರೀಷುರಾಜನ್ ನ ವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಪಹಾರೇ
ಪಂಚಾನೃತಾನ್ಯಾಹುರಪಾತಕಾನಿ ॥ [15]

ಹಾಸ್ಯದಿಂದ ನುಡಿದ ಸುಳ್ಳಿನಿಂದ ಅಪಾಯವಿಲ್ಲ. ಹೆಂಗಸರ ವಿಷಯದಲ್ಲಲ್ಲ. ಮದುವೆಯ ಸಂದರ್ಭದಲ್ಲಲ್ಲ. ತನ್ನ ಪ್ರಾಣಕ್ಕೆ ಆಪತ್ತುಂಟಾದಾಗಲಲ್ಲ. ತನ್ನ ಎಲ್ಲಾ ಸಂಪತ್ತಿನ ನಾಶದಲ್ಲೂ ಅಲ್ಲ. ಐದು ಬಗೆಯ ಸುಳ್ಳು ಪಾಪವಾಗುವುದಿಲ್ಲ.

ಇವೆಲ್ಲವೂ ಇದ್ದಾಗ್ಯೂ ಸಹ ನಮ್ಮ ಪಾರಂಪರಿಕ ಗ್ರಂಥಗಳು ಸತ್ಯವನ್ನೇ ನುಡಿಯಬೇಕೆಂದೂ ಅದೇ ನಮಗೆ ಆದರ್ಶವೆಂದೂ ಸಾರುತ್ತದೆ. ಸತ್ಯವೆಂಬುದೇ ಎರಡನೆಯ ನಿಶ್ಚಿತ ಚಿಹ್ನೆಯು. ಮನುವಿನ ಪ್ರಕಾರ ಧರ್ಮ - ಅಹಿಂಸಾಸತ್ಯಮಸ್ತೇಯಂ ದಶಕಂ ಧರ್ಮ ಲಕ್ಷಣಂ[16]. ಅಶೋಕನು ಸಹ ಸತ್ಯವನ್ನು ಧರ್ಮದಡಿಯಲ್ಲೇ ಅಂತರ್ಗತ ಮಾಡುತ್ತಾನೆ. ದಿಲ್ಲಿಯ ತೋಪ್ರಾ ಸ್ತಂಭದ ಆದೇಶದಂತೆ - ಕಿಯಂಡು ಧಮ್ಮೇತಿ - ಧರ್ಮವೆಂದರೇನು? ಅದಕ್ಕೆ ಅವನ ಉತ್ತರವೆಂದರೆ - ಬಹುಕಯಾನೇ ದಯಾ ದಾನೇ ಸಚೇ ಸೋಚಯೇ ಸಾಧವೇ ಮಾದವೇ ಅಪಾಸ್ನವೇಃ ಬಹುಕಲಾಯಾಂ ದಯಾದಾನಂ ಸತ್ಯಂ ಶೌಚಂ ಸಾಧುತಾಮಾರ್ದವಂ - ಅನುಕಂಪ, ದಾನ, ಸತ್ಯ, ಶುದ್ಧಿ, ಒಳ್ಳೆಯತನ ಹಾಗೂ ಮೃದುತ್ವ.

ಭಾರತೀಯ ಪರಂಪರೆ ತನ್ನ ಸುದೀರ್ಘ ಇತಿಹಾಸದಲ್ಲಿ ಸತ್ಯಕ್ಕೆ ನೀಡಿರುವ ಪ್ರಾಮುಖ್ಯತೆಗೆ ಸಂವಾದಿಯಾಗಿರುವುದು ಬಹಳ ಕಡಿಮೆ. ಇಲ್ಲಿ ಉಲ್ಲಿಖಿತವಾದುವುದೆಂದರೆ ರಾಜ ಹರಿಶ್ಚಂದ್ರನು ವಿಶ್ವಾಮಿತ್ರ ಅವನಿಗಿಟ್ಟ ಎಲ್ಲಾ ಕಠಿಣವಾದ ಪರೀಕ್ಷೆಗಳಲ್ಲೂ ಉತ್ತೀರ್ಣನಾಗುವುದು. ರಾಜನು ತನ್ನ ರಾಜ್ಯವನ್ನು ಮಾರಿ, ಹೆಂಡತಿ, ಮಗನನ್ನು ಕೊನೆಗೆ

ತನ್ನನ್ನೂ ಸಹ ಮಾರಿಕೊಂಡು ಇದ್ದರೂ ಸಹ ವಚನಭ್ರಷ್ಟನಾಗಲಿಲ್ಲ. ಆದರಿಂದಲೇ ಅವನು ಸತ್ಯವಾದಿನ್ ಎಂಬ ವಿಶೇಷಣ ಪಡೆದ ಸತ್ಯವಾದೀ ಹರಿಶ್ಚಂದ್ರ.

ಭಾರತೀಯ ಪರಂಪರೆಯು ಸತ್ಯಕ್ಕೆ ಅತ್ಯಂತ ಉನ್ನತವಾದ ಸ್ಥಾನವನ್ನು ನೀಡಿದೆ ಮತ್ತು ಸತ್ಯವನ್ನು ವೇದದೊಂದಿಗೆ ಸಮೀಕರಿಸಿದೆ. ಏಕೆಂದರೆ ವೇದವು ಅವಿನಾಶಿಯಾದುದು. ಸತ್ಯಮೇವಾಕ್ಷಯಾ ವೇದಾಃ[17] ಮತ್ತು ಬ್ರಹ್ಮನೊಂದಿಗೂ ಅದನ್ನು ಸಮೀಕರಿಸಿದೆ. ಸತ್ಯಮೇಕಪದಂ ಬ್ರಹ್ಮ. ಒಂದೇ ಪದದಲ್ಲಿ ಹೇಳಬೇಕಾದರೆ ಸತ್ಯವೇ ಬ್ರಹ್ಮ[18] ಎಂದು ರಾಮಾಯಣ ಉದ್ಗಾರವೆತ್ತುತ್ತದೆ. ಅದನ್ನು ಕಂಡುಕೊಂಡ ಋಷಿಯ ನುಡಿಯೆಂದರೆ ಇದಮಹಂ ಅನೃತಾತ್ ಸತ್ಯಮುಪೈಮಿ[19]. ನಾನು ಅಸತ್ಯದಿಂದ ಸತ್ಯದೆಡೆಗೆ ಹೋಗಿರುವೆ. ಪ್ರಾಪಂಚಿಕವಾದ ಇರುವಿಕೆಯೆಲ್ಲವೂ ಅಶಾಶ್ವತವು. ಯಾವುದು ಇರುವುದು ಅಥವಾ ಸತ್ಯವೆಂದರೆ ಎಂದೆಂದೂ ಇರುವ, ಎಲ್ಲವನ್ನೂ ಬಲ್ಲ, ಸ್ವಯಂಭೂವಾದ ಸರ್ವೋನ್ನತವಾದ ಅತ್ಯುನ್ನತವಾದ ಸತ್ಯವು – ಸತ್ಯಂ ಪರಂ ಅದು ಎಲ್ಲಾ ತೋರುವಿಕೆಗೂ ಅತೀತವಾದುದು – ನಿರಸ್ತ ಕುಹಕಂ ಅದನ್ನೇ ನಾವೆಲ್ಲರೂ ಆರಾಧಿಸುತ್ತೇವೆ – ಧೀಮಹಿ[20]. ಈ ಸತ್ಯವೇ ಸಾರ್ವತ್ರಿಕವಾದುದು. ಅದು ಹಿಂದೆಯೂ ಸತ್ಯ, ಇಂದೂ ಸತ್ಯ, ಮುಂದೆಯೂ ಸತ್ಯವಾಗೇ ಇರುತ್ತದೆ. ವೋ ಸೀತೀಸಚ್, ವೋ ಹೈಭೀಸಚ್, ವೋ ಹೋತೀಬೀಸಚ್ ಎಂದು ನಾನಕರು ಹೇಳುತ್ತಾರೆ. ಪಾರಮಾರ್ಥಿಕ ಸ್ತರದಲ್ಲಿ ಸತ್ಯ ಹಾಗೂ ದೇವರು ಒಂದೇ ಮತ್ತು ಅದು ಅವಿಭಾಜ್ಯವಾದುದು. ಸತ್ಯವೇ ದೇವರು, ದೇವರೇ ಸತ್ಯ.

ಹೇಗೆ ಅಶೋಕನು ಪ್ರಶ್ನೆ ಹಾಕುವವನನ್ನು ಕೇಳಿದನೋ – ಧರ್ಮ ಎಂದರೇನು? ಅನೇಕ ಸಲ ಆಚರಣೆಯಲ್ಲಿ ಅದನ್ನು ಒತ್ತಿಹೇಳಿ ನಮ್ಮ ಅನೇಕ ಜ್ಞಾನಿಯಾದ ಪೂರ್ವಜರು ವಿಚಾರ ಮಾಡಿರುವಂತೆಯೇ ಸತ್ಯ ಎಂದರೇನೆಂದು. ಕೇನೋಪನಿಷತ್ತಿನ ಪ್ರಕಾರ ವಂಚನೆಯಿಲ್ಲದ, ವಿಕಾರವಿಲ್ಲದ ನುಡಿ, ಮನಸ್ಸು ಮತ್ತು ದೇಹವೇ ಸತ್ಯವು – ಸತ್ಯಮಿತಿ ಅಮಾಯಿತಾ ಅಕೌಟಿಲಂ ವಾಙಮನಃ ಕಾಯಾನಾಂ [21]. ಸುಲಭವಾಗಿ ಹೇಳುವುದಾದರೆ ಅಮಾಯಿತಾ ಎಂದರೆ ಋಜುವಾದುದು, ಕೃತಕವಲ್ಲದ್ದು. ಅದು ಮಾತು, ಮನಸ್ಸು ಹಾಗೂ ದೇಹವನ್ನು ವ್ಯಾಪಿಸಿರುತ್ತದೆ. ಕೃತಕವಾದ ಮಾತು ಉಚ್ಚಾರವಾಗುವುದಕ್ಕಿಂತ ಭಿನ್ನವಾದ ಅರ್ಥವನ್ನು ಹೊಂದಲ್ಪಟ್ಟಿರುತ್ತದೆ. ಒಂದಕ್ಕಿಂತಲೂ ಹೆಚ್ಚಾದ ಅರ್ಥಕೊಡುವ ಮಾತನ್ನು ನಾವು ಅನೇಕ ಸಲ ಕೇಳುತ್ತೇವೆ. ಅದನ್ನೇ ಕಲೆಯೆಂದೂ ನಮ್ಮ ಮಾತಿಗೇ ವಿಭಿನ್ನ ಅರ್ಥನೀಡುವ ಅಥವಾ ಅರ್ಥ ವಿಕೃತಿಯೆಂದೂ ಕರೆಯಲ್ಪಡುತ್ತದೆ. ಏನನ್ನೋ ಹೇಳಿ ಅದನ್ನೇ ಹೇಳಿಲ್ಲದಂತೆಯೇ ಒಬ್ಬ ಇರಬಹುದು. ಅದೇ ರಾಜತಾಂತ್ರಿಕತೆಯು. ಮಾತುಗಾರಿಕೆಯು ನಮ್ಮ ಮಾನಸಿಕ ಭಾವನೆಗಳನ್ನು ಹೊರಗೆಡಹುವ ಸಾಧನವಾಗಿರುವುದರಿಂದ ಅದು ಕೇವಲ ಮನಸ್ಸಿನ ಇಂಗಿತವೇ ಆಗಿರುತ್ತದೆ. ಮಾತು, ಮನಸ್ಸು ಹಾಗೂ ದೇಹವು ಋಜುವಾಗಿದ್ದರೆ ಅದರಿಂದ ಹೊರಬರುವುದೂ ಋಜುವಾಗಿಯೇ ಇರುತ್ತದೆ. ಅದನ್ನೇ ಯಾಥಾರ್ಥ್ಯ ಅಥವಾ ಸತ್ಯವೆನ್ನುತ್ತಾರೆ.

ಪ್ರಸ್ತಾವತ್‌ತರಂಗಿಣೀ ಪ್ರಕಾರ ಸತ್ಯ ಎಂಬುದು ಅದರಲ್ಲಿ ಮಾತು ಮತ್ತು ಮನಸ್ಸು ಒಂದನ್ನೇ ಹೇಳುತ್ತದೆ - ಯಥಾರ್ಥ್ಯೇ ವಾಙಮನಸೇ ಸತ್ಯಂ [22]. ನಮ್ಮ ಸಾರ್ವತ್ರಿಕ ಅನುಭವವೆಂದರೆ ನಮ್ಮ ಮನಸ್ಸಿನಲ್ಲಿರುವುದನ್ನು ನಾವು ಹೇಳುವುದಿಲ್ಲ ಆದರೆ, ಅದಕ್ಕೆ ವಿರುದ್ಧವಾಗಿಯೇ ನುಡಿಯುತ್ತೇವೆ. ಆ ನಮ್ಮ ಮಾತು ನಿಜವಾದುದಲ್ಲ. ನಾವು ನಿದ್ರೆಗೆ ಹೋಗುತ್ತಿರುವಾಗ ಯಾರಾದರೂ ಬಾಗಿಲಿನಲ್ಲಿ ಘಂಟೆಯನ್ನು ಶಬ್ದ ಮಾಡಿದರೆ ಅಥವಾ ಸುಖನಿದ್ರೆಯಲ್ಲಿರುವಾಗ ಯಾರು ನಮಗೆ ನಿದ್ರಾಭಂಗಮಾಡಿದರೋ ಅವರನ್ನು ಶಪಿಸುತ್ತೇವೆ. ನಾವು ಅತ್ಯಂತ ಬೇಸರದಿಂದ ಗೊಣಗಾಟದಿಂದ ಬಾಗಿಲನ್ನು ತೆಗೆಯುತ್ತೇವೆ ಆದರೆ ಅಲ್ಲಿ ನಮ್ಮ ಪ್ರಿಯಮಿತ್ರನನ್ನು ಕಂಡು ಅಥವಾ ನಮ್ಮ ಚಿರಪರಿಚಿತರನ್ನು ಕಂಡು ನಾವು ನಗುಮುಖದಿಂದ, ಅತ್ಯಂತ ಸಂತುಷ್ಟರಾಗಿ ಅವರನ್ನು ಬರಮಾಡಿಕೊಳ್ಳುತ್ತೇವೆ. ಇದು ನಿಜವಾಗಿಯೂ ಸತ್ಯವಲ್ಲ. ಆ ಸಮಯದಲ್ಲಿ ನಮ್ಮ ಮನಸ್ಸು ಮತ್ತು ಮಾತು ಒಂದೇ ಸ್ತರದಲ್ಲಿಲ್ಲ. ಅದು ಒಂದೇ ಸ್ತರದಲ್ಲಿದ್ದಾಗ ಮಾತ್ರವೇ ಸತ್ಯ.

ನಾವು ಯಾವಾಗಲೂ ಸತ್ಯದಲ್ಲಿಲ್ಲದಿರುವುದರಿಂದಲೇ ಅದಕ್ಕೆ ವಿಶೇಷಣವನ್ನು ನೀಡುತ್ತೇವೆ. ಸರ್ವೇ ಸಾಮಾನ್ಯವಾಗಿ ಅಂತಹ ಮಾತನಾಡುತ್ತೇವೆ - ಇದು ನಿಜವು. ನಿಜಕ್ಕೂ ಸತ್ಯವೇ. ಅದು ಸತ್ಯವಲ್ಲದೆ ಮತ್ತೇನೂ ಅಲ್ಲ. ನಮ್ಮ ಮಾತುಗಳಾದ ಅದು ಸತ್ಯಕ್ಕಿಂತ ದೂರವಲ್ಲದ್ದು. ಅದೇ ನಿಜವಾದ ತಿಳಿ ಸತ್ಯ. ಅದು ಸತ್ಯಕ್ಕಿಂತಲೂ ಬೇರೆಯಾದುದಲ್ಲ. ಅದೇ ನಿಜವಾದ ಸತ್ಯ ಸುಳ್ಳನ್ನು ಸತ್ಯವನ್ನು ಅಸತ್ಯದಿಂದ ದೂರಮಾಡುವುದು ಈ ರೀತಿ ಬಹಳ ಹಿಂದಿನಿಂದಲೂ ನಡೆದುಬರುತ್ತಿದೆ.

ಲಿಂಗಪುರಾಣದ ಪ್ರಕಾರ ನಾವು ನೋಡಿದಂತೆ, ಕೇಳಿದಂತೆ, ಊಹಿಸಿದಂತೆ ಅಥವಾ ಅನುಭವಿಸಿದಂತೆ ಇರುವುದೇ ಸತ್ಯವು. ಆದರೆ ಅದು ಯಾರಿಗೂ ನೋವನ್ನುಂಟು ಮಾಡಬಾರದು.

ದೃಷ್ಟಂಶ್ರುತಂ ಚಾನುಮಿತಂ ಸ್ವಾನುಭೂತಂ ಯಥಾರ್ಥತಃ ।
ಕಥನಂ ಸತ್ಯಮಿತ್ಯುಕ್ತಂ ಪ್ರಾಣಪೀಡಾ ವಿವರ್ಜಿತಂ ॥ [23]

ಪ್ರಾಣಪೀಡಾ ವಿವರ್ಜಿತಂ ಎಂಬ ನುಡಿ ಬೇರೆಯವರಿಗೆ ನೋವನ್ನುಂಟು ಮಾಡದಿರುವುದು ನಮ್ಮನ್ನು ಸತ್ಯಾಂಶದತ್ತ ಕೊಂಡೊಯ್ಯುತ್ತದೆ ಮತ್ತು ಅದನ್ನು ಭಾರತೀಯ ಪರಂಪರೆ ಬಹಳ ಸೂಕ್ಷ್ಮವಾಗಿ ಗಮನಿಸಿದೆ. ಕೇವಲ ವಸ್ತು ಸ್ಥಿತಿಯನ್ನೇ ಅದು ಸತ್ಯವೆಂದು ಪರಿಗಣಿಸುವುದಿಲ್ಲ, ಆದರೆ, ಬೇರೆಯವರಿಗೆ ತೊಂದರೆ ಅಥವಾ ನೋವನ್ನುಂಟು ಮಾಡದಿರುವುದೇ ಸತ್ಯವು. ಒಂದು ವೇಳೆ ಸುಳ್ಳು ಯಾರಾದರೂ ಪ್ರಾಣವನ್ನು ಬದುಕಿಸಬಹುದಾದರೆ ಅದೂ ಸತ್ಯ ಆಗುತ್ತದೆ. ಪದ್ಮಪುರಾಣ ಹೇಳುವಂತೆ ಜೀವವನ್ನು ರಕ್ಷಿಸಬಲ್ಲಸುಳ್ಳು ಸತ್ಯವೇ ಮತ್ತು ಆ ರೀತಿ ಮಾಡದಿರುವ ಸತ್ಯವೂ ಸುಳ್ಳೇ.

ಉಕ್ತ್ವಾನೃತಂ ಭವೇ ದ್ಯತ್ರ ಪ್ರಾಣಿನಾಂ ಪ್ರಾಣ ರಕ್ಷಣಂ ।
ಅನೃತಂ ತತ್ರ ಸತ್ಯಂ ಸ್ಯಾತ್ ಸತ್ಯಮಪ್ಯನೃತಂ ಭವೇತ್ ॥ [24]

ಇದೇ ಮಾತನ್ನೇ ಯೋಗಸೂತ್ರ ಹಾಗೂ ಲಾಟಸಂಹಿತಾ ಪ್ರತಿಧ್ವನಿಸುತ್ತದೆ. ಇಲ್ಲಿರುವ ಪ್ರಶ್ನೆಯೆಂದರೆ :-

ನಾವು ಇದನ್ನು ಪಟ್ಟು ಹಿಡಿದು ನಿಲ್ಲಬೇಕೇ? ಒಬ್ಬ ಡಕಾಯಿತ ಅಥವಾ ಕಳ್ಳನಿಗೆ ಅಮಾಯಕ ಅಡಗಿಕೊಂಡಿರುವ ಸ್ಥಳ ನಿರ್ದೇಶ ಮಾಡಿದರೆ ಅವನು ಕೊಲೆಗೀಡಾಗುವನು. ಆಗ ಅದು ಸತ್ಯವಾಗುವುದೇ? ಈ ಹಂತದಲ್ಲೇ ನಮ್ಮ ಹಿಂದಿನ ಮುನಿಗಳು ಸತ್ಯದ ಎಲ್ಲಾಂಗಗಳನ್ನು ಗಮನದಲ್ಲಿಟ್ಟುಕೊಂಡು ಅಂತಹ ಆಪತ್ಕಾಲದಲ್ಲಿ ಅಸತ್ಯ ನುಡಿಯುವುದು ತಪ್ಪಲ್ಲವೆಂಬ ತೀರ್ಮಾನಕ್ಕೆ ಬಂದರು. ಸತ್ಯದ ಕಾರ್ಯಶೀಲತೆಯ ಬಗ್ಗೆ ಮಹಾಭಾರತವು ಪುಷ್ಟೀಕರಿಸುತ್ತದೆ. ಎಲ್ಲಿ ಸತ್ಯವನ್ನು ಹೇಳಬಾರದೋ ಅಸತ್ಯವನ್ನೇ ಹೇಳಬೇಕೋ, ಅಸತ್ಯ ಸತ್ಯವಾಗುತ್ತದೆ ಮತ್ತು ಸತ್ಯವೇ ಅಸತ್ಯವಾಗುತ್ತದೆ.

ಭವೇತ್‌ಸತ್ಯಂ ಅವಕ್ತವ್ಯಂ ವಕ್ತವ್ಯಂ ಅನೃತಂ ಭವೇತ್ ।
ತತ್ರಾನೃತಂ ಭವೇತ್ ಸತ್ಯಂ ಸತ್ಯಂ ಚಾಪ್ಯನೃತಂ ಭವೇತ್ ॥

ಸತ್ಯವನ್ನು ನುಡಿಯುವುದು ಮುಖ್ಯವಾದುದು. ಎಲ್ಲದರ ಬಗ್ಗೆಯೂ ಸರಿಯಾಗಿರುವುದು. ಆದರೆ, ಸತ್ಯವು ಯಾರಿಗೂ ತೊಂದರೆಯನ್ನುಂಟು ಮಾಡಬಾರದು.

ಯದ್ ವಿದ್ಯಮಾನಾರ್ಥವಿಷಯಂ ಪ್ರಾಣ ಪೀಡಾಕರಣಂ ತತ್ ಸತ್ಯಮಪ್ಯಸತ್ಯಂ [27]

ಒಂದಕ್ಕಿಂತ ಹೆಚ್ಚು ಸಂಸ್ಕೃತ ಕೃತಿಯು ಸತ್ಯವನ್ನು ಎಲ್ಲ ಶ್ರೇಷ್ಠ ಗುಣಗಳಲ್ಲೂ ಉತ್ತುಂಗಕ್ಕೇರಿಸುತ್ತದೆ. ಬ್ರಹ್ಮವೈವರ್ತ ಪುರಾಣ ಅಂತಹ ಗುಣಗಳನ್ನು ನಿರೂಪಿಸುತ್ತಾ ಸತ್ಯದಲ್ಲಿ ಪರ್ಯವಸಾನವಾಗುತ್ತದೆ. ಅದರ ಪ್ರಕಾರ ಧರ್ಮದ ಶ್ರೇಷ್ಠ ಪ್ರಕಾರವೇ ಸತ್ಯ. ನಾಸ್ತಿ ಸತ್ಯಾತ್ ಪರೋಧರ್ಮಃ [28].

ಒಂದು ದೀರ್ಘಚತುರಸ್ರದ ಕೊಳ ನಿರ್ಮಾಣ ಮಾಡುವುದು ನೂರು ಬಾವಿ ತೋಡುವುದಕ್ಕಿಂತ ಮಿಗಿಲು. ಅಂತಹ ಹತ್ತು ಕೊಳಗಳನ್ನು ದಾನ ಮಾಡುವುದಕ್ಕಿಂತ ಒಂದು ಕನ್ಯಾದಾನ ಲೇಸು. ಹತ್ತು ಕನ್ಯಾದಾನಕ್ಕಿಂತಲೂ ಒಂದು ಯಾಗ ಮಾಡುವುದು ಲೇಸು. ನೂರು ಯಾಗ ಮಾಡುವುದಕ್ಕಿಂತ ಸತ್ಯ ನುಡಿಯುವುದು ಲೇಸು. ಸಮಸ್ತ ವಿಶ್ವವೂ ಸತ್ಯದ ಮೇಲೆ ನಿಂತಿದೆ ಏಕೆಂದರೆ ಎಲ್ಲಕ್ಕೂ ಅದೇ ತಳಹದಿ. ಅದರಿಂದಲೇ ಗಾಳಿಯು ಬೀಸುತ್ತಿದೆ. ಸೂರ್ಯನೂ ಪ್ರಕಾಶಿಸುತ್ತಿದ್ದಾನೆ. ಎಲ್ಲವೂ ಅದರ ಮೇಲೆ ಆಧಾರಿತವಾಗಿದೆ. ಅದೇ ಅತ್ಯಂತ ಶ್ರೇಯಸ್ಕರವು. ಅದರೊಂದಿಗೆ ಒಂದಾದವರು ದೈವತ್ವವನ್ನು ಹೊಂದುತ್ತಾರೆ.

ರಾಜ್ಯ ಶಾಸನದಲ್ಲೂ ಸತ್ಯವನ್ನು ಪ್ರಧಾನ ವಿಷಯವಾಗಿ ಪರಿಗಣಿಸಲ್ಪಟ್ಟಿದೆ. ರಾಜನಿಗಿರಬೇಕಾದ ಗುಣಗಳಲ್ಲಿ ಸತ್ಯವೇ ಪ್ರಥಮಸ್ಥಾನ ಪಡೆದಿದೆ. ಸತ್ಯಂ ಶೌರ್ಯಂ ದಯಾತ್ಯಾಗೋ ನೃಪಸ್ಯೆತೇ ಮಹಾಗುಣಾಃ [29]. ಸತ್ಯ ಪರಾಕ್ರಮ, ಅನುಕಂಪ, ದಾನ, ರಾಜನ ಶ್ರೇಷ್ಠ ಗುಣಗಳು. ಅದಿಲ್ಲವಾದರೆ ಅವನು ಅಪಕೀರ್ತಿಗೆ ಕಾರಣನಾಗುತ್ತಾನೆ.

ಒಂದು ಸಂಧಾನವನ್ನು ಮಾಡಿಕೊಳ್ಳಬೇಕಾದರೂ ಸಹ ಸತ್ಯಸಂಧನಾದ ರಾಜನೊಡನೆಯೇ ಮಾಡಿಕೊಳ್ಳಬೇಕು.

ರಘುರಾಜರ ವರ್ಣನೆ ಮಾಡಿದಾಗ ಕಾಳಿದಾಸ ಒಂದು ಅಮೂಲ್ಯವಾದ ಹೇಳಿಕೆ ನೀಡುತ್ತಾನೆ. ಸತ್ಯವನ್ನು ಉಳಿಸಿಕೊಳ್ಳಲು ಅವರು ಪದಗಳನ್ನು ಕಡಿಮೆ ಬಳಸುತ್ತಿದ್ದರು - ''ಸತ್ಯಾಯ ಮಿತಭಾಷಿಣಾಮ್''[30]. ಭಾರತೀಯ ಮನಃಶಾಸ್ತ್ರದ ಬಗ್ಗೆ ನಮ್ಮ ಹಿಂದಿನವರಿಗಿದ್ದ ಆಳವಾದ ಜ್ಞಾನ ಇದರಿಂದ ಮನದಟ್ಟಾಗುತ್ತದೆ. ಅನೇಕ ಪದಗಳ ಬಳಕೆಯು ಸತ್ಯದಿಂದ ನಮ್ಮನ್ನು ದೂರಮಾಡುತ್ತದೆ. ಶಬ್ದಾಡಂಬರ ಹಾಗೂ ಬೌದ್ಧಿಕ ನೈಪುಣ್ಯತೆ ಸತ್ಯದ ಸಂಕುಚಿತ ಮಾರ್ಗದಿಂದ ದೂರ ತಳ್ಳುತ್ತದೆ. ಸತ್ಯ ಎಂಬ ತಕ್ಕಡಿಯಲ್ಲಿ ತೂಗೇ ಅದನ್ನು ಉಚ್ಚರಿಸಬೇಕು. ಸತ್ಯಪೂತಂ ವದೇದ್ ವಾಚಂ[31].

---

## ಆಕರ ಗ್ರಂಥಗಳು

1) 11.1 2) ಅದೇ 3) ಈಶೋಪನೊಷತ್.15 4) ಮತ್ತೂ ಯಜುರ್ವೇದ.40.17. 5) ಅದೇ. 6) ಮುಂಡಕೋಪನಿಷತ್ 7) ಅದೇ. 8) ಯಾಜ್ಞವಲ್ಕ್ಯ ಸ್ಮೃತಿ.3.5.312 9) 4.402. 10) ರಾಮಾಯಣ.ಐಐ.19.2 11) ಅದೇ.ಐಐ.19.23. 12) ಅದೇ.ಐಐ..18.40 13) ಚಾಣಕ್ಯ ಸೂತ್ರಾಣಿ 417 14) ಶಾರೀರಿಕ ಮೀಮಾಂಸಾಭಾಷ್ಯ.1.1.1.160. 15) ಮಹಾಭಾರತ.1.82.16. 16) ಮನುಸ್ಮೃತಿ.6.92. 17) ರಾಮಾಯಣ.ಐಐ.14.7. 18) ಅದೇ. 19) ಯಜುರ್ವೇದ.1.5 20) ಶ್ರೀಮದ್ ಭಾಗವತಪುರಾಣ 21) ಕೇನೋಪನಿಷತ್.4.8. 22) ಪ್ರಸ್ತಾವತರಂಗಿಣೀ.ಪು.40. 23)ಲಿಂಗ ಪುರಾಣ.8.13. 24) ಪದ್ಮಪುರಾಣ.5.-392. 25) 1.21. 26)ಮಹಾಭಾರತ. ಕರ್ಣಪರ್ವ.69.32. 27) ಚಾರಿತ್ರಶಾರಚಿಕಾ.2. 28) ಬ್ರಹ್ಮವೈವರ್ತಪುರಾಣ ಜನ್ಮಖಂಡ. ಅಧ್ಯಾಯ.95 (ಶಬ್ದಕಲ್ಪದ್ರುಮ) 29) ಹಿತೋಪದೇಶ.3.31. 30) ರಘುವಂಶ.1.7. 31) ಮನುಸ್ಮೃತಿ.6.46.

# 3. ಧರ್ಮ

ವಿದ್ಯಾರ್ಥಿಯ ವಿದ್ಯಾಭ್ಯಾಸ ಮುಗಿದಾಗ ಗುರುವಿನಿಂದ ಸಮಾವರ್ತನ ಸಮಯದಲ್ಲಿ ಉಪದೇಶಿಸಲ್ಪಡುತ್ತಿತ್ತು . ಅವನು ಅಲ್ಲಿ ಧರ್ಮವನ್ನು ಆಚರಿಸಬೇಕಾಗಿತ್ತು. ಧರ್ಮಂಚರ[1] ಮತ್ತು ಯಾವುದೇ ಕಾರಣಕ್ಕೂ ಅದನ್ನು ಮೀರಬಾರದು. ಧರ್ಮಾನ್ನ ಪ್ರಮದಿತವ್ಯಂ.[2]

ಋಷಿಗಳಿಂದಲೂ, ಮುನಿಗಳಿಂದಲೂ, ಜ್ಞಾನಿಗಳಿಂದಲೂ, ವೇದಾಂತಿಗಳಿಂದಲೂ, ಬರಹಗಾರರಿಂದಲೂ, ವಿಮರ್ಶಕರಿಂದಲೂ ಧರ್ಮಕ್ಕೆ ಹೆಚ್ಚಿನದಾದ ಸ್ಥಾನ ದೊರಕಿದೆ. ನಾವು ಅದನ್ನು ಕಾಪಾಡಿದರೆ, ಅದೂ ನಮ್ಮನ್ನು ಕಾಪಾಡುತ್ತದೆ. ನಾವು ಅದನ್ನು ಕೊಲ್ಲಲು ಯತ್ನಿಸಿದರೆ ಅದೂ ನಮ್ಮನ್ನು ಕೊಲ್ಲುತ್ತದೆ – ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ.[3]

ನಿರುಕ್ತದ ಪ್ರಕಾರ ಯಾವುದು ಹಿಡಿದಿಡುವುದೋ ಅದೇ ಧರ್ಮ. ಧಾರಣಾತ್ ಧರ್ಮ ಇತ್ಯಾಹುಃ. ಮನುಷ್ಯರನ್ನು ಒಗ್ಗೂಡಿಸುವುದೇ ಧರ್ಮ. ಧರ್ಮೋಧಾರಯತೇ ಪ್ರಜಾ.[4] ಧರ್ಮವು ಎರಡು ಅಂಶಗಳಿಂದ ಮಾಡಲ್ಪಟ್ಟಿದೆ.[5] ಧೃ ಎಂದರೆ ''ಧರಿಸುವುದು'' ಮತ್ತು ಮತ್ ಎಂಬ ಪ್ರತ್ಯಯ ''ಹಿಡಿದಿಡುವುದು'' ಎಂಬರ್ಥ ನೀಡುವುದು. ಅದು ನಿಯಮಗಳು, ನಂಬಿಕೆಗಳು, ಆಚಾರಗಳು. ಅದು ವಯಕ್ತಿಕ ಹಾಗೂ ಸಾಮಾಜಿಕ ರೀತಿನೀತಿಗಳನ್ನು ಬೋಧಿಸುವಂತಹದು. ಸಾಮಾಜಿಕ ಸ್ತರಕ್ಕೆ ಅದೇ ಮೂಲ ತಳಹದಿ. ಇವುಗಳಿಲ್ಲದೆ ಅನಿಯಮಿತವಾದ ವ್ಯಕ್ತಿಗಳಿಂದ ಸಮಾಜವು ಕುಸಿಯುತ್ತದೆ. ಧರ್ಮಾಚರಣೆ ಇಲ್ಲದ ಮಾನವ ತನ್ನ ಮೂಲ ಸ್ವರೂಪವಾದ ಪ್ರಾಣಿಯೇ ಆಗಿರುತ್ತಾನೆ – ಧರ್ಮೇಣ ಹೀನಃ ಪಶುಭಿಃ ಸಮಾನಃ. ಈ ಸುಖವಾದ ಶಬ್ದ ವಿವರಣೆಗೆ ಬಹಳ ಹಿಂದಿನ ದಿನಗಳಿಂದಲೂ ಪ್ರಯತ್ನ ನಡೆದಿದೆ. ಮನು ತನ್ನ ಸ್ಮೃತಿಯಲ್ಲಿ ಅದರ ಹತ್ತು ಗುಣಗಳನ್ನು ವರ್ಣಿಸಿದ್ದಾನೆ – ತೃಪ್ತಿ, ಕ್ಷಮೆ, ಇಂದ್ರಿಯ ನಿಗ್ರಹ, ಅಧರ್ಮ ರೀತಿಯಿಂದ ಹಣಗಳಿಸದಿರುವಿಕೆ, ಪಾವಿತ್ರತೆ, ಇಂದ್ರಿಯಗಳ ಬಲಾತ್ಕಾರತೆ, ವಿವೇಕ, ಆತ್ಮಜ್ಞಾನ ಸತ್ಯ ಹಾಗೂ ಕೋಪದ ತಡೆ.

ಧೃತಿಃ ಕ್ಷಮಾ ಧಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಧೀರ್ವಿದ್ಯಾಸ್ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ ॥[6]

ಹಿತೋಪದೇಶ ಇದರ ಸಂಖ್ಯೆಯನ್ನು ಎಂಟಕ್ಕಿಳಿಸುತ್ತದೆ.

ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಧೃತಿಃ ಕ್ಷಮಾ ।
ಅಲೋಭ ಇತಿ ಮಾರ್ಗೋಽಯಂ ಧರ್ಮಸ್ಯಾಷ್ಟವಿಧಂ ಸ್ಮೃತಃ ॥[7]

ಯಜ್ಞಯಾಗಾದಿಗಳು, ವೇದಾಧ್ಯಯನ, ದಾನ, ತಪಸ್ಸು, ಸತ್ಯ, ಲೋಭವಿಲ್ಲದಿರುವುದು, ಕ್ಷಮಾಗುಣ ಹಾಗೂ ಅತಿಯಾಸೆ ಇಲ್ಲದಿರುವುದು ಧರ್ಮದ ನಾಲ್ಕು ಅಂಗಗಳು.

ಭಾಗವತ ಪುರಾಣವು ಸಂಖ್ಯೆಯನ್ನು ಒಂದಕ್ಕಿಳಿಸುತ್ತದೆ. ಅದು ಧರ್ಮದ ಏಳು ಗುಣಗಳನ್ನು ನಿರೂಪಿಸುತ್ತದೆ :-

ಅಹಿಂಸಾ ಸತ್ಯಮಸ್ತೇಯಂ ಅಕಾಮಕ್ರೋಧಲೋಭತಾ ।
ಭೂತಪ್ರಿಯಾಹಿತೇಹಾಚಧರ್ಮೋಽಯಂ ಸಾರ್ವವರ್ಣಿಕಃ ॥ [8]

ಅಹಿಂಸೆ, ಸತ್ಯ, ಕದಿಯದಿರುವುದು, ಆಸೆಗಳಿಲ್ಲದಿರುವುದು, ಕೋಪದನಿಗ್ರಹ, ಅತಿಯಾಸೆಯಿಲ್ಲದಿರುವಿಕೆ, ಎಲ್ಲರಿಗೂ ಹಿತವನ್ನು ಉಂಟುಮಾಡುವುದು ಸರ್ವವರ್ಣದವರಿಗೂ ಧರ್ಮವೆಂದೇ ಪರಿಗಣಿತವಾಗಿದೆ.

ಮನು ಏಳರಿಂದ ಐದಕ್ಕೆ ಅದನ್ನು ಇಳಿಸುತ್ತಾನೆ. ಆ ಐದೆಂದರೆ ಪ್ರಾಣಿಗಳಿಗೆ ತೊಂದರೆ ಮಾಡದಿರುವುದು, ಸತ್ಯ, ಅನೈತಿಕವಾಗಿ ಬೇರೆಯವರ ವಸ್ತುಗಳನ್ನು ವಶಪಡಿಸಿಕೊಳ್ಳದಿರುವುದು, ಮತ್ತು ಇಂದ್ರಿಯ ನಿಗ್ರಹ :-

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೆ ಬ್ರವೀನ್ಮನುಃ ॥ [9]

ಐದರಿಂದ ನಾಲ್ಕಕ್ಕೆ ಸಂಖ್ಯೆಯನ್ನಿಳಿಸಿ ಅವನೇ ಹೇಳುವಂತೆ ವೇದ, ಪವಿತ್ರವಾದ ಪರಂಪರೆ, ಪುಣ್ಯಾತ್ಮರ ವ್ಯವಹಾರ, ಆತ್ಮಸುಖ ಧರ್ಮವಾಗುತ್ತದೆ :-

ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥ [10]

ಮಹಾಭಾರತ ಈ ಎಲ್ಲಾ ಅಂಶಗಳನ್ನು ಕ್ರೋಢೀಕರಿಸಿ ಒಂದನ್ನೇ ಸರ್ವಸ್ವ ಎಂದು ನಿರೂಪಿಸುತ್ತದೆ. ಅದೇ ಧರ್ಮ ಸರ್ವಸ್ವ. ತಾನು ಯಾವುದನ್ನು ಎದುರಿಸಲು ಬಯಸುವುದಿಲ್ಲವೋ ಅದನ್ನು ಬೇರೆಯವರಿಗೆ ಮಾಡಬಾರದು – ಆತ್ಮನಃ ಪ್ರತಿ ಕೂಲಾನಿ ಪರೇಷಾಂ ನ ಸಮಾಚರೇತ್. ಅದು ಅದನ್ನು ಆನೃಶಂಸ್ಯ [11] ಎಂದೂ ವರ್ಣಿಸುತ್ತದೆ. ಅನುಕಂಪೆಯೇ ಪರಮಧರ್ಮ ಅಥವಾ ಆರ್ಜವ. ಸರಳವಾಗಿರುವುದು ಆರ್ಜವಂ ಧರ್ಮ ಮಿತ್ಯಾಹುಃ [12].

ಸಾರವತ್ತಾಗಿ ಹೇಳುವ ಮಾರ್ಗದಿಂದ ಧರ್ಮವನ್ನು ವ್ಯಾಖ್ಯಾನಿಸುವ ಪದ್ಧತಿಯನ್ನು ಕಣಾದನ ಈ ಹೇಳಿಕೆಯಿಂದ ಗಮನಿಸಬಹುದಾಗಿದೆ. "ಯತೋ ಅಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ ॥ [13]. ಯಾವುದು ಇಹಲೋಕದ ಏಳ್ಗೆ ಹಾಗೂ ನಿಃಶ್ರೇಯಸ್ಸನ್ನುಂಟು ಮಾಡುವುದೋ ಅದೇ ಧರ್ಮ. ಜೈಮಿನಿಯ ಪ್ರಕಾರ ಚೋದನಾಲಕ್ಷಣಾರ್ಥೋ ಧರ್ಮಃ ವೈದಿಕ ಆದೇಶವೇ ಧರ್ಮ.

ಅಶೋಕ ಚಕ್ರವರ್ತಿಯೂ ಧರ್ಮವನ್ನು ವ್ಯಾಖ್ಯಾನಿಸುತ್ತಾನೆ. ಅವನು ಅದನ್ನು ಧರ್ಮ ಎಂದು ಕರೆಯುತ್ತಾನೆ. ಅದರ ಪಾಳಿಯ ರೂಪಾಂತರವೆಂದರೆ ಒಳ್ಳೆಯತನ,

ಮಾರ್ದವ, ದಯಾ, ದಾನೇ, ಸಚೇ, ಸೋಚವೇ, ಮಾಧವೇ, ಸಾಧವೇ [14]. ಇದು ಮನು ನಿರೂಪಿಸಿದ ವ್ಯಾಖ್ಯೆಯ ಸಾರವೇ ಆಗಿದೆ. ಆದ್ದರಿಂದ ಮನು ಹಾಗೂ ಅಶೋಕರ ಪ್ರಕಾರ ಧರ್ಮ ಎಂಬುದು ಎಲ್ಲಾ ಮತಗಳ ಆಸ್ತಿಯಾಗಿದೆ.

ಒಂದೇ ಪದಕ್ಕೆ ಅನೇಕ ಓರೆಕೋರೆಗಳಿರುವ ಅರ್ಥವುಳ್ಳ ಈ ಪದಕ್ಕೆ ನಿಯಮ, ಆಚರಣೆ ಎಂದೂ ಅರ್ಥವುಂಟು. ಕೃತೇಚ ಪ್ರತಿಕುರ್ವೀತ ಏಷ ಧರ್ಮಃ ಸನಾತನಃ [15] ಎಂದರೆ ಒಳ್ಳೆಯ ಕೃತಿಯನ್ನು ಹಿಂದಿರುಗಿಸಬೇಕು ಎಂದರೆ ಎಷ ಧರ್ಮಃ ಸನಾತನಃ ಎಂದರೆ ಅದು ಅನಾದಿಸತ್ಯವೆಂದರ್ಥ.

ಕರ್ತವ್ಯ ಎಂಬರ್ಥದಲ್ಲೂ ಧರ್ಮ ಶಬ್ದದ ಪ್ರಯೋಗ ಬಹಳೆಡೆ ಕಂಡುಬರುತ್ತದೆ. ಮನುವಿನ ಪ್ರಕಾರ ಕೃತಯುಗಕ್ಕಿಂತ ತ್ರೇತಾಯುಗದಲ್ಲಿ ಕರ್ತವ್ಯಗಳು ಭಿನ್ನವಾಗುತ್ತದೆ. ದ್ವಾಪರ ಹಾಗೂ ಕಲಿಯುಗದಲ್ಲೂ ಅದೇ ಅನ್ವಯಿಸುತ್ತದೆ . ''ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ[16]'' ಎಂದು ಭಗವದ್ಗೀತೆ ಹೇಳುವುದರ ತಾತ್ಪರ್ಯವೆಂದರೆ ತನ್ನ ಕರ್ತವ್ಯ ಪ್ರಜ್ಞೆಯಿಂದಲೇ ತಾನು ಸಾವನ್ನಪ್ಪುವುದು ಬೇರೆ ಕರ್ತವ್ಯಗಳನ್ನು ಆಚರಿಸುವುದಕ್ಕಿಂತ ಲೇಸೆಂಬ ಅರ್ಥಬರುತ್ತದೆ. ಕಾಳಿದಾಸನೂ ಇದೇ ಅರ್ಥ ಬರುವಂತೆಯೇ ''ಷಷ್ಠಾಂಶವೃತ್ತೇರಪಿ ಧರ್ಮ ಏಷಃ''[17] ಎಂದು ಪ್ರಯೋಗ ಮಾಡುತ್ತಾನೆ. ಪ್ರಜೆಗಳಿಂದ ಬರುವ ಆದಾಯದ ಆರನೇ ಒಂದು ಭಾಗವನ್ನು ಸ್ವೀಕರಿಸುವುದೇ ಕರ್ತವ್ಯ .

ನಾಲ್ಕು ಪುರುಷಾರ್ಥದಲ್ಲಿ ಒಂದಾಗಿ ಚತುರ್ವರ್ಗ ಧರ್ಮವು ನೈತಿಕತೆ, ಒಳ್ಳೆಯಕ್ರಿಯೆ ಎಂದೇ ಅರ್ಥವಾಗುತ್ತದೆ. ಮರಣದಲ್ಲೂ ಮಾನವನನ್ನು ಹಿಂಬಾಲಿಸುವಂತಹ ಮಿತ್ರನೆಂದರೆ ಇದೊಂದೇ :- ಏಕ ಏವ ಸುಹೃದ್ ಧರ್ಮೋ ನಿಧನೇಪ್ಯನುಯಾತಿಯಃ. [18]

ಕೆಲವು ಸಂದರ್ಭಗಳಲ್ಲಿ ಕರ್ತವ್ಯಗಳಲ್ಲಿ ಘರ್ಷಣೆಯುಂಟಾಗಬಹುದು. ಒಂದನ್ನು ಮಾತ್ರ ಸ್ವೀಕರಿಸಿ ಮತ್ತೊಂದನ್ನು ಆದ್ಯತೆಯ ಮೇಲೆ ಬಿಡಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಬಿಡುವುದು ಅಸ್ವಾಭಾವಿಕವೇನಲ್ಲ. ಕಾಳಿದಾಸ ತನ್ನ ರಘುವಂಶದ ಪ್ರಾರಂಭದಲ್ಲೇ ಅಂತಹ ಒಂದು ಘಟನೆಯನ್ನು ನಿರೂಪಿಸುತ್ತಾನೆ. ದಿಲೀಪನಂತಹ ರಾಜನೂ ಸಹ ತನ್ನ ಆಸ್ತಿಯನ್ನು ಸರಿಯಾಗಿ ನೋಡಿಕೊಳ್ಳಲಾಗಲಿಲ್ಲ. ಪ್ರತಿಯೊಬ್ಬ ಗಂಡನ ಕರ್ತವ್ಯವೆಂದರೆ ಹೆಂಡತಿಯ ಋತುಚಕ್ರವಾದ ಬಳಿಕ ಅವಳನ್ನು ಲೈಂಗಿಕವಾಗಿ ತೃಪ್ತಿ ಪಡಿಸುವುದು. ರಾಜನು ಈ ಕರ್ತವ್ಯ ನಿಷ್ಠೆಯಿಂದ ತನ್ನ ಜವಾಬ್ದಾರಿಯನ್ನು ನಿರ್ವಹಿಸುವಾಗ ಸುರಭಿ ಎಂಬ ದೇವಧೇನುವನ್ನು ಪ್ರದಕ್ಷಿಣೆ ಮಾಡುವುದನ್ನು ಮರೆತ ಕಾರಣಕ್ಕಾಗಿ ಅದರ ಸಂತತಿಯಾದ ನಂದಿನಿಯನ್ನು ತೃಪ್ತಿಪಡಿಸುವವರೆಗೂ ಸಂತಾನವಿಲ್ಲದಂತಾಯಿತು. ಇಲ್ಲಿ ದಿಲೀಪನಿಗೆ ಎರಡು ಕರ್ತವ್ಯಗಳಿತ್ತು. ಒಂದು ತನ್ನ ಮಡದಿಯ ಬಗ್ಗೆಯಾದರೆ ಮತ್ತೊಂದು ದೇವಧೇನುವಿನ ಬಗ್ಗೆ, ಹೆಂಡತಿಯೊಡನೆ ಕೂಡುವಿಕೆ ಧರ್ಮವಾದರೂ ದೈವಿಕ ಧೇನುವಿಗೂ ಧರ್ಮ ಮಾಡುವುದು ಅವನ ಹೊಣೆಯಾಗಿತ್ತು - ಸಾಧ್ಯಾಚರಣ. ಇಂತಹ ಇಕ್ಕಟ್ಟಿನ ಸ್ಥಿತಿಯಲ್ಲಿ ಅವನು ತೀರ್ಮಾನ ಕೈಗೊಳ್ಳಬೇಕಾಗಿತ್ತು - ದೈವಿಕಧೇನುವನ್ನು ಗೌರವಿಸುವುದು

ದೇವಯೋನಿಯು ಮನುಷ್ಯಯೋನಿಯನ್ನು ಸಂಧಿಸುವುದಕ್ಕಿಂತ ಪ್ರಮುಖ ಎಂದು ತಾತ್ಕಾಲಿಕವಾಗಿ ಅದು ನಿಯಮೋಲ್ಲಂಘನೆಯಂತೆ ತೋರಿಬಂದರೂ ಸಹ.

ಮಹಾಭಾರತದ ಪ್ರಸಂಗದಂತೆ ಯುಧಿಷ್ಠಿರ ಜೂಜೂಟದಲ್ಲಿ ತನ್ನ ಹೆಂಡತಿಯಾದ ದ್ರೌಪದಿಯನ್ನು ಪಣವಾಗಿಟ್ಟು ಅವಳನ್ನೂ ಸೋತು ತನ್ನನ್ನು ಪ್ರಾರಂಭದಲ್ಲೇ ಸೋತ ಬಳಿಕ ದ್ರೌಪದಿ ತನ್ನನ್ನು ಆಸ್ಥಾನಕ್ಕೆ ಕರೆತರಲು ಬಂದಂತಹ ರಥಚಾಲಕನಾದ ಪ್ರತಿಕಾಮಿನ್‌ಗೆ ಪ್ರಶ್ನಿಸುತ್ತಾಳೆ - ತನ್ನನ್ನೇ ಪಣವಾಗಿಟ್ಟು ಸೋತವನಿಗೆ ನೈತಿಕವಾದ ಆಧಾರದ ಮೇಲೆ ತನ್ನ ಹೆಂಡತಿಯನ್ನು ಪಣವಾಗಿಡಲು ಅಧಿಕಾರವಿದೆಯೇ ಎಂದು. ಪ್ರತಿಕಾಮಿಯು ಆ ಮಾತನ್ನು ನ್ಯಾಯಾಂಗಕ್ಕೆ ತಿಳಿಸಿದಾಗ ಯುಧಿಷ್ಠಿರ ಮೌನವಾಗಿರಲು, ದುರ್ಯೋಧನ ದ್ರೌಪದಿಯೇ ಖುದ್ದಾಗಿ ನ್ಯಾಯಾಂಗಕ್ಕೆ ಬಂದು ಆ ಪ್ರಶ್ನೆ ಹಾಕುವುದು ಸೂಕ್ತವೆಂದು ಭಾವಿಸುತ್ತಾನೆ. ತಾನು ಋತುಮತಿಯಾಗಿದ್ದರೂ, ತನ್ನ ಮಾನ ಮುಚ್ಚಿಕೊಳ್ಳಲು ಏಕವಸ್ತ್ರಧಾರಿಣಿಯಾಗಿದ್ದರೂ ಪ್ರತಿಕಾಮಿನನೊಂದಿಗೆ ಅವಳು ನ್ಯಾಯಾಂಗಕ್ಕೆ ಬಂದು ತನ್ನ ಮಾವನಾದ ಧೃತರಾಷ್ಟ್ರನ ಮುಂದೆ ನಿಂತಳು. ಅಲ್ಲಿಂದಲೇ ದುರ್ಯೋಧನನ ಅಣತಿಯಂತೆ ದುಃಶಾಸನ ಅವಳನ್ನು ತುಂಬಿದ ಸಭೆಯಲ್ಲಿ ಎಳೆದದ್ದು. ಅಲ್ಲಿ ನೆರೆದಿದ್ದ ಭೀಷ್ಮ, ವಿದುರ, ದ್ರೋಣ, ಕರ್ಣ ಯಾರೂ ಸಹ ಏನೂ ಹೇಳಲಿಲ್ಲ. ಆ ಹೊತ್ತಿಗೆ ದುರ್ಯೋಧನನ ತಮ್ಮನಾದ ವಿಕರ್ಣ ಮೇಲೆದ್ದು ದ್ರೌಪದಿಗೆ ಸಹಾಯಕನಾದ. ಅವನ ವಾದದ ಸಾರವೆಂದರೆ ದ್ರೌಪದಿ ಎಲ್ಲಾ ಪಾಂಡವರಿಗೂ ಮಡದಿಯಾಗಿದ್ದರಿಂದ ಒಬ್ಬರಿಗೂ ಅವಳನ್ನು ಪಣವಾಗಿಡಲು ಅಧಿಕಾರವಿಲ್ಲವೆಂದು. ಇದಕ್ಕೆ ಕರ್ಣ ವಿರೋಧಿಸಿ ಹೇಳುತ್ತಾನೆ. ಮಿಕ್ಕ ಪಾಂಡವರು ಅಷ್ಟು ಹೊತ್ತಿಗೆ ಪಣದಲ್ಲಿ ಸೋತಿದ್ದರಿಂದ ಅವರಿಗೆ ದ್ರೌಪದಿಯ ಮೇಲೆ ಯಾವ ಹಕ್ಕೂ ಇರಲಿಲ್ಲವೆಂದು. ಅದಕ್ಕೂ ಮಿಗಿಲಾಗಿ ಯುಧಿಷ್ಠಿರ ತನ್ನ ಎಲ್ಲಾ ಸಿರಿಯನ್ನೂ ನಷ್ಟಗೊಂಡಿದ್ದನು, ಅದರಲ್ಲಿ ದ್ರೌಪದಿಯೂ ಅಡಕವಾಗಿದ್ದಳು. ಆದ್ದರಿಂದ ಅವನಿಗೆ ಅವನ ಮೇಲೆ ಪ್ರಭುತ್ವವಿದೆಯೇ ಎಂಬುದೇ ಅಸಂಗತವಾದುದು. ದುಃಶಾಸನನಿಂದ ಅವಮಾನಿತಳಾಗಿ ಎಳೆದಾಡಲ್ಪಟ್ಟಾಗಲೂ ಸಹ ದ್ರೌಪದಿ ತನ್ನ ಪ್ರಶ್ನೆಗೆ ಉತ್ತರದ ನಿರೀಕ್ಷೆಯಲ್ಲಿದ್ದಳು. ಈ ಸಂದರ್ಭದಲ್ಲಿ ಭೀಷ್ಮರ ಹೇಳಿಕೆಯೆಂದರೆ ಧರ್ಮದ ತತ್ವವು ನಿಗೂಢವಾದುದು. ಅದು ಮಹಾತ್ಮರಿಗೂ ಬುದ್ಧಿವಂತರಿಗೂ ಎಟುಕಲಾರದಂತಹುದು. ತಾನು ಅದನ್ನು ಸರಿಯಾಗಿ ವಿವರಿಸದೆ ಭೀಷ್ಮನು ಯುಧಿಷ್ಠಿರನಲ್ಲಿ ಅದನ್ನಿಟ್ಟ. ಈ ಕಥೆ ಮುಂದುವರಿದು ನೀಡುವ ತಾತ್ಪರ್ಯವೆಂದರೆ ಧರ್ಮವನ್ನು ಅರ್ಥೈಸುವುದು ಸುಲಭ ಸಾಧ್ಯವಲ್ಲ ಎಂದು.

ಧರ್ಮವೆಂದರೆ ಸರಿಯಾದ ಆಚರಣೆಯೆಂದೂ ಅದು ಸಾಮಾಜಿಕ ಕಟ್ಟುಪಾಡುಗಳಿಗೆ ಅನುಗುಣವಾಗಿರಬೇಕೆಂದೂ ಅದು ಬ್ರಾಹ್ಮಣರಿಗೆ ಮೊದಲು ದಾರಿನೀಡುವಂತಹದು, ಗೋವುಗಳಿಗೆ, ರಾಜರಿಗೆ, ಸಂಧಿಕಾಲದಲ್ಲಿ ಮಲಗದಿರುವುದು, ಹೆದರದಿರುವುದು, ದೊಡ್ಡವರನ್ನು ಹೆಸರಿಟ್ಟು ಕರೆಯದಿರುವುದು, ಇತ್ಯಾದಿ.[19] ಸರಿಯಾಗಿ ಸದಾಚಾರವನ್ನು ಪರಿಪಾಲಿಸುವುದು. ಆದ್ದರಿಂದಲೇ ಪಾರಂಪರಿಕ ಗ್ರಂಥಗಳು ತಲೆಯನ್ನು ಚಚ್ಚಿಕೊಳ್ಳಬಾರದು[20] (ತನ್ನ ಎರಡು ಮುಷ್ಟಿಗಳಿಂದ). ಸೂರ್ಯ ಮತ್ತು ಅಗ್ನಿಯ

ದಿಕ್ಕಿನಲ್ಲಿ ಮೂತ್ರವಿಸರ್ಜನೆ ಮಾಡಬಾರದು[21] (ಅವು ದೇವತೆಯಾಗಿರುವುದರಿಂದ) ಜನಸಂದಣಿಯಿಂದ ದೂರದಲ್ಲಿ ಮೂತ್ರವಿಸರ್ಜನೆ ಮಾಡುವುದು, ಕಾಲುತೊಳೆದ ನೀರನ್ನು ದೂರ ಚೆಲ್ಲುವುದು22. ತಲೆಯನ್ನು ಮಲಗುವಾಗ ಉತ್ತರ ಹಾಗೂ ಪಶ್ಚಿಮ ದಿಕ್ಕಿನಲ್ಲಿ ಇಟ್ಟು ಮಲಗುವುದು23. ಸದಾಚಾರದ ಆದೇಶದಂತೆ ಕೇಳದಿರುವಾಗ ಮಾತನಾಡಲೂಬಾರದು[24].

ಧರ್ಮವನ್ನು ಜೀವನದ ಅವಿಭಾಜ್ಯ ಅಂಗವಾಗಿ ನಡೆಯಬೇಕೆಂದೂ ಅದರಲ್ಲಿ ಲೌಕಿಕ ಆಸಕ್ತಿಯೂ ಬಾರದೆಂದು ಹೇಳಲಾಗಿದೆ. ಯಾರು ಅದಕ್ಕೆ ವಿರುದ್ಧವಾಗಿ ಆಚರಿಸುವರೋ ಅವರು ತಕ್ಕ ಫಲವನ್ನು ಪಡೆಯುವುದಿಲ್ಲ :-

ನ ಧರ್ಮಫಲಮಾಪ್ನೋತಿ ಯೋ ಧರ್ಮಂ ದೋಗ್ಧು ಮಿಚ್ಛತಿ ।
ಯಶ್ಚೈನಂ ಶಂಕತೇ ಕೃತ್ವಾ ನಾಸ್ತಿಕ್ಯಾತ್ ಪಾಪಚೇತನ: ॥25

ಎಂದು ಮಹಾಭಾರತ ನಿರೂಪಿಸುತ್ತದೆ. ಒಂದು ವೇಳೆ ಇಂಗಿತ ಫಲ ದೊರೆಯದಿದ್ದರೆ ಧರ್ಮವನ್ನು ಶಂಕಿಸಬಾರದು. ನಫಲಾ ಭಾವಾತ್ ಧರ್ಮಃ ಶಂಕಿತವ್ಯಃ[26]. ಫಲ ಎಂಬುದು ಅವಶ್ಯಕವಾದುದಲ್ಲ. ಯಾರಿಗೆ ಅದರಲ್ಲಿ ನಂಬಿಕೆಯಿದೆಯೋ ಅವರಿಗೆ ಅದು ದೊರೆತೇ ದೊರೆಯುತ್ತದೆ. ಅವರು ಯಾವುದಾದರೂ ಒಂದು ಗುರಿಯನ್ನಿಟ್ಟುಕೊಂಡು ಅದರತ್ತ ಗಮನವಹಿಸಿದ್ದರೂ ಅವರು ಮೊದಲು ಧರ್ಮದಿಂದಲೇ ಪ್ರಾರಂಭಿಸಿ ತಮ್ಮ ಗುರಿಯನ್ನು ಸಾಧಿಸಿಕೊಳ್ಳಬೇಕು. ಏಕೆಂದರೆ ಗುರಿಯೆಂಬುದು ಆನುಷಂಗಿತವಾಗಿದ್ದು ಅದು ಸ್ವರ್ಗದ ಅಮೃತವೇ ಆಗಿರುತ್ತದೆ27. ಮುಖ್ಯವಾದುದೆಂದರೆ ಒಳ್ಳೆಯ ಕೃತ್ಯಗಳನ್ನು ಸತತವಾಗಿ ಬಿಡದೆ ಮಾಡುತ್ತಿರಬೇಕು. ಅವು ಸಹಜವಾಗಿಯೇ ಇಂಗಿತವಾದ ಫಲದತ್ತ ನಮ್ಮನ್ನೊದಗಿಸುತ್ತದೆ. ಧರ್ಮದ ಕಾರ್ಯಸಾಧನೆಯ ಬಗ್ಗೆ ನಮಗೆ ಸಂದೇಹವಿರಬಾರದು.

ಧರ್ಮ ಜಿಜ್ಞಾಸೆಯಲ್ಲಿ ಧರ್ಮದ ಬಗ್ಗೆ ಇರುವ ಗಮನಿಸಬೇಕಾದ ವಿಶೇಷಾಂಶವೆಂದರೆ ಒಂದು ಧರ್ಮ ಇನ್ನೊಂದರ ವಿರುದ್ಧವಾದರೆ ಅದು ಧರ್ಮವೇ ಅಲ್ಲ. ಅದು ಕುಮಾರ್ಗ. ಯಾವುದು ಮತ್ತೊಂದನ್ನು ವಿರೋಧಿಸುವುದಿಲ್ಲವೋ ಅದೇ ಧರ್ಮವು:-

ಧರ್ಮಂ ಯೋ ಬಾಧತೇ ಧರ್ಮೋ ನಸ ಧರ್ಮಃ ಕುವರ್ತ್ಮ ತತ್ ।
ಅವಿರೋಧಾತ್ತು ಯೋ ಧರ್ಮಃ ಸ ಧರ್ಮಃ ಸತ್ಯ ವಿಕ್ರಮ ॥ [28]

ಲೋಮಶ ಮಹರ್ಷಿಯು ಯುಧಿಷ್ಠಿರನೊಡನೆ ಸಂವಾದದಲ್ಲಿ ಉಶೀನರ ರಾಜನಾದ ಶಿಬಿಯ ಬಗ್ಗೆ ಪ್ರಸ್ತಾಪಿಸುತ್ತಾನೆ. ಶಿಬಿಗೆ ಪಾರಿವಾಳ (ಅಗ್ನಿಯ ರೂಪಾಂತರ) ಹದ್ದಿನಿಂದ ರಕ್ಷಣೆಗೆ ಯಾಚಿಸಿತು (ಇಂದ್ರನ ರೂಪಾಂತರ). ದೇವತೆಗಳು ರಾಜನ ಧರ್ಮ ಬುದ್ಧಿಯನ್ನು ಪರೀಕ್ಷಿಸಲೋಸುಗ. ರಾಜನು ಪಾರಿವಾಳವನ್ನು ರಕ್ಷಿಸಿದ್ದರಿಂದ ಧರ್ಮವೆಂದೂ ಭಾವಿಸಿದ್ದರೂ, ಪ್ರಕೃತಿಯೇ ತನಗೆ ಆಹಾರವನ್ನು ನೀಡಿದ್ದರಿಂದ ಪಾರಿವಾಳದ ರೂಪದಲ್ಲಿ ಅದು ತನಗೆ ದಕ್ಕದೇ ಮಾಡಿದ್ದರಿಂದ ಅಧರ್ಮವನ್ನು ರಾಜ ಮಾಡಿದನೆಂದು,

ಶರಣಾಗತರಕ್ಷಣ ಧರ್ಮವೆಂದರೆ ಅದು ಒಂದು ಧರ್ಮ ಮತ್ತೊಂದು ಧರ್ಮಕ್ಕೆ ಅಡ್ಡ ಬಂದಂತಾಗುತ್ತದೆ. ತನಗೆ ಪ್ರಕೃತಿದತ್ತವಾದ ಆಹಾರವನ್ನು ಕಸಿದುಕೊಂಡಂತಾಗುತ್ತದೆ.

ಇಂತಹ ಸಂದರ್ಭಗಳಲ್ಲಿ ಧರ್ಮ ಸರಿಪಡಿಸಲಾಗದಂತಾಗುತ್ತದೆ. ಆದ್ದರಿಂದಲೇ ಹೇಳಿರುವುದು ಹಾವಿನ ಹೆಜ್ಜೆ ಗುರುತಿಸುವುದು ಎಷ್ಟು ಕಷ್ಟವೋ ಧರ್ಮವನ್ನು ಅರ್ಥೈಸುವುದು ಅಷ್ಟೇ ಕಷ್ಟ ಎಂದು. ಅಹೇರಿವ ಹಿ ಧರ್ಮಸ್ಯ ಪದಂ ದುಃಖಂ ಗವೇಷಿತುಂ[30]. ಈ ಅಂಶವೇ ಮೇಧಾವಿಗಳಿಗೆ ಸತ್ಯವೇ ಧರ್ಮದ ಅತ್ಯುನ್ನತ ಶಿಖರವೆಂದೂ ಅದರಿಂದ ಸ್ವಲ್ಪವೂ ಬೇರೆಯಾಗುವುದು ವಿಹಿತವಲ್ಲವೆಂದೂ'' ಸತ್ಯವೆಂದರೆ ಯಾವುದು ಎಲ್ಲವನ್ನೂ ಒಳ್ಳೆಯದಾಗಿ ಮಾಡುವುದೋ ಅದನ್ನು ಹೊರತುಪಡಿಸಿ ಎಲ್ಲವೂ ಅಸತ್ಯವೋ ಅದು'', ನ ಸತ್ಯಂ ಕೇವಲಂ ಸತ್ಯಂ ಅನೃತಂ । ತಥಾನೃತಂ ಹಿತಂ ಯತ್ಸರ್ವಲೋಕಸ್ಯ ತದೃತಂ ಶೇಷಂ ಅನ್ಯಥಾ[31].

ಸತ್ಯವು ತನ್ನಷ್ಟಕ್ಕೆ ತಾನೇ ಸತ್ಯವಲ್ಲ. ಸುಳ್ಳೂ ಸುಳ್ಳಲ್ಲ. ಯಾವುದು ಎಲ್ಲರಿಗೂ ಒಳ್ಳೆಯದನ್ನು ಮಾಡುವುದೋ ಅದೇ ಸತ್ಯ. ಮಿಕ್ಕೆಲ್ಲವೂ ಬೇರೆಯೇ ಸರಿ. ಕೇವಲ ಧರ್ಮದ ಬಗ್ಗೆ ಓದುವುದರಿಂದ ಅದನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. ನ ಧರ್ಮಃ ಪರಿಪಾಠೇನ ಶಕ್ಯೋ ಭಾರತ ವೇದಿತುಂ [32]. ಅದನ್ನು ಆಚರಣೆಗೆ ತರಬೇಕು. ಅದೇ ಸಮಾಜವನ್ನು ಹಿಡಿದಿಡುವುದು. ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ ॥ ಯಾರು ಇದರಿಂದ ಉತ್ತೇಜಿತರಾಗಿಲ್ಲವೋ ಅವರೇ ಧಾನ್ಯದಲ್ಲಿ ಮಾಟಕಿನಂತಿರುವವರು ರೆಕ್ಕೆಯಿರುವ ಪಕ್ಷಿಗಳಲ್ಲಿ ಬಿಳಿ ಇರುವೆಗಳಂತಿರುವವರು.

ಪುಲಾಕಾ ಇವ ಧಾನ್ಯೇಷು ಪುತ್ರಿಕಾ ಇವ ಪಕ್ಷಿಷು ।
ತದ್ವಿಧಸ್ತೇ ಮನುಷ್ಯಾಣಾಂ ಯೇಷಾಂ ಧರ್ಮೋನ ಕಾರಣಂ ॥[33]

ಧರ್ಮಾಚರಣೆಯಲ್ಲಿ ಸಹಚರರಿರಬೇಕಾಗಿಲ್ಲ. ಒಬ್ಬಂಟಿಗರಾಗಿಯೇ ಅದರೊಡನಿರಬಹುದು – ಏಕ ಏವ ಚರೇದ್ ಧರ್ಮಂ, ನಾಸ್ತಿ ಧರ್ಮೇ ಸಹಾಯತಾ[34]. ಒಬ್ಬನ ಆಯುಸ್ಸಿರುವ ವರೆಗೂ ಧರ್ಮವನ್ನು ಅನುಸರಿಸಬೇಕು.

ಪ್ರಧಾನವಾಗಿ ಧರ್ಮ ಎರಡು ರೀತಿಯಾದುದು – ಪ್ರವೃತ್ತಿ ಲಕ್ಷಣ ಹಾಗೂ ನಿವೃತ್ತಿ ಲಕ್ಷಣ ಎಂದು[35]. ವಿಹಿತವಾದುದು, ನಿಷಿದ್ಧವಾದುದು, ಮಾಡಬೇಕಾದುದು, ಮಾಡಬಾರದ್ದು, ಅದರಲ್ಲಿ ಮತ್ತೆ ಪಾತ್ರವು ವ್ಯತ್ಯಸ್ತವಾಗುತ್ತದೆ ಏಕೆಂದರೆ ಸಂದರ್ಭಕ್ಕನುಗುಣವಾಗಿ ಅದು ಮಾರ್ಪಾಡಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಅಧರ್ಮವೇ ಧರ್ಮವಾಗಬಹುದು. ಕಳ್ಳತನ, ಸುಳ್ಳು ಹಾಗೂ ಹಿಂಸೆ ಯಾವುದು ಸಾಮಾನ್ಯವಾಗಿ ಧಿಕ್ಕರಿಸಲ್ಪಟ್ಟಿದೆಯೋ ಅದೇ ಧರ್ಮವಾಗೂ ಪರಿಣಾಮ ಹೊಂದಬಹುದು. ಹೀಗೆಂದರೆ ಕೆಲವು ವೇಳೆ ಅಮಾಯಕವಾದ ಮನುಷ್ಯರು ಆಪತ್ತಿಗೀಡಾದಾಗ, ಇಂತಹ ವಿಪರೀತ ಪರಿಸ್ಥಿತಿಗಳಲ್ಲೇ ವಿಶ್ವಾಮಿತ್ರರಿಂದ ನಾಯಿಯ ಮಾಂಸ ತಿನ್ನಲ್ಪಟ್ಟಿದ್ದು,

ಮಹಾತ್ಮಾಗಾಂಧೀಜಿಯಂತಹ ಅಹಿಂಸಾ ಸುಧಾರಕರೂ ಸಹ ಮಾನಸಿಕ ಯಾತನೆಯಿಂದ ಪಾರಾಗಲು ಹಸುವನ್ನು ಸಾಯಿಸಿದ್ದು ಅಥವಾ ಯುಧಿಷ್ಠಿರನು ರಣರಂಗದಲ್ಲಿ ದ್ರೋಣರಿದ್ದಾಗ ಅಶ್ವತ್ಥಾಮ ಹತನಾದನೆಂದು ಹೇಳಲ್ಪಟ್ಟಿದ್ದು. ಇಂತಹ ಧರ್ಮವು ಸಾಮಾನ್ಯವಾದ ಪರಿಸ್ಥಿತಿಗಳಲ್ಲಿ ಅಧರ್ಮವೇ ಆಗಿದ್ದರೂ ಸಹ, ವ್ಯಾಸರು ಇದನ್ನು ಅವಾಸ್ತಿಕ ಎಂದು ಕರೆದಿದ್ದಾರೆ.

ಅದಾನಂ ಅನೃತಂ ಹಿಂಸಾ ಧರ್ಮೋಹ್ಯಾವಾಸ್ತಿಕ ಸ್ಮೃತಃ [36].

ವ್ಯಾಖ್ಯಾನಕಾರನಾದ ನೀಲಕಂಠನು ಅವಾಸ್ತಿಕ ಶಬ್ದವನ್ನು ''ಅವಸ್ಥಾವಿಶೇಷೇಭವಃ'', ಸಂದರ್ಭಕ್ಕೆ ಅನುಗುಣವಾದದ್ದು, ಪ್ರಾಣತ್ಯಾಗಾದೌ ಅಧರ್ಮಸ್ಯಾಪಿ ಶ್ರೇಯಾದೇಃ ಧರ್ಮತ್ವಾತ್, ಪ್ರಾಣಕ್ಕೇ ಸಂಚಕಾರವಿರುವಾಗ ಅಧರ್ಮದಂತಹ ನಿಷಿದ್ಧವಾದುದೂ ಸಹ ಧರ್ಮವೇ ಆಗುತ್ತದೆ. ಕಳ್ಳತನದಂತಹ ಕ್ರಿಯೆಗಳೂ ಸಹ.

ಮತ್ತೆ ಧರ್ಮವನ್ನು ಕರ್ತವ್ಯಗಳು ಹಾಗೂ ಗುಣಯುಕ್ತ ಕ್ರಿಯೆಗಳು ಎಂದು ವಿಭಜಿಸಲ್ಪಟ್ಟು, ಯಾವುದು ಎಲ್ಲಾ ಗುಣವಂತರಿಂದಲೂ ಅನುಸರಿಸಲ್ಪಡಬೇಕೋ, ಕೆಲವು ಕುಟುಂಬಗಳು ಮಾಡಬೇಕಾದ ಕರ್ತವ್ಯಗಳಿರುವುದೋ ಅದೇ ಕುಲಧರ್ಮಗಳು. ಇದು ಯಾರು ನಿಯಮ ಬಾಹಿರವಾದ ಕಾರ್ಯ ಮಾಡಲು ಉದ್ಯುಕ್ತರಾಗುವರೋ ಅಂತಹವರಿಗೆ ಕಡಿವಾಣ ಹಾಕುತ್ತದೆ. ಅವರು ತಮ್ಮ ಕುಟುಂಬದ ಮೇಲಾಗಲೀ, ಮನೆತನದ ಮೇಲಾಗಲಿ, ಗುಂಪಿನ ಮೇಲಾಗಲೀ, ಸಮುದಾಯದ ಮೇಲಾಗಲಿ ಹೆಗ್ಗಳಿಕೆ ಪಡೆದಿರುತ್ತಾರೆ. ತಮ್ಮ ಕುಟುಂಬದವರೊಡನೆ ಬಂದಂತಹ ಕೆಲವು ರೀತಿ ನೀತಿಗಳನ್ನು ಪಾಲಿಸುತ್ತಿದ್ದರು.[31] ಕುತೂಹಲಕಾರಿಯಾಗಿ ಈ ಸಮುದಾಯದ ಬಾಳ್ವೆಯೇ ಬಾಲಿಯ ಇಂಡೋನೇಶಿಯಾದಲ್ಲಿ ಇಸ್ಲಾಂ ಧರ್ಮವು ಎಲ್ಲೆಡೆ ಹರಡಲು ಕಾರಣವಾಯಿತು. ಒಬ್ಬರು ಅಥವಾ ಇಬ್ಬರು ಮಾತ್ರ ಮತಾಂತರವನ್ನು ಸಹಿಸಿದರು. ಎಷ್ಟೇ ಅವರು ಆದಕ್ಕಾಗಿದ್ದರೂ ಸಹ ದೇಶೋಚ್ಚಾಟನೆ ಮಾಡುವರೆಂಬ ಭಯದಿಂದ ಅವರು ತಮ್ಮ ಜೀವನ ಹೇಗೋ ಕಷ್ಟದಿಂದ ಸಾಗಿಸುತ್ತಿದ್ದರು.

ನಮ್ಮ ಪವಿತ್ರಗ್ರಂಥಗಳು ಧರ್ಮವನ್ನು ಕಡ್ಡಾಯವಾಗಿ ಪರಿಪಾಲಿಸಬೇಕೆಂದು ಆಪತ್ಕಾಲದಲ್ಲೂ ಬಿಡಬಾರದೆಂದೂ ಸಾರುತ್ತದೆ. ಎಲ್ಲರೊಂದಿಗೂ ಸಂಬಂಧ ಬೆಳೆಸುವಾಗಲೂ ಸಹ ಹಾಗೆಯೇ ಇರಬೇಕು. ಧರ್ಮಾಚರಣೆಗೆ ಬಾಹ್ಯ ಚಿಹ್ನೆಗಳು (ಕಾವಿ ಮತ್ತು ಜುಟ್ಟು) ಕಾರಣವಾಗುವುದಿಲ್ಲ.

ದುಃಖಿತೋಽಪಿ ಚರೇದ್ ಧರ್ಮಂ ಯತ್ರ ಕುತ್ರಾಶ್ರಮೇರತಃ ।
ಸಮಃ ಸರ್ವೇಷು ಭೂತೇಷು ನ ಲಿಂಗಂ ಧರ್ಮಕಾರಣಮ್ ॥ [38]

ಒಬ್ಬರು ಯೋಚಿಸಲೂ ಆಗದಂತಹದನ್ನೂ ಸಹ ಧರ್ಮವು ಸಾಧಿಸಿ ಕೊಡಬಹುದು. ಅಸಂಕಲ್ಪಮಚಿಂತ್ಯಂ ಚ ಫಲಂ ಧರ್ಮಾದ್ ಅವಾಪ್ಯತೇ. ಎಲ್ಲಾ ಸಂದರ್ಭಗಳಲ್ಲೂ

ಧರ್ಮವೇ ಕಾಪಾಡುವಂತಹದು. ಕೌಸಲ್ಯೆಯು ಈ ಧರ್ಮವನ್ನೇ ರಾಮನಿಗೆ 14 ವರ್ಷ ವನವಾಸಕ್ಕೆ ತೆರಳುವಾಗ ಬೋಧಿಸುತ್ತಾಳೆ :-

ಯಂಪಾಲಯಸಿ ಧರ್ಮಂ ತ್ವಂ ಪ್ರೀತ್ಯಾಚ ನಿಯಮೇನ ಚ ।
ಸ ವೈ ರಾಘವಶಾರ್ದೂಲ ಧರ್ಮಸ್ತ್ವಾಮಭಿ ರಕ್ಷತು ॥ [39]

ರಘುವಂಶರಾಜರಲ್ಲಿ ಶ್ರೇಷ್ಠರಂತಿರುವವನೇ, ಯಾವ ಧರ್ಮವನ್ನು ನೀನು ಸಂತೋಷದಿಂದ ನಿರಂತರವಾಗಿ ಅನುಸರಿಸುತ್ತಿರುವೆಯೋ ಅದೇ ನಿನ್ನನ್ನು ಕಾಪಾಡಲಿ.

---

## ಆಕರ ಗ್ರಂಥಗಳು


1) ತೈತ್ತಿರೀಯೋಪನಿಷದ್.1.11 2) ಅದೇ 3) ಮನುಸ್ಮೃತಿ.8.15 4) ಮಹಾಭಾರತ. ಕರ್ಣಪರ್ವ.69.58.ರಾಮಾಯಣ. ಧರ್ಮಾದ್ ಧರ್ಮಮಿತ್ಯಾಹುಃ ಧರ್ಮೇಣ ವಿಧೃತಾಃ ಪ್ರಜಾಃ. ಉತ್ತರಕಾಂಡ.59.7-8 5) ಹಿತೋಪದೇಶ.ಕಥಾಮುಖ.25 6) ಮನುಸ್ಮೃತಿ.6.9. 7) ಹಿತೋಪದೇಶ.1.8. 8) ಭಾಗವತಪುರಾಣ.11.17.21 9) ಮನು.10.03 10) ಅದೇ.2.12. 11) ಮಹಾಭಾರತ ವನಪರ್ವ 213.30. 12) ಅದೇ.ಅನುಶಾಸನಪರ್ವ.142.30 13) ಯೋಗಸೂತ್ರ.4.100. 14) ದಿಲ್ಲಿಯ ತೇತ್ರಾ ಶಿಲಾಶಾಸನ.ನಂ.7.12ನೇ ಸಾಲು 15) ರಾಮಾಯಣ.5.1.106. 16) 3.35 17) ಅಭಿಜ್ಞಾನ ಶಾಕುಂತಲ.4 18) ಹಿತೋಪದೇಶ.1.66. 19) ಮಹಾಭಾರತ. ಶಾಂತಿಪರ್ವ.193.25 20) ಅದೇ.ಅನುಶಾಸನ ಪರ್ವ.104.69. 21) ಅದೇ.104.75 22) ಅದೇ.104.82.ಪರ್ವ.104.69. 21) ಅದೇ.104.75 22) ಅದೇ.104.82. 23) ಅದೇ. ಅನುಶಾಸನಪರ್ವ.104.48 24) ಅದೇ,ಶಾಂತಿಪರ್ವ.287.35. 25) ಅದೇ.ವನಪರ್ವ 31.6 26) ಅದೇ.31.38 27) ಅದೇ.ನಹಿ ಧರ್ಮಾದತ್ಯೈತ್ಯರ್ಥಃ ಸ್ವರ್ಗಲೋಕಾದಿವಾಮೃತಂ ಉದ್ಯೋಗಪರ್ವ.37.48 28) ಅದೇ.131.11 29) ಅದೇ.131ನೇ ಅಧ್ಯಾಯ 30) ಅದೇ.ಶಾಂತಿಪರ್ವ.132.20 31) ಭಾರತ ಮಂಜರೀ.ಶಾಂತಿಪರ್ವ.402 32) ಮಹಾಭಾರತ.ಶಾಂತಿಪರ್ವ.206.3. 33) ಅದೇ.181.7 34) ಅದೇ.193.32 35) ಅದೇ.241.6 36) ಅದೇ.36.11 37) ಅದೇ.ವನಪರ್ವ.243.2. 38) ಹಿತೋಪದೇಶ.1.91 39) ರಾಮಾಯಣ.2.25.3.

# 4. ದಾನ

ಸಂಸ್ಕೃತ ಸಾಹಿತ್ಯದಲ್ಲಿ ದಾನಕ್ಕೆ ವಿಶೇಷವಾದ ಸ್ಥಾನ ಕೊಡಲಾಗಿದೆ. ಇದರ ಹಿನ್ನಲೆಯೆಂದರೆ ಒಬ್ಬರ ಸಂಪತ್ತನ್ನು ಬೇರೆಯವರಲ್ಲಿ ಹಂಚಬೇಕು. ಯಾರಿಗೆ ಅದರ ಅವಶ್ಯಕತೆಯಿದೆಯೋ, ಯಾರು ಅದರ ಬಯಕೆಯಲ್ಲಿರುವರೋ ಅವರಿಗೆ ಹಣ ಮತ್ತು ಆದಾಯ ಪ್ರಕೃತಿಯಿಂದ ಎಲ್ಲರಿಗೂ ಸೇರಿದ್ದು. ತಮ್ಮ ಆದಾಯವನ್ನು ಒಂದೆಡೆ ಇರಿಸಿ ಬೇರೆಯವರಲ್ಲಿ ಅದನ್ನು ಹಂಚುವುದರಲ್ಲಿ ಯಾವ ಒತ್ತಾಯವನ್ನೂ ಹೇರಿಲ್ಲ. ಅದು ಕೇವಲ ಅಂತರಿಕ ತುಡಿತದಿಂದ ಮಾತ್ರವೇ ಸಾಧ್ಯವಾಗಿರುತ್ತದೆ ಮತ್ತು ಅದು ಸ್ವಾರ್ಥರಹಿತವಾಗಿಯೂ ಇರಲಾರದು. ಒಬ್ಬ ದಾನಿ ತನ್ನ ಹಣ ಹಂಚುವಾಗ ತನಗೆ ಅಥವಾ ತನ್ನ ಮನೆಯವರಿಗೆ ಒಳ್ಳೆಯದಾಗಲೆಂಬ ಭಾವನೆಯಿಂದಲೇ ನೀಡುತ್ತಿರಬಹುದು.

ದಾನವನ್ನು ಈ ರೀತಿ ಉಲ್ಲಿಖಿಸಿದ್ದಾರೆ : ಪರಾನುಗ್ರಹಬುಧ್ಯಾ ಸ್ವವಿತ್ತಪರಿತ್ಯಾಗೋ ದಾನಂ[1] ಮತ್ತು ಅನುಗ್ರಹಾರ್ಥಂ ಸ್ವಸ್ಯಾತಿಸರ್ಗೋ ದಾನಂ[2]. ಬೇರೆಯವರ ಸಹಾಯಕ್ಕಾಗಿಯೇ ತನ್ನ ಹಣವನ್ನು ಹಂಚುವುದು.

ನಮ್ಮ ಪರಂಪರೆಯಲ್ಲಿ ದಾನವು ಕೊಡುವಾಗ ಕೊಡುವವರಿಗೆ ಮೇಲರಿಮೆ ತೆಗೆದುಕೊಳ್ಳುವವರಿಗೆ ಕೀಳರಿಮೆ ಉಂಟಾಗದಿರುವಂತೆ ಆಗಲೆಂದು ಎಚ್ಚರಿಸಿದ್ದಾರೆ. ಅದರಿಂದ ಅಹಂಕಾರವುಂಟಾಗಿ ಕೊಡುವ ಉತ್ತಮ ಗುಣವು ತನ್ನ ಉತ್ತಮತೆಯನ್ನು ಕಳೆದುಕೊಳ್ಳದಿರಲಿ ಎಂಬುದೂ ಭಾವನೆಯಿದೆ. ಈ ಅಂಶವನ್ನು ತೈತ್ತಿರೀಯ ಉಪನಿಷತ್ತಿನಲ್ಲಿ ಗುರುವು ಶಿಷ್ಯನಿಗೆ ಬೋಧಿಸುವಾಗ ತನ್ನ ಗುರುಕುಲವಾಸ ಮುಗಿದು ಮನೆಗೆ ಹಿಂದಿರುಗುವಾಗ ಬರುತ್ತದೆ. ಗುರುನುಡಿಯುತ್ತಾನೆ – ಶ್ರದ್ಧಯಾ ದೇಯಂ, ಅಶ್ರದ್ಧಯಾ ಆದೇಯಂ, ಶ್ರಿಯಾದೇಯಂ, ಹ್ರಿಯಾ ದೇಯಂ, ಭಿಯಾದೇಯಂ, ಗೌರವದಿಂದಕೊಡು, ಅಗೌರವದಿಂದ ಕೊಡಬೇಡ. ಧಾರಾಳವಾಗಿ ಕೊಡು, ವಿನಯದಿಂದ ಕೊಡು. ಭಯದಿಂದ ಕೊಡು.

ದಾನವಿಭಾಗದ ಹಿನ್ನಲೆಯೂ ಇದಾಗಿದೆ. ಭಗವದ್ಗೀತೆಯ ಪ್ರಕಾರ ಅದು[3] ಮೂರು ವಿಧವಾಗಿದೆ – ಸಾತ್ವಿಕ, ರಾಜಸ ಮತ್ತು ತಾಮಸ. ಸಾತ್ವಿಕವು ಕರ್ತವ್ಯ ದೃಷ್ಟಿಯಿಂದ ಕೊಡುವಂತಹದ್ದು ಹಾಗೂ ಸತ್ಪಾತ್ರರಿಗೆ ಸಕಾಲದಲ್ಲಿ ಸ್ವದ್ವಸ್ತುವನ್ನು ಕೊಟ್ಟು ಅದನ್ನು ಸ್ಮರಿಸದಿರುವುದು:-

ದಾತವ್ಯಮಿತಿಯದ್ದಾನಂ ದೀಯತೇऽನುಪಕಾರಿಣೇ ।
ದೇಶೇ ಕಾಲೇಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ ॥[4]

ರಾಜಸವೆಂದರೆ ಪ್ರತ್ಯುಪಕಾರ ಬುದ್ಧಿಯಿಂದ ಅಥವಾ ಪ್ರಶಸ್ತಿಗೋಸ್ಕರ ಸಂಪೂರ್ಣ ಇಚ್ಛೆಯಿಲ್ಲದೆ ಕೊಡುವಂತಹದು :-

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯವಾ ಪುನಃ ।
ದೀಯತೇಚ ಪರಿಕ್ಲಿಷ್ಟಂ ತದ್ ರಾಜಸಮಿತಿ ಸ್ಮೃತಂ ॥ [5]

ತಾಮಸದಾನವೆಂದರೆ ಅಪಾತ್ರರಿಗೆ ಅಕಾಲದಲ್ಲಿ ಅಕಾಲವಸ್ತುವನ್ನು ಅಸಾಂದಾರ್ಭಿಕವಾಗಿ ದರ್ಪದಿಂದ ನೀಡುವುದು.

ಆದೇಶಕಾಲೇ ಯದ್ದಾನಂ ಅಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತ್ಯ ಅವಜ್ಞಾತಂ ತತ್ತಾಮಸಮುದಾಹೃತಂ ॥ [6]

ಈ ಮೇಲೆ ವರ್ಣಿಸಿರುವುದಲ್ಲದೆ ಮತ್ತೊಂದು ರೀತಿಯ ದಾನದ ವಿಭಜನೆಯೂ ಸಹ ವಿಭಿನ್ನ ಕಾರಣಗಳಿಂದಲೂ ಇದೆ. ಸ್ಕಾಂದಪುರಾಣ[7] ಅದನ್ನು ಆರು ರೀತಿ ವಿಂಗಡಿಸುತ್ತದೆ. ಧರ್ಮದಾನ, ಅರ್ಥದಾನ, ಕಾಮದಾನ, ವ್ರೀಡಾದಾನ, ಹರ್ಷದಾನ ಮತ್ತು ಭಯದಾನ ಎಂದು. ಧರ್ಮದಾನವು ಸತ್ಪಾತ್ರರಿಗೆ ನಿಯಮದಂತೆ ಕರ್ತವ್ಯ ದೃಷ್ಟಿಯಿಂದ ನೀಡುವುದು. ಧರ್ಮ ಬುಧ್ಯಾ ಎಂದರೆ ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಎಂಥರ್ಥ – ಅನಪೇಕ್ಷ್ಯ ಪ್ರಯೋಜನಂ – ಪ್ರಯೋಜನವನ್ನು ಅಪೇಕ್ಷಿಸದೆ. ಅರ್ಥದಾನವೆಂದರೆ ಹಣವಂತರಿಂದ ದುರಾಸೆಯಿಂದ ಹಣವನ್ನು ಸುಲಿಗೆ ಮಾಡುವುದು, ಕಾಮದಾನವೆಂದರೆ ಅಪಾತ್ರರಿಗೆ ಯಾವುದೇ ನಿರ್ದಿಷ್ಟ ಕಾರಣದಿಂದ ದಾನ ಮಾಡುವುದು, ವ್ರೀಡಾದಾನವೆಂದರೆ ತಮ್ಮ ಮರ್ಯಾದೆ ಉಳಿಸಿಕೊಳ್ಳಲು ಎಲ್ಲರ ಮುಂದೆ ಮಾಡಿದ ವಾಗ್ದಾನ ಉಳಿಸಿಕೊಳ್ಳಲು ಕೊಡುವ ದಾನ, ಹರ್ಷದಾನ ಎಂದರೆ ತಮಗಾದ ಸಂತಸವನ್ನು ಹಂಚಿಕೊಳ್ಳಲು ಸಂತೋಷ ವಸ್ತುವನ್ನು ನೋಡಿದಾಗ ಕೊಡುವ ಕೊಡಿಗೆ, ಭಯದಾನವೆಂದರೆ ನಿಂದನೆಯಿಂದ ತಪ್ಪಿಸಿಕೊಳ್ಳಲು, ಭಯ ಅಥವಾ ಹಿಂಸೆಯಿಂದ ತಪ್ಪಿಸಿಕೊಳ್ಳಲು ನೀಡುವಂತಹ ದಾನ, ಮತ್ತೊಂದು ಕಡೆ ಅದೇ ಪುರಾಣದಲ್ಲಿ ಮತ್ತೊಂದು ದಾನ ವರ್ಣಿತವಾಗಿದೆ. ಅದೇ ಕಾಮ್ಯದಾನ– ಸ್ವಇಚ್ಛೆಯಿಂದ ಕೊಡುವ ದಾನ – ಇಚ್ಛಾಸಂಸ್ಥಂ, ಸಂತಾನ ಪ್ರಾಪ್ತಿಗಾಗಿ, ಜಯ, ಧನಪ್ರಾಪ್ತಿ, ಹೆಂಡತಿ ಮುಂತಾದವು.

ಸತ್ಪಾತ್ರರಿಗೆ ವಿನಯದಿಂದ ತನಗೆ ಅದರಿಂದ ಒಳಿತಾಗಲೆಂಬ ಬಾವನೆಯಿಂದ ನೀಡುವಂತಹ ಆತ್ಮಾನುಗ್ರಹವಾಗಲೆಂದು ಕೊಡುವುದೇ ಶ್ರೇಷ್ಠವಾದ ದಾನ. ಈ ಮೂರು ಭಾಸನ ಸ್ವಪ್ನವಾಸವದತ್ತ ನಾಟಕದಲ್ಲಿ ಸನ್ಯಾಸಿನಿಯು ಮಗಧ ದೇಶದ ರಾಜಕುಮಾರಿಯಾದ ಪದ್ಮಾವತಿಯು ಮಹಾರಾಣಿಯ ವಾಸಸ್ಥಾನಕ್ಕೆ ಭೇಟಿಕೊಟ್ಟು ತಾನು ದಾನ ನೀಡಿ ತನ್ನ ವಯಕ್ತಿಕ ಒಳಿತನ್ನು ಬಯಸುವವಳೆಂದು ಹೇಳಲಾಗಿದೆ :–

ಆತ್ಮಾನುಗ್ರಹಂ ಇಚ್ಛತೀಹ ನೃಪಜಾ ಕಸ್ಯಾದ್ಯ ಕಿಂ ದೀಯತಾಮ್ [8].

ನಮ್ಮ ಪ್ರಾಚೀನ ಗ್ರಂಥಗಳು ದಾನವನ್ನು ಸಾರ್ವತ್ರಿಕವಾಗಿ ಹೇಳುವ ವಿಷಯವನ್ನು ನಿಷೇಧಿಸಿದೆ ನ ದಾನಂ ಪರಿಕೀರ್ತಯೇತ್. ಏಕೆಂದರೆ ಅದು ಅವರ ಪ್ರಸಿದ್ಧಿಯನ್ನು ಹಾಳು ಮಾಡುತ್ತದೆ. ಕೀರ್ತಿಃ ಹ್ರ್ಸ ಸತಿ ಕೀರ್ತನಾತ್.

ಎಲ್ಲ ದಾನಗಳಲ್ಲಿ ವಿದ್ಯಾದಾನವೇ ಶ್ರೇಷ್ಠವಾದುದು.

ಸರ್ವೇಭ್ಯೋಪಿಹಿ ದಾನೇಭ್ಯೋ ಬ್ರಹ್ಮದಾನಂ ವಿಶಿಷ್ಯತೇ

ಈ ದಾನವನ್ನು ನಿಃಸ್ವಾರ್ಥಮನೋಭಾವನೆಯಿಂದಲೇ ನೀಡಬೇಕು. ಯಾರು ಜೀವನೋಪಾಯಕ್ಕೋಸ್ಕರ ವಿದ್ಯೆಯನ್ನು ಮಾರಿಕೊಳ್ಳುವರೋ ಅವರು ವ್ಯಾಪಾರಿಗಳೇ ಸರಿ - ಯಸ್ಯಾಗಮಃ ಕೇವಲ ಜೀವಿಕಾಯೈ ತಂಜ್ಞಾನಪಣ್ಯಂ ವಣಿಜಂ ವದಂತಿ. ಅಗ್ನಿ ಪುರಾಣದ ಪ್ರಕಾರ ಯಾರು ವೇದ, ಸಂಗೀತ ಹಾಗೂ ನೃತ್ಯವನ್ನು ಬೋಧಿಸುವರೋ ಅವರು ಸ್ವರ್ಗಕ್ಕೆ ಅರ್ಹರಾಗುತ್ತಾರೆ. ಜ್ಞಾನದಾನವು ಕೇವಲ ಅಧ್ಯಾಪನದಿಂದ ಮಾತ್ರವಲ್ಲ ಅದು ಪುಸ್ತಕವನ್ನು ದಾನವಾಗಿ ಕೊಡುವುದೂ ಸಹ ಆಗಬಹುದು. ಆದರೆ ಆ ಪುಸ್ತಕವನ್ನು ತಾನೇ ಬರೆದಿರಬೇಕು:-

ಲಿಖಿತ್ವಾ ಪುಸ್ತಕಂ ದತ್ವಾ ಭುಕ್ತಿಮುಕ್ತಿಮವಾಪ್ನುಯಾತ್ ।
ವೇದಶಾಸ್ತ್ರಂನೃತ್ಯಗೀತಂ ಯೋಽಧ್ಯಾಪಯತಿ ನಾಕಭಾಕ್ ॥ [9]

ಪುಸ್ತಕ ದಾನ ಮಾಡಿದವನಿಗೆ ಸಂತಸ ಹಾಗೂ ಸ್ವರ್ಗ ಲಭಿಸುತ್ತದೆ. ಬರೀ ಉಪಕಾರವನ್ನು ತೀರಿಸುವುದು ಮಾತ್ರವಲ್ಲ, ಅದಕ್ಕಿಂತಲೂ ಅನೇಕ ಪಟ್ಟು ಹೆಚ್ಚಾಗಿ ಮಾಡಬೇಕು. ಸೂರ್ಯನು ನೀರನ್ನು ಗ್ರಹಿಸಿ ಸಾವಿರ ಪಟ್ಟು ನೀಡುತ್ತಾನೆ. ಸಹಸ್ರಗುಣಂ ಉತ್ಸ್ರಷ್ಟುಂ ಆದತ್ತೇ ಹಿ ರಸಂ ರವಿಃ [10]. ಇದನ್ನೇ ಕಾಳಿದಾಸ ಹೇಳಿರುವುದು, ಆದರೆ ಅದಕ್ಕಿಂತಲೂ ಬಹಳ ಹಿಂದೆಯೇ ವೇದವು ಹೇಳಿದೆ.

ಶತಹಸ್ತಸಮಾಹರ ಸಹಸ್ರಹಸ್ತ ಸಂಕಿರ [11]

ದಾನವು ಸ್ವಯಂಪ್ರೇರಿತವಾಗಿರಬೇಕು. ಎಷ್ಟು ಪ್ರೇರಿತವಾಗಬೇಕೆಂದರೆ ಕೇವಲ ದಾನ ಪಡೆಯುವವನ ಅಸತ್ಯ ಮಾತ್ರ ದ್ಯೋತವಾಗಬೇಕು ಅವನು ಅದನ್ನು ಹೇಳಲೂಬಾರದು :- ತಂಥಿಗಸ್ತು ಕಲಯನ್ನಪಿ ವಾಂಛಾಂ ಅರ್ಥಿವಾಗವಸರಂ ಸಹತೇಯಃ [12]

ಭಾರತೀಯರ ಮನದಾಳದಲ್ಲಿ ಜನ್ಮಾಂತರ ಗಾಢವಾಗಿ ನೆಲೆ ಮಾಡಿರುವುದರಿಂದ, ಈ ಜನ್ಮದಲ್ಲಿ ದಾನ ನೀಡುವವ "ಕೊಡುಕೊಡು" ಎಂದು ಬೇಡುವವನ ತನ್ನ ಹಿಂದಿನ ಜನ್ಮದಲ್ಲಿ ಬರಿಗಯ್ಯಲ್ಲಿ "ನನಗಿಲ್ಲ ನನಗಿಲ್ಲ" ಎಂದು ನುಡಿದಿರಬೇಕು. ಹಿಂದಿನ ಜನ್ಮದಲ್ಲಿ ನೀಡದಿದ್ದ ಪ್ರಾಯಶ್ಚಿತ್ತ ರೂಪವಾಗಿಯೇ ಈಗ ಬೇರೆಯವರ ಮುಂದೆ ಬೇಡುವಂತಾಗಿರಬೇಕು :-

ಅಕ್ಷರದ್ವಯಮಭ್ಯಸ್ತಂ ನಾಸ್ತಿ ನಾಸ್ತೀತಿಯತ್ಪುರಾ ।
ತದಿಹಂದೇಹಿ ದೇಹೀತಿ ವಿಪರೀತಮುಪಸ್ಥಿತಂ ॥[13]

ಇದು ಬೇಡುವವರನ್ನು ಹಿಂದೆ ಕಳಿಸುವವರಿಗೆ ಒಂದು ಮುನ್ನೆಚ್ಚರಿಕೆಯಂತಿದೆ. ಇದು ಪ್ರಾಯಶಃ ಮುಂದಿನ ಜನ್ಮದಲ್ಲಿ ಅವರೇ ಬೇಡುವಂತೆಯೂ ಮಾಡಬಹುದು. ಇದು ಅವರನ್ನು ಸನ್ಮಾರ್ಗಕ್ಕೆ ಒಯ್ದು ಬಡವರಿಗೆ ಹಾಗೂ ಸಹಾಯ ಬಯಸುವವರಿಗೆ ಸಹಾಯ

ಹಸ್ತ ನೀಡುವಂತೆ ಮಾಡಬೇಕು. ದಾನ ಕೊಡುವುದು ಭಾರತೀಯರಿಗೆ ಕೇವಲ ಸ್ವಂತ ಸಿದ್ಧಾಂತ ಮಾತ್ರವಲ್ಲದೆ. ಸಮಾಜದ ದುಃಖ ನಿವಾರಣೆಯೂ ಸಹ ಏಕೆಂದರೆ ಅದು ಬಡವರಿಗೆ ಒಂದು ನಗುವನ್ನೋ, ತಮ್ಮನ್ನು ತಾವೇ ಕೀಳರಿಮೆಯಿಂದ ಹೊರಬರಲು ಸಾಧನವಾಗಿಯೋ ಅದರಿಂದ ತಾತ್ವಿಕ ಉನ್ನತಿ ಪ್ರಾಪ್ತಿಯೋ ಅಥವಾ ಹಿಂದೆ ಮಾಡಿದ್ದಕ್ಕೆ ಪ್ರತಿಫಲವನ್ನು ಅಪೇಕ್ಷಿಸುವಂತೆಯೋ ಮಾಡುತ್ತದೆ. ಮತ್ತಾವ ಕಾರಣವಿಲ್ಲದಿದ್ದರೂ ಈ ಕಾರಣಕ್ಕೇ ಆಗಿಯೂ ನಾವು ಬೇಡುವವರನ್ನು ಹಿಂದಕ್ಕಟ್ಟಬಾರದು.

ಯಾರಾದರೂ ದಾನಕೊಡುವುದಾಗಿ ವಾಗ್ದಾನ ಮಾಡಿದ್ದರೆ ಅವರು ಅದನ್ನು ತೀರಿಸಬೇಕು ಅದು ಎಷ್ಟೇ ಕಷ್ಟಕರವಾಗಿರಲಿ. ಅವನು ಅದರಿಂದ ಹಿಂದೆ ಸರಿಯಲು ಸಾಧ್ಯವೇ ಇಲ್ಲ. ಹಾಗೇನಾದರೂ ಆದರೆ ಅದು ಮಹಾಹಾನಿಯನ್ನುಂಟು ಮಾಡುವುದು.

ಅಗ್ನಿ ಪುರಾಣ ಹೇಳುತ್ತದೆ – ಯಾರಾದರೂ ದೇವರಿಗೆ, ಗುರುಗಳಿಗೆ ಪೋಷಕರಿಗೆ ವಾಗ್ದಾನ ಮಾಡಿ ಕೊಡದಿದ್ದರೆ ಅವರ ನೂರು ತಲೆಮಾರು ಹಾಳಾಗುತ್ತದೆ.

ಕುಲಾನಾಂತುಶತಂ ಹನ್ಯಾದ್ ಅಪ್ರಯಚ್ಛನ್ ಪ್ರತಿಶ್ರುತಮ್ ।
ದೇವಾನಾಂಚ ಗುರೂಣಾಂ ಚ ಮಾತಾ ಪಿತ್ರೋಸ್ತಥೈವ ಚ ॥ [14]

ದಾನಕೊಡುವುದು ತನ್ನಲ್ಲೇ ಒಳ್ಳೆಯದಲ್ಲ ಏಕೆಂದರೆ ಅದು ಸತ್ಪಾತ್ರರಿಗೆ ದಕ್ಕಬೇಕು. ಈ ಮಾತನ್ನು ನಮ್ಮ ಅರ್ಷೇಯ ಗ್ರಂಥಗಳು ಮತ್ತೆ ಮತ್ತೆ ಒತ್ತಿ ಹೇಳುತ್ತವೆ. ಪಾತ್ರ ಪ್ರತಿಗತಾವಿದ್ಯಾ ಪಾತ್ರ ಪ್ರತಿಗತಂ ಧನಂ, ಜ್ಞಾನ ಸತ್ಪಾತ್ರನಿಗೆ ಹಾಗೂ ಹಣವೂ ಸತ್ಪಾತ್ರನಿಗೆ. ದಾನವು ಸತ್ಪಾತ್ರನಲ್ಲದವನಿಗೆ ಕೊಟ್ಟರೆ ಫಲವೂ ಸಹ ಒಳ್ಳೆಯದಾಗಿರುವುದಿಲ್ಲ:-

ಕುಪಾತ್ರೇಷು ತಥಾ ದತ್ತಂ ದಾನಂ ಕುಫಲದಂಭವೇತ್. [15]

ದಾನ ಎಂಬುದು ಕೇವಲ ತಮ್ಮ ಹಣ ಕೊಡುವುದು ಮಾತ್ರವಲ್ಲ. ಹೆಂಡತಿ ಹಾಗೂ ಮಕ್ಕಳನ್ನು ಕಾಯ್ದು ತಮ್ಮ ಮಟ್ಟಿಗೆ ಏನನ್ನೂ ಇಟ್ಟುಕೊಳ್ಳದಿರುವುದು – ಯಾಚಕೇಭ್ಯೋ ದದಾತ್ಯರ್ಥಂ ಭಾರ್ಯಾಪುತ್ರಾದಿಕಂ ತ್ವಪಿ ಸಂಗೃಹ್ಣಾತಿ ಚ ಯತ್ ಕಿಂಚಿದ್ ದಾನಶೀಲಃ ಸ ಉಚ್ಯತೇ.[16]

ಭಾರತೀಯ ಪರಂಪರೆಯು ಅಂತಹ ಅನೇಕ ಶ್ರೇಷ್ಠ ದಾನಿಗಳನ್ನು ಹೆಸರಿಸುತ್ತದೆ. ದಧೀಚಿ, ಬಲಿ, ಕರ್ಣನೇ ಮೊದಲಾದವರು ಅವರ ದಾನ ಪಾತ್ರದಿಂದಲೇ ಅಜರಾಮರವಾಗಿದ್ದಾರೆ. ನೂರಾರು ಶತಕಗಳಿಂದ ಎಣಿಸಲಾರದಷ್ಟು ಜನರಿಂದ ಅವರು ಖ್ಯಾತನಾಮರಾಗಿದ್ದಾರೆ. ತನ್ನ ತಂದೆಯಿಂದ ತಿಳಿಯಪಡಿಸಿದ್ದರೂ ಕರ್ಣ ಇಂದ್ರನಿಂದ ಮೋಸ ಹೋಗುತ್ತಾನೆ ತನ್ನ ಕವಚಕುಂಡಲಗಳು ತನಗೇ ಕುತ್ತಾಗುವುದೆಂದು ಗೊತ್ತಿದ್ದೂ ಸಹ ದಾನಮಾಡುತ್ತಾನೆ. ಇದು ಅವನ ಶರೀರವನ್ನೇ ಕಿತ್ತುಕೊಡುವುದಾಗಿದ್ದರೂ ಸಹ ತನ್ನ ಮಾತನ್ನು ಉಳಿಸಿಕೊಳ್ಳಲು ದಾನಿಗೆ ನಿರಾಸೆಯಾಗಬಾರದೆಂದು ಮಾಡುವ ಕೃತ್ಯ ನಿಜಕ್ಕೂ

ಅಭಿನಂದನಾರ್ಹ. ಅವನು ತನಗೆ ಪ್ರಕೃತಿದತ್ತವಾಗಿ ಬಂದಿದ್ದ ಕವಚ ಕುಂಡಲಗಳನ್ನು ಆಪತ್ಕಾಲದಲ್ಲಿ ತನಗೆ ನೆರವಾಗುವುದೆಂದು ಭಾವಿಸಿ ಕೊಡದೆಯೂ ಇರಬಹುದಿತ್ತು. ಇಂತಹ ಬೇಡುವವರಿಗೆ ನಿರಾಕರಣೆ ಮಾಡಬಾರದೆಂಬ ಧ್ಯೇಯವೇ ಅವರನ್ನು ನಂಬಿಕೆಗೆ ದ್ರೋಹ ಬಗೆಯದವರನ್ನಾಗಿಸಿತು. ಹಾಗಿಲ್ಲದಿದ್ದರೆ ಬಲಿಯೂ ವಿಷ್ಣುವಿನಿಂದ ಮೋಸಗೊಳಿಸಲು ಆಗುತ್ತಿರಲಿಲ್ಲ. ವಿಷ್ಣು ವಾಮನಾವತಾರದಲ್ಲಿ ಬಂದು ಕೇವಲ ಮೂರು ಹೆಜ್ಜೆ ಸ್ಥಳ ಕೋರುವುದು. ಬಲಿಯು ನಂಬಿದ್ದರಿಂದಲೇ ಎರಡು ಹೆಜ್ಜೆಗಳಿಂದ ವಿಶ್ವವನ್ನೇ ವ್ಯಾಪಿಸಿ, ಮೂರನೆಯ ಹೆಜ್ಜೆಯನ್ನು ಅವನ ಮೇಲಿಟ್ಟು ಅವನನ್ನು ಪಾತಾಳಕ್ಕೆ ತಳ್ಳಿದ. ಸುಪ್ರಸಿದ್ಧವಾದ ದಧೀಚಿಯು ತನ್ನ ಮೂಳೆಗಳನ್ನು ದೇವತೆಗಳಿಗೆ ನೀಡಿ ಅದರಿಂದ ಅವರ ಶಿಲ್ಪಕಾರರು ವಜ್ರಾಯುಧ ತಯಾರಿಸಿ ಇಂದ್ರನು ವೃತ್ರ ಹಾಗೂ ಇತರ ರಕ್ಕಸರನ್ನು ಸಂಹರಿಸಿದ. ''ದಾನ'' ಎಂಬ ಪದವು ದಿಲೀಪನ ಆಸ್ಥಾನದಲ್ಲಿ ಕೊನೆಗೊಳ್ಳುತ್ತಿರಲೇ ಇಲ್ಲ. (ಮೂರು ರೀತಿಯ ಶಬ್ದಗಳು ಅವನ ಅರಮನೆಯಲ್ಲಿ ನಿಲ್ಲಲೇ ಇಲ್ಲ. ಮಂತ್ರಘೋಷ, ಬಿಲ್ಲಿನ ಝೇಂಕಾರ ಮತ್ತು ದಾನ. ತ್ರಯೋ ಘೋಷಾ ನಜೀರ್ಯಂತಿ ದಿಲೀಪಸ್ಯ ನಿವೇಶನೇ ಮಂತ್ರಘೋಷೋ ಧನುರ್ಘೋಷೇ ದೀಯತಾಮಿತಿವೈ ತ್ರಯಃ)

ನಮ್ಮ ಧಾರ್ಮಿಕ ಗ್ರಂಥಗಳಲ್ಲಿ ವಿಶ್ವಜಿತ್ ಯಾಗಕ್ಕೆ ದಾಖಲೆಯಿದೆ ಯಾವುದರ ಅಂಶವಾಗಿ ರಾಜನಾದವನು ತಾನು ಯುದ್ಧದಲ್ಲಿ ಗೆದ್ದ ಸರ್ವಸ್ವವನ್ನೂ ದಾನ ಮಾಡುತ್ತಿದ್ದ. ದಿಗ್ವಿಜಯದ ಕೊನೆಯಲ್ಲಿ ಅವನ ಬಳಿ ಬಿಡಿಗಾಸೂ ಇರುತ್ತಿರಲಿಲ್ಲ. ಕಾಳಿದಾಸ ತನ್ನ ರಘುವಂಶದಲ್ಲಿ[17] ನಿರೂಪಿಸಿರುವಂತೆ ದಿಗ್ವಿಜಯದ ಕುರುಹಾಗಿ ರಘು ಮಹಾರಾಜ ವಿಶ್ವಜಿದ್ಯಾಗ ಮಾಡಿ ಸರ್ವಸ್ವವನ್ನೂ ದಾನಕೊಟ್ಟಾಗ ಗುರುದಕ್ಷಿಣೆಗಾಗಿ ಹದಿನಾಲ್ಕು ಕೋಟಿ ಸುವರ್ಣನಾಣ್ಯ ಬೇಕೆಂದು ಕೌತ್ಸ ಅವನ ಬಳಿ ಬಂದ. ತನ್ನಲ್ಲಿ ಏನೂ ಇಲ್ಲದಿದ್ದರೂ ಸಹ ಗುರುದಕ್ಷಿಣೆಗಾಗಿ ಬಂದಂತಹ ಕೌತ್ಸನನ್ನು ಬರಿಗಯ್ಯಲ್ಲಿ ಹಿಂದಿರುಗಿಸುವುದು ಯುಕ್ತವಲ್ಲವೆಂದು ಭಾವಿಸಿ ರಘುವು ಕುಬೇರನ ಮೇಲೆ ದಂಡೆತ್ತಿ ಹೋಗಲು ನಿರ್ಧರಿಸಿದನು. ಆದರೆ ಕೂಡಲೇ ಬಂಗಾರದ ಸುರಿಮಳೆಯೇ ರಘುವಿನ ಬೊಕ್ಕಸದಲ್ಲಾಯಿತು. ಎಲ್ಲಾ ಹಣವನ್ನು ತೆಗೆದುಕೊಂಡು ಹೋಗುವಂತೆ ರಘು ಹೇಳಿದರೂ ಸಹ ಕೌತ್ಸ ಗುರುದಕ್ಷಿಣೆಯ ಹಣ ಮಾತ್ರವೇ ಸ್ವೀಕರಿಸಿದಾಗ ಆ ಉಳಿದ ಹಣದಿಂದ ಆಶ್ರಮವನ್ನು ನೋಡಿಕೊಳ್ಳಲಾಗುವುದೆಂದು ರಘು ನೀಡಿದ.

ಹಣಕ್ಕೆ ಮೂರು ಗತಿಗಳಿವೆ. ಮೊದಲನೆಯದು ದಾನ. ಎರಡನೆಯದು ಭೋಗ. ಮೂರನೆಯದು ನಾಶ. ಯಾರು ಬೇರೆಯವರಿಗೂ ನೀಡದೆ, ತಾವೂ ಉಪಯೋಗಿಸುವುದಿಲ್ಲವೋ ಅವರ ಹಣ ನಾಶವಾಗುತ್ತದೆ.

ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ ।
ಯೋನ ದದಾತಿ ನ ಭುಂಕ್ತೇ ತಸ್ಯ ತೃತೀಯಾಗತಿರ್ಭವತಿ ॥ [18]

ಈ ಮೇಲಿನ ಹೇಳಿಕೆಯಂತೆ ದಾನಕ್ಕೆ ಮಿಕ್ಕ ವಸ್ತುಗಳಿಗಿಂತಲೂ ಆದ್ಯತೆಯಿದೆ.

ಭಾರತದಲ್ಲಿ ಪರಂಪರೆಯಂತೆ ವಿದ್ಯಾಸ್ಥಾನಗಳು ವಯಕ್ತಿಕ ದಾನಗಳಿಂದ ನಡೆಯುತ್ತಿತ್ತು. ರಾಜ್ಯಕ್ಕೆ ಅದರ ಬಗ್ಗೆ ಯಾವುದೇ ಹಿಡಿತವಿರಲಿಲ್ಲ. ಗುರುಕುಲಗಳು, ಪಾಠಶಾಲೆಗಳು, ಚತುಷ್ಪಥಗಳು, ತೆರಿಗೆ ಸ್ಥಾನಗಳು ದಾನಗಳಿಂದಲೇ ನಡೆಯುತ್ತಿತ್ತು. ಹಿಂದೆಯೂ, ಇಂದೂ ಆಶ್ರಮಗಳ ಬಗ್ಗೆ ಇದೇ ನಿಜ. ಹಿಂದೆಯೂ ಇಂದೂ ಸಹ ಕಡಿಮೆ ಪ್ರಮಾಣದಲ್ಲಿ ವಿಶ್ರಾಮಗೃಹಗಳ ನಿರ್ಮಾಣ ಮಾಡುವುದು, ಯಾತ್ರಾರ್ಥಿಗಳಿಗೆ ಧರ್ಮಶಾಲೆಗಳನ್ನು ಕಟ್ಟಿಸುವುದು, ಬಡವರಿಗೆ ಊಟವನ್ನು ನೀಡುವುದು, ಬಾಯಾರಿದವರಿಗೆ ನೀರಿನ ವ್ಯವಸ್ಥೆ ಮಾಡುವುದು, ಬಡಬಗ್ಗರಿಗೆ ದಾನ ನೀಡುವುದು ನಡೆಯುತ್ತಲೇ ಇದೆ. ಪುಣ್ಯ ಸಂಚಯ ಎನ್ನುವುದು ಬಲ್ಲಿದರಿಗೆ ದಾನ ನೀಡುವುದರ ಬಗ್ಗೆ ಒಂದು ಪ್ರೇರಣೆಯನ್ನೊದಗಿಸಿತು.

ಭಾರತದಲ್ಲಿ ಉಪನಿಷತ್ತಿನ ಕಾಲದಲ್ಲೇ ಮುನಿಗಳು ಸಾಕಷ್ಟು ಆಹಾರ ಸಂಗ್ರಹಣೆಯತ್ತ ಒತ್ತುನೀಡಿದರು. ಅನ್ನಂ ಬಹುಕುರ್ವೀತ, ತದ್ ವ್ರತಂ ಎಂದು ತೈತ್ತಿರೀಯೋಪನಿಷತ್ತು ಸಾರುತ್ತದೆ (3.9). ಯಾರಿಗೂ ಅನ್ನವನ್ನು ಕೊಡುವುದಿಲ್ಲ ಎಂದು ಹೇಳಬಾರದೆಂದೂ ಅದೇ ಉಪನಿಷತ್ತೇ ಸಾರುತ್ತದೆ. ಮನೆಗೆ ಬಂದಂತಹವರಿಗೆ ಪರ್ಯಾಪ್ತವಾದಷ್ಟು ಊಟ ನೀಡಬೇಕು. ಇದನ್ನು ಒಂದು ವ್ರತದಂತೆ ಆಚರಿಸಬೇಕು. ನ ಕಂಚನ ವಸತೌ ಪ್ರತ್ಯಾಚಕ್ಷೀತ, ತದ್ ವ್ರತಂ (3.10)

ಋಗ್ವೇದದ ಒಂದು ಮಂತ್ರ ವರ್ಣಿಸುವಂತೆ ಯಾರು ಬೇರೆಯವರಿಗೆ ಊಟವನ್ನು ನೀಡುವುದಿಲ್ಲವೋ ಅವರಿಗೆ ಯಾವ ಪ್ರಯೋಜನವೂ ಒದಗುವುದಿಲ್ಲ. ನಿಜವಾದ ಅರ್ಥದಲ್ಲಿ ಅವನೇ ತನ್ನನ್ನು ಕೊಂದಂತೆ. ಅವನು ದೇವತೆಯನ್ನಾಗಲೀ, ಸ್ನೇಹಿತನನ್ನಾಗಲೀ ತೃಪ್ತಿಪಡಿಸುವುದಿಲ್ಲ. ಯಾರು ಒಬ್ಬಂಟಿಗರಾಗಿ ಊಟ ಮಾಡುವರೋ ಅವರು ತಮ್ಮ ಪಾಪವನ್ನೇ ತಿನ್ನುತ್ತಾರೆ.

ಮೋಘಮನ್ನಂ ವಿಂದತೇ ಅಪ್ರಚೇತಾ
ಸತ್ಯಂ ಬ್ರವೀಮಿ ವಧ ಇತ್ಸತಸ್ಯ ।
ನಾರ್ಯಮಣಂ ಪುಷ್ಯತಿ ನ ಸಖಾಯಂ
ಕೇವಲಾಘೋ ಭವತಿ ಕೇವಲಾದೀ ॥ [19]

ಈ ಮಂತ್ರಮಾತ್ರವಲ್ಲದೆ, ಈ ಸೂಕ್ತದಲ್ಲಿ ಬರುವ ಒಂಭತ್ತು ಮಂತ್ರಗಳು ದಾನದ ಪಾತ್ರವನ್ನು ವರ್ಣಿಸುತ್ತದೆ. ತಮ್ಮ ಅನ್ನವನ್ನು ಹಂಚಿ ತಿನ್ನುವಂತೆ ಆದೇಶವೀಯುತ್ತದೆ. ಏಕೆಂದರೆ ಅವರಿಗೆ ಊಟವಿರುವುದಿಲ್ಲ. 10.117.1 – ಹಸಿವೇ ಸಾವು. ಯಾರು ಯಾರಿಗೂ ನೀಡದೆ ಭುಂಜಿಸುವರೋ ಅದು ಅವರನ್ನು ಸಾವಿಗೆ ತಳ್ಳುತ್ತದೆ. ಯಾರು ಅನ್ನವನ್ನು ದಾನಮಾಡುವರೋ ಅವರ ಮನೆತನ ವೃದ್ಧಿಯಾಗುತ್ತದೆ. ಯಾರು ಅನ್ನವನ್ನು ನೀಡುವುದಿಲ್ಲವೋ ಅವನು ಯಾರೂ ತನಗೆ ಸಂತೋಷವನ್ನುಂಟು ಮಾಡುವರೆಂದು ಭಾವಿಸಲಾರ. ಅದೇ ಸೂಕ್ತದ ಮತ್ತೊಂದು ಮಂತ್ರವು "ಬೇರೆಯವರು ಕೊಡಲಿ"

ಎಂದೂ ಸಾರುತ್ತದೆ. ಎರಡು ತಲೆಗಳು ಒಂದು ಕ್ರಿಯೆಯನ್ನು ಸಾಧಿಸಲು ಸಮರ್ಥವಲ್ಲ, ಎರಡು ಹಸುಗಳು ಒಂದೇ ಸಮನಾದ ಹಾಲನ್ನು ಕೊಡುವುದಿಲ್ಲ. ಅವಳಿ ಮಕ್ಕಳಲ್ಲೂ ಒಂದೇಸಮನಾದ ಪರಾಕ್ರಮವಿರುವುದಿಲ್ಲ. ಒಂದೇ ಮನೆಯ ಎಲ್ಲರಲ್ಲೂ ಒಂದೇ ವಿಧವಾದ ದಾನ ಪ್ರವೃತ್ತಿಯಿರುವುದಿಲ್ಲ. ಯಾರಲ್ಲಾದರೂ ಆದ್ದರಿಂದಲೇ ಹೆಚ್ಚಿದ್ದರೆ ಅದನ್ನು ಬೇರೆಯವರಲ್ಲಿ ಹಂಚಬೇಕು. ಅದೇ ವಿಷಯವನ್ನೇ ಉದ್ದೇಶಿಸಿ ಅದೇ ಸೂಕ್ತವು ಉದ್ಧರಿಸುತ್ತದೆ. ಯಾರು ಹಸಿದವರಿಗೆ ಊಟ ನೀಡುವುದಿಲ್ಲವೋ ಮನೆಗೆ ಬಂದ ಅತಿಥಿಯನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲವೋ ಅಂತಹವನಿಗೆ ಸಂತೋಷವಿರುವುದಿಲ್ಲ. ಯಾರು ತಮ್ಮ ಸ್ನೇಹ ಪರವಲ್ಲದ ಮನೋಭಾವವನ್ನುಳ್ಳವರಾಗಿರುವರೋ, ಯಾರು ಬೇರೆಯವರಿಗೆ ಕೊಡದೇ ತಾವೇ ತಿನ್ನುವರೋ ಅವರು ಸಂತೋಷದಿಂದಿರಲು ಸಾಧ್ಯವಿಲ್ಲ.

ಬರೀ ಮನುಷ್ಯರಿಗೆ ಮಾತ್ರವೇ ಊಟ ಹಂಚಿ ತಿನ್ನಬೇಕೆಂದಲ್ಲ. ಪಕ್ಷಿಗಳಿಗೆ, ಪ್ರಾಣಿಗಳಿಗೆ, ಕೀಟಗಳಿಗೆ ಸಮರ್ಪಿಸಿದ ನಂತರವೇ ತಾನು ಸ್ವೀಕರಿಸಬೇಕು. ಐದು ಹಿಡಿಯಷ್ಟು ಸ್ವೀಕರಿಸುವುದು (ಪಂಚಗ್ರಾಸಗಳು) ಇಂದಿಗೂ ಪಾರಂಪರಿಕ ಮನೆಗಳಲ್ಲಿ ಚಾಲ್ತಿಯಲ್ಲಿದೆ. ಇದರ ಹಿನ್ನಲೆಯನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿದೆ. ಊಟವು ಎಲ್ಲರಿಗೂ ಸೇರತಕ್ಕದ್ದು. ಸೃಷ್ಟಿಕರ್ತ ಅದನ್ನು ಎಲ್ಲರಿಗೋಸ್ಕರವೇ ಸೃಷ್ಟಿಸಿದ್ದಾನೆ. ಇದಮೇವಾಸ್ಯತತ್ ಸಾಧಾರಣಮನ್ನಂ ಯದಿದಂ ಆದ್ಯತೇ.[20] ಈ ರೀತಿ ಮನೋಭಾವವನ್ನೇ ಗೀತೆಯೂ ಪ್ರತಿಪಾದಿಸಿದೆ. ಯಾರು ತಮಗೋಸ್ಕರ ಮಾತ್ರವೇ ಅಡಿಗೆ ಮಾಡುವರೋ ಅವರು ತಮ್ಮ ಪಾಪವನ್ನೇ ತಿನ್ನುತ್ತಾರೆ. ಭುಂಜತೇತೇ ತ್ವಘಂ ಪಾಪಾ ಯೇ ಪಚ್ಯಂತೇ ಆತ್ಮಕಾರಣಾತ್.[21] ಪ್ರತಿಯೊಬ್ಬ ಮಾನವನೂ ಜಗನ್ನಿಯಮದ ಒಂದು ಭಾಗವೇ ಸರಿ. ಅವನಿಗೆ ಏನು ಪ್ರಕೃತಿಯಿಂದ ಸಿಕ್ಕಿದೆಯೋ ಅದನ್ನು ಅವನು ಬೇರೆಯವರೊಂದಿಗೆ ಹಂಚಬೇಕು.

ಹಿಂದಿನ ಮುನಿಗಳಿಂದ ದಾನಕ್ಕೆ ಮೊದಲ ಮಹತ್ವ ದೊರಕಿದ್ದರೂ ಸಹ ಅದು ಅವರಿಂದ ಕೆಲವು ಅನುಸಿದ್ಧಾಂತಗಳನ್ನು ನೀಡಿದೆ. ಅವು ಮೂರು ಬಗೆಯಾದುದು. ಮೊದಲನೆಯದಾಗಿ ಹಣವು ಸ್ವಾರ್ಜಿತವಾಗಿರಬೇಕು. ದಾನವು ಅವರ ಮಟ್ಟಕ್ಕೆ ಹೊಂದಾಣಿಕೆಯಾಗಬೇಕು. ಏಕೆಂದರೆ ಮುಂದೆ ಅವನಿಗೆ ಅದರಿಂದ ಪಶ್ಚಾತ್ತಾಪವುಂಟಾಗಬಾರದು.

ದಾನಂ ಸತ್ವಮಿತಂ ದದ್ಯಾನ್ನ ಪಶ್ಚಾತ್ತಾಪ ದೂಷಿತಂ.[22] ಮೂರನೆಯದಾಗಿ, ತಾವು ಕೊಟ್ಟ ದಾನದಿಂದ ತಮ್ಮವರಿಗಾಗಲೀ, ಬೇರೆಯವರಿಗಾಗಲೀ ತೊಂದರೆಯಾಗಬಾರದು :-

ಅಪರಾಬಾಧಮಕ್ಲೇಶಂ ಸ್ವಾಯತ್ತೇನಾರ್ಜಿತಂ ಧನಂ ।
ಸ್ವಲ್ಪಂ ವಾ ವಿಪುಲಂ ವಾಪಿ ದೇಯಮಿತ್ಯಭಿಧೀಯತೇ ॥
ಶಕ್ತೇ ಪರಿಜನೇ ದಾತಾ ಸ್ವಜನೇ ದುಃಖ ಜೀವಿನಿ ।
ಮಧ್ವಾಪಾನವಿಶಾದಃ ಸ ಧರ್ಮಾಣಾಂ ಪ್ರತಿ ರೂಪಕಃ ॥[23]

ಯಾರು ತಮಗೆ ಸಾಕಾಗುವಷ್ಟು ಇರುವವರಿಗೆ ದಾನಕೊಟ್ಟು ತಮ್ಮವರಿಗೇ ಕಷ್ಟಜೀವನ ನಡೆಯುವಂತೆ ಮಾಡುವವರೋ ಅವರು ಧರ್ಮವನ್ನು ಮಾಡುತ್ತಿಲ್ಲ ಅವರು ನಕಲನ್ನು ಮಾಡುತ್ತಿರುತ್ತಾರೆ. ಅವರೇ ಸುಳ್ಳು ಧರ್ಮಾತ್ಮ ಅವರೇ ಮದ್ಯವನ್ನು ಕುಡಿಯುವವರು ಮತ್ತು ವಿಷವನ್ನು ಕುಡಿಯುವವರು.

ನಮ್ಮ ಪಾರಂಪರಿಕ ಗ್ರಂಥಗಳು ಯಾರಾದರೂ ದಾನವನ್ನು ತೆಗೆದುಕೊಳ್ಳುವಂತಿದ್ದರೂ ಸಹ ಅವರು ಅದನ್ನು ನಿರಾಕರಿಸಬೇಕೆಂದು ಪ್ರತಿಪಾದಿಸುತ್ತವೆ - ಪ್ರತಿಗ್ರಹಸಮರ್ಥೋऽಪಿ ನ ಪ್ರಸಜ್ಯೇತ್ ಪರಿಗ್ರಹೇ [24] ಅಂತಹವರು ದಾನಿಗಳು ಹೋಗುವಂತಹ ಪುಣ್ಯಕರವಾದ ಲೋಕಗಳನ್ನು ಕುರಿತು ಹೋಗುತ್ತಾರೆ.

ಭಾರತೀಯರ ಮಾನಸಿಕ ಪ್ರಣಾಲಿಯಲ್ಲಿ ದಾನವು ಅತಿ ಪ್ರಮುಖಪಾತ್ರ ವಹಿಸುತ್ತದೆ. ಅದು ಅವರ ಕರ್ತವ್ಯ. ದಾನಂ ಧರ್ಮಃ [25]. ಅದನ್ನು ಮಾಡಿಯೇ ಮಾಡಬೇಕು. ಅದಿಲ್ಲದೆ ಒಳ್ಳೆಯ ಹೆಸರಿಲ್ಲ. ನ ದಾನೇನ ವಿನಾ ಯಶಃ [26] ಅದನ್ನು ಸಹಜವಾಗಿಯೇ ನೀಡಬೇಕು. ನಗುಮುಖದಿಂದ ದಾನ ಮಾಡಬೇಕು (ಸ್ಮಿತೇನ) ಮತ್ತು ಘನತೆಯಿಂದ ದಾನ ನೀಡಬೇಕು. ಸತ್ಕಾರ ಪೂರ್ವಂ.[27] ಯಾರು ದಾನ ಮಾಡುವುದಿಲ್ಲವೋ ಅಂತಹವರಿಗೆ ಎಂತಹ ದೂಷಣೆಯಾದರೂ ಕಡಿಮೆಯೇ. ಅವನು ಭೂಮಿಗೆ ಮರಗಳಿಗಿಂತ, ಪರ್ವತಗಳಿಗಿಂತ, ಸಮುದ್ರಕ್ಕಿಂತ ಭಾರ. ತೇನ ಭೂಮಿರತಿಭಾರವತೀಯಮ್, ನದ್ರುಮೈಃ ನಗಿರಿಭಿಃ ನ ಸಮುದ್ರೈಃ.[28] ಅವನಿಗೆ ಯಾವ ನಿಂದನೀಯ ಹೇಳಿಕೆಯೂ ಕಡಿಮೆಯಲ್ಲ ಆದರೆ ಮೂರು ಅಕ್ಷರಗಳುಳ್ಳ ''ಅರಾತಿ'' ಎಂಬ ಪದವು ಅವನಿಗೆ ಒಪ್ಪುತ್ತದೆ. ಅರಾತಿ ಎಂದರೆ ಶತ್ರು. ಅದು ನಿರುಕ್ತದಂತೆ ''ಯಾರು ಯಾರಿಗೂ ಏನೂ ಕೊಡುವವರಲ್ಲವೋ'' ಎಂಬರ್ಥ ಕೊಡುತ್ತದೆ. ನಾಸ್ತಿ ರಾತಿಃ ದಾನಂ ಯಸ್ಯ. ಭಾರತೀಯ ಸಮಾಜವು ಅಂತಹವನನ್ನು ಶತ್ರುವೆಂದೇ ಪರಿಗಣಿಸುತ್ತದೆ.

---

## ಆಕರ ಗ್ರಂಥಗಳು

1) ಸರ್ವಾರ್ಥಸಿದ್ಧಿ.6.12. 2) ತತ್ತ್ವಾರ್ಥಸೂತ್ರ.7.38. 3) ತೈತ್ತಿರೀಯೋಪನಿಷತ್.1.11. 4) 17.20 5) 17.21 6) 17.22 7) ಮಧ್ವಕೌಮುದಿ.4.55-61 8) 1.8 9) ಅಗ್ನಿಪುರಾಣ. 211.54 10) ರಘುವಂಶ.1.18 11) ಅಥರ್ವವೇದ.3.24.5 12) ನೈಷಧೀಯಚರಿತ.5.83. 13) ಸ್ಕಂದಪುರಾಣ.ಮಾಕೌ.2.65 14) 209.29 15) ಪದ್ಮಪುರಾಣ.3.71 16) ಶುಕ್ರನೀತಿ.2.178 17) ಐದನೇಸರ್ಗ 18) ಹಿತೋಪದೇಶ. ಮಿತ್ರಲಾಭ.161 19) ಋಗ್ವೇದ.10.117.6 20) 1.5.2. 21) ಚಾರುಚರ್ಯಾ 18 23) ಸ್ಕಾಂದಪುರಾಣ.ಮಾ.ಕೌ.4.67. ಅದೇ ಅಭಿಪ್ರಾಯ ಬರುವುದಕ್ಕೆ ಯಾಜ್ಞವಲ್ಕ್ಯಸ್ಮೃತಿ 1.10.213 24) ಯಾಜ್ಞವಲ್ಕ್ಯಸ್ಮೃತಿ.1.10.213 25) ಚಾಣಕ್ಯ ಸೂತ್ರ.155. 26) ಸಭಾರಂಜನ ಶತಕ.42. 27) ನೀತಿದ್ವಿಷಷ್ಟಿಕಾ.28. 28) ನೈಷಧೀಯಚರಿತ.5.88

# 5. ಆಚಾರ ಅಥವಾ ಸದಾಚಾರ

ಭಾರತೀಯ ಪರಂಪರೆ ಆಚಾರ ಅಥವಾ ಸದಾಚಾರಕ್ಕೆ ಅತ್ಯಧಿಕ ಮಹತ್ವವನ್ನು ಕೊಟ್ಟು ಅದೇ ಅತ್ಯಂತ ಶ್ರೇಷ್ಠಗುಣವೆಂದೂ ಸಾರಿದೆ. ಆಚಾರಃ ಪರಮೋ ಧರ್ಮಃ[1] ಅದನ್ನು ಅನುಸರಿಸದೇ ಪವಿತ್ರದಲ್ಲಿ ಪವಿತ್ರವಾದಂತಹ ವೇದವೂ ಸಹ ದೋಷನಿವಾರಿಸಲು ಶಕ್ಯವಲ್ಲ -ಆಚಾರಹೀನಂ ನ ಪುನಂತಿ ವೇದಾಃ [2]

ಶಾಸ್ತ್ರಗಳೂ ಸಹ ಆಚಾರದ ಹೆಗ್ಗಳಿಕೆಯನ್ನು ಪ್ರತಿಪಾದಿಸುತ್ತದೆ. ಶಾಸ್ತ್ರಗಳು ನಿಯಮಗಳನ್ನು ವಿಧಿಸಿ ಪವಿತ್ರಗ್ರಂಥಗಳಲ್ಲಿ ಅದನ್ನು ಗೋಪನಮಾಡಿದೆ. ಈ ಗೋಪನಗಳು ವಯಕ್ತಿಕ ಚಾರಿತ್ರ್ಯವನ್ನು ರೂಪುಗೊಳಿಸಿ ಸಮಾಜವು ಸುಸ್ಥಿರವಾಗಿ ನಡೆಯಲು ಸಹಕರಿಸುತ್ತದೆ. ವಯಕ್ತಿಕ ಒಳ್ಳೆಯ ಗುಣವು ಸಮಾಜದ ಒಳಿತಿಗೆ ಸಹಕಾರಿಯಾಗುತ್ತದೆ. ಆಚಾರವನ್ನು ಅನುಸರಿಸುವುದರಿಂದ, ಯಾವುದು ಅನಾದಿಕಾಲದಿಂದ ಮಾನ್ಯತೆ ಪಡೆದಿದೆಯೋ ಅದರಿಂದ ಒಬ್ಬ ಶಾಂತಿಯುತ ಜೀವನ ಸಾಧಿಸಬಹುದು. ಆಚಾರವೇ ಅವನನ್ನು ನಿಯಂತ್ರಣದಲ್ಲಿರಿಸುತ್ತದೆ ಅದು ಅಂತಃ ಸ್ಫುರಣೆಯಿಂದುಂಟಾಗುತ್ತದೆ. ಅದನ್ನು ಅನುಸರಿಸುವವರು ಯಾವಾಗಲೂ ಶುದ್ಧರಾಗಿ, ಸಂತುಷ್ಟರಾಗಿರುವರೆಂದು ದೇವೀ ಭಾಗವತ ಸಾರುತ್ತದೆ :-

ಆಚಾರವಾನ್ ಸದಾ ಪೂತಃ ಆಚಾರವಾನ್ ಸದಾ ಸುಖೀ[3]

ವಿಷ್ಣುಧರ್ಮೋತ್ತರ ಪುರಾಣದ ಪ್ರಕಾರ ಒಬ್ಬ ಒಳ್ಳೆಯ ಚಿಹ್ನೆಗಳನ್ನು ಹೊಂದಿದ್ದರೂ, ಜ್ಞಾನವನ್ನು ಸಂಪಾದಿಸಿಕೊಳ್ಳದಿರಬಹುದು. ಅವನು ಏನೇ ಆಸೆ ಪಟ್ಟರೂ ಅದು ಈಡೇರದಿರಬಹುದು ಏಕೆಂದರೆ ಅವನು ಸದಾಚಾರವಿಲ್ಲದವನು. ಅಂತಹವನು ನರಕಕ್ಕೆ ಹೋಗುತ್ತಾನೆ.

ಸರ್ವಲಕ್ಷಣಯುಕ್ತೋಽಪಿ ನರಸ್ತು ಆಚಾರವರ್ಜಿತಃ ।
ನ ಪ್ರಾಪ್ನೋತಿ ತಥಾ ವಿದ್ಯಾಂನಚ ಕಿಂಚಿದಭೀಪ್ಸಿತಮ್ ॥ [4]

ಒಳ್ಳೆಯ ಆಚಾರವಿರುವವನು ಆಚಾರವಾನ್ ಪುರುಷಃ ಸ್ವರ್ಗವನ್ನೂ ಕೀರ್ತಿಯನ್ನೂ, ಧೀರ್ಘಾಯುಷ್ಯವನ್ನೂ, ಮರ್ಯಾದೆಯನ್ನೂ ಎಲ್ಲಾ ಸುಖಗಳನ್ನೂ ಹೊಂದುತ್ತಾನೆ :

ಆಚಾರಃ ಸ್ವರ್ಗ ಜನನಃ ಆಚಾರಃ ಕೀರ್ತಿವರ್ಧನಃ
ಆಚಾರಸ್ತಥಾಯುಷ್ಯೋ ಧನ್ಯೋ ಲೋಕಸುಖಾವಹಃ
ಆಚಾರಯುಕ್ತಸ್ತ್ರಿವಿಧಂ ಪ್ರಯಾತಿ
ಆಚಾರವಾನೇವ ಭವತ್ಯರೋಗಃ
ಆಚಾರವಾನೇವ ಚಿರಂತು ಜೀವೇತ್
ಆಚಾರವಾನೇವ ಭುನಕ್ತಿ ಲಕ್ಷ್ಮೀಂ ॥ [5]

ಆಚಾರವೇ ಧರ್ಮದ ಮೂಲದೆಂದು ಮನುವೂ ಅಭಿಪ್ರಾಯ ಪಡುತ್ತಾನೆ ಆಚಾರ ಪ್ರಭವೋ ಧರ್ಮಃ. ಇಂತಹ ಆಚಾರದ ಪ್ರಶಂಸೆಯು ಮೂಲಭೂತವಾದ ಆಚಾರ ಎಂದರೇನು ಎಂಬ ಪ್ರಶ್ನೆಗೆ ದಾರಿ ಮಾಡುತ್ತದೆ. ಅದರ ನಿರ್ವಚನ ಎರಡು ರೀತಿಯದೆ: ''ಆಚರ್ಯತೇ ಅನೇನ'' ಮತ್ತು ''ಆಚರತಿ ಅಸ್ಮಿನ್'' ಯಾವುದರಿಂದ ಜೀವನವು ನಿರೂಪಿತವಾಗಿದೆಯೇ ಮತ್ತು ಯಾವುದರಲ್ಲಿ ತಾನು ತನ್ನನ್ನು ತೊಡಗಿಸಿಕೊಳ್ಳುವನೋ.

ಮನು ತನ್ನ ಗ್ರಂಥದ ಪ್ರಾಮುಖ್ಯತೆಯ ನಿರೂಪಣಾವಸರದಲ್ಲಿ ಕಾನೂನು ಹಾಗೂ ನಿತ್ಯತೆಯ ಬಗ್ಗೆ ಪ್ರತಿಪಾದಿಸುತ್ತಾನೆ - ಆಚಾರಶ್ಚೈವ ಶಾಶ್ವತಃ[7]. ಕುಲ್ಲೂಕ ಮನುವಿನ ವ್ಯಾಖ್ಯಾನಕಾರ ''ಶಾಶ್ವತಂ''[7] ಎಂಬ ಪದಕ್ಕೆ ''ಪಾರಂಪರ್ಯಗತಃ'' ಎಂದು ವಿವರಿಸುತ್ತಾನೆ. ಯಾವುದು ತಲಾಂತರದಿಂದ ಬಂದಿದೆಯೋ ಅದು. ಮನು ಅದನ್ನು ಮೀರದ ನಿಯಮವೆಂದು ಹೇಳಿ ಅದರ ಚೌಕಟ್ಟನ್ನು ಸ್ಪಷ್ಟಪಡಿಸುತ್ತಾನೆ. ಆಚಾರವು ವೇದಗಳಲ್ಲಿ ಅಪೌರುಷೇಯ ಗ್ರಂಥಗಳಲ್ಲಿ ಪಾರಂಪರಿಕವಾಗಿ ನಿರೂಪಿಸಲ್ಪಟ್ಟಿದೆ - ಶ್ರುತ್ಯುಕ್ತಃ ಸ್ಮೃತಾ ಏವಚ.[8] ಯಾರಾದರೂ ತಮ್ಮನ್ನು ತಾವು ಗೌರವಿಸುವುದಾದರೆ ಅದನ್ನು ಜಾಗರೂಕತೆಯಿಂದ ಅನುಸರಿಸಬೇಕು - ತಸ್ಮಾದ್ ಅಸ್ಮಿನ್ ಸಾದಾಯುಕ್ತೋ ನಿತ್ಯಂಸ್ಯಾದ್ ಆತ್ಮವಾನ್ ದ್ವಿಜಃ.[9]

ಯಾವ ಬ್ರಾಹ್ಮಣನು ಆಚಾರವರ್ಜಿತನಾಗುವನೋ ಅವನಿಗೆ ವೇದದ ಫಲವು ದೊರೆಯುವುದಿಲ್ಲ. ಯಾರು ಆಚಾರಯುಕ್ತರೋ ಅವರಿಗೆ ಸಂಪೂರ್ಣವಾದ ವೇದಫಲ ಲಭಿಸುತ್ತದೆ. ಮಹಾಭಾರತದ ಪ್ರತಿಮೆಯನ್ನೇ ಬಳಸುವುದಾದರೆ ಆಚಾರವರ್ಜಿತನಾದವನನ್ನು ಸಾವಿನ ಸಮಯದಲ್ಲಿ ಬಿಡುತ್ತದೆ ಹೇಗೆ ರೆಕ್ಕೆ ಬಲಿತ ಮೇಲೆ ತಮ್ಮ ಗೂಡನ್ನು ಪಕ್ಷಿಗಳು ಬಿಡುತ್ತವೋ ಹಾಗೆ. ನೀಡಂಶಕುಂತಾಇವ ಜಾತಪಕ್ಷಾ ಛಂದಾಂಸ್ಯೇನಂ ಪ್ರಜಹಾತ್ಯಂತ ಕಾಲೇ.10

ಸದಾಚಾರವೆಂದರೆ ಆಚಾರವೇ ಸತ್ ಎಂಬ ಪದವು ಬೇರೆಯಾಗಿ ವರ್ಣಿತವಾಗಿದ್ದರೂ ಸಹ. ಸಮಾಸವನ್ನು ಮೂರು ರೀತಿ ಬಿಡಿಸಬಹುದು. ಸಂಶ್ಚಾಸೌ ಆಚಾರಶ್ಚ ಸದಾಚಾರಃ, ಆಚಾರವು ಇರುವಂತೆ. ಸಮ್ಯಕ್ ಆಚಾರಃ ಸದಾಚಾರಃ - ಒಳ್ಳೆಯ ಆಚಾರ, ಸತಾಂ-ಸಾಧೂನಾಂ ಆಚಾರ ಇತಿ ಸದಾಚಾರಃ - ಒಳ್ಳೆಯವರ ನಡತೆ. ವಿಷ್ಣುಪುರಾಣದ ವಿವರಣೆ ಸೂಕ್ಷ್ಮವಾಗಿದೆ. ಸಾಧವಃಕ್ಷೀಣದೋಷಾಸುಸಚ್ಛಬ್ದಃ ಸಾಧುವಾಚಕಃ । ತೇಷಾಮಾಚರಣಂ ಯತ್‌ತು ಸದಾಚಾರಃ ಸ ಉಚ್ಯತೇ.[11] ಸಾಧುಗಳೆಂದರೆ ಒಳ್ಳೆಯವರು. ಯಾರಲ್ಲಿ ಕೆಟ್ಟ ಗುಣಗಳಿಲ್ಲವೋ ಅವರು. ''ಸತ್'' ಎಂಬ ಪದ ಅವರನ್ನೇ ಸೂಚಿಸುತ್ತದೆ. ಸಾಧುಗಳ ಆಚರಣೆಯೇ ಸದಾಚಾರವು. ಮನುವಿನ ಪ್ರಕಾರ ಸದಾಚಾರವು ಶೃತಿಸ್ಮೃತ್ಯುದಿತಾ [12] - ಯಾವುದು ವೇದದಲ್ಲಿ ಹಾಗೂ ನಮ್ಮ ಆರ್ಷೇಯಪರಂಪರೆಯಲ್ಲಿ ಅನುಮೋದಿತವಾಗಿದೆಯೋ ಅದು. ಆಚಾರವೂ ಅದೇ - ಶೃತ್ಯುಕ್ತಃ ಸ್ಮೃತಾ ಏವಚ [13]. ಕೇವಲ ಪದನಾಮ ಮಾತ್ರ ಇಲ್ಲಿ ವ್ಯತ್ಯಸ್ತವಾಗಿದೆ.

ಮನುವಿನ ಪ್ರಕಾರ ಯಾವ ನಿಯಮಗಳು ಪಾರಂಪರಿಕವಾಗಿ ನಡೆದುಬಂದಿದೆಯೋ ''ಪಾರಂಪರ್ಯ ಕ್ರಮಾಗತಃ''.[14] ನಾಲ್ಕು ವರ್ಣಗಳು ಹಾಗೂ ಸಮ್ಮಿಶ್ರಗಳ

ಬ್ರಹ್ಮಾವರ್ತದಲ್ಲಿ, ದೇವರಿಂದಲೇ ನಿರ್ಮಿತವಾಗಿ ಎರಡು ದಿವ್ಯ ನದಿಗಳಾದ ಸರಸ್ವತಿ, ದೃಷದ್ವತಿಗಳ ಮಧ್ಯದಲ್ಲಿರುವುದೇ ಸದಾಚಾರ. ಗುಣವಂತರ ಆಚರಣೆ ಸದಾಚಾರ ಉಚ್ಯತೇ[15]

ಆಚಾರ ಅಥವಾ ಸದಾಚಾರ ಮೂರು ರೀತಿಯಾಗಿರುತ್ತದೆ. ಕಾಯಕ, ವಾಚಿಕ ಹಾಗೂ ಮಾನಸಿಕ. ಅದನ್ನೇ ಜೈನಾಚಾರ್ಯರು ಸಮ್ಯಕ್‌ಜ್ಞಾನ, ಸಮ್ಯಕ್‌ದೃಷ್ಟಿ ಮತ್ತು ಸಮ್ಯಕ್ ಚಾರಿತ್ರ್ಯವೆಂದಿದ್ದಾರೆ. ಸ್ನಾನದಿಂದ ದೇಹಶುದ್ಧಿ, ಬ್ರಹ್ಮಚರ್ಯ ಪಾಲನೆ, ಅಹಿಂಸೆ, ಪರೋಪಕಾರ, ದೇವಪೂಜೆ, ಮುಂತಾದವು ಕಾಯಕಾಚಾರ, ಸತ್ಯನುಡಿ – ಸತ್ಯಭಾಷಣ, ನಯವಾಗಿ ಮಾತನಾಡುವುದು ಬೇರೆಯವರಿಗೆ ಹಿಂಸೆಯಾಗದಂತೆ ಪ್ರಿಯಭಾಷಣ / ಪವಿತ್ರಗ್ರಂಥಗಳ ಪಠಣ ಅಥವಾ ವಾಚನ / ಭಗವಂತನ ಗುಣಗಾನ ಮಾಡುವುದು – ಈಶ್ವರ ಸ್ತವನ ವಾಚಿಕ ಸದಾಚಾರ. ಮಾರ್ದವ, ಅನುಕಂಪ, ಪ್ರಾಮಾಣಿಕತೆ, ದೃಢವಾದ ನಿಷ್ಠೆ, ಕ್ಷಮಾಗುಣ, ಅರಿಷಡ್ವರ್ಗಗಳಿಂದ ದೂರವಿರುವುದು. ಮಾನಸಿಕ ಸದಾಚಾರ.

ಪಾರಂಪರಿಕ ಗ್ರಂಥಗಳಲ್ಲಿ ಆಚಾರ ಅಳವಡಿಸುವಿಕೆಗೆ ಪ್ರಾಶಸ್ತ್ಯ ನೀಡಲಾಗಿದೆ. ಆಚಾರ್ಯನು ತನ್ನ ಶಿಷ್ಯರಿಗೆ ಆಚಾರವನ್ನು ಬೋಧಿಸುವವನಾಗಬೇಕು ಮತ್ತು ವಿಭಿನ್ನ ಜ್ಞಾನ ಮಾರ್ಗಗಳನ್ನು ಬೋಧಿಸಬೇಕು – ಸದಾಚಾರಶ್ಚ ಶಿಕ್ಷಯೇತ್. ಅದೇ ಮೊದಲ ಕರ್ತವ್ಯವು ಅವನೇ ಆಚಾರ್ಯನಾಗಿರುವುದರಿಂದ. ಆಚಾರ್ಯಃ ಕಸ್ಮಾತ್, ಆಚಾರಂ ಗ್ರಾಹಯತಿ.[16] ಏಕೆ ಅವನು ಆಚಾರ್ಯನೆನಿಸಿಕೊಳ್ಳುತ್ತಾನೆ? ಏಕೆಂದರೆ ಅವನು ಆಚಾರವನ್ನು ಬೋಧಿಸುವುದರಿಂದ. ಆಚಾರವನ್ನು ಬೋಧಿಸುವುದರ ಜೊತೆಗೆ ತನ್ನ ಸ್ವಾನುಭವದಿಂದ ತನ್ನ ಶಿಷ್ಯರಿಗೆ ಅದನ್ನು ನೀಡುತ್ತಾನೆ ಅದೇ ಅವನಿಗೆ ನಿದರ್ಶನವಾಗುತ್ತದೆ. ಗುರುಕುಲವಾದ ಬಳಿಕ ಆಚಾರ್ಯರು ಶಿಷ್ಯನಿಗೆ ನೀಡುವ ಆದೇಶವೆಂದರೆ ಸತ್ಯಂವದ, ಧರ್ಮಂಚರ, ಸ್ವಾಧ್ಯಾಯಾನ್ಮಾ ಪ್ರಮದಃ ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋ ಭವ, ಅತಿಥಿದೇವೋಭವ[17]. ಸತ್ಯನುಡಿ, ಧರ್ಮಾವನ್ನಾಚರಿಸು, ವೇದಾಧ್ಯಯನವನ್ನು ಉಪೇಕ್ಷಿಸಬೇಡ. ತಾಯಿಯನ್ನು ದೇವರಂತೆ ಕಾಣು, ತಂದೆಯನ್ನು ದೇವರಂತೆ ಕಾಣು, ಗುರುವನ್ನು ದೇವರಂತೆ ಕಾಣು, ಅತಿಥಿಯನ್ನು ದೇವರಂತೆ ಕಾಣು. ಅವನೂ ಮಾನವನಾದ್ದರಿಂದ, ತಾನೇ ಆಚಾರದಿಂದ ಬಾಹಿರನಾಗಿರಬಹುದಾದ್ದರಿಂದ ಶಿಷ್ಯನು ಎಲ್ಲವನ್ನೂ ಚಾಚೂತಪ್ಪದೆ ಆಚರಿಸಬೇಕು ಮತ್ತು ಬೇರೆಯವರದಲ್ಲ – ಯಾನ್ಯಸ್ಮಾಕಂ ಸುಚರಿತಾನಿ, ತಾನಿತ್ವಯೋಪಾಸ್ಯಾನಿ ನೋ ಇತರಾಣಿ.

ನೀತಿಗೆ ಸಂಬಂಧಿಸಿದ ಗ್ರಂಥಗಳು ಪ್ರತಿಯೊಂದೂ ಸಹ ಪ್ರತಿಯೊಬ್ಬರೂ ತಮ್ಮನ್ನು ತಾವು ನಡೆಸಿಕೊಳ್ಳಬೇಕೆಂಬುದಕ್ಕೆ ಸಾಕಷ್ಟು ಬೋಧಿಸಿದೆ. ಹಾಗೆಯೇ ನೀತಿಬೋಧಕ ಗ್ರಂಥಗಳಾದ ಪಂಚತಂತ್ರ ಮತ್ತು ಹಿತೋಪದೇಶವೂ ಸಹ. ಅಲ್ಲಿ ಪ್ರತಿಕಥೆಯಲ್ಲೂ ಒಂದು ನೀತಿಯಿದೆ. ಭಾರತೀಯ ವಿವೇಕದ ರತ್ನಕೋಶವಾದ ಮಹಾಭಾರತವು ವಯಕ್ತಿಕ ಹಾಗೂ ಸಾಮಾಜಿಕ ಹಂತದಲ್ಲಿ ಹೀಗೆ ನಡೆದುಕೊಳ್ಳಬೇಕೆಂಬುದಕ್ಕೆ ಸಾಕಷ್ಟು ಹೇಳಿಕೆಗಳನ್ನು ನೀಡಿದೆ. ಅದರಂತೆಯೇ ಮತ್ತೊಂದು ಮಹಾಕಾವ್ಯವಾದ ರಾಮಾಯಣವೂ ಸಹ.

ಆಚಾರ ಅಥವಾ ಸದಾಚಾರಕ್ಕೆ ಅಗ್ರಂಥಗಳೇ ಮೇಲ್ಪಂಕ್ತಿಯಾಗಿವೆ. ಅನೇಕ ನಿಯಮಗಳು ವಿಶ್ವವ್ಯಾಪಿಯಾದುದು. ಅದು ಯಾವುದೇ ಒಂದು ಪ್ರದೇಶಕ್ಕಾಗಲೀ, ಸಮಯಕ್ಕಾಗಲೀ ಸೀಮಿತವಾದುದಲ್ಲ. ಹಿರಿಯರಿಗೆ ಗೌರವನೀಡುವುದೇ ಆಗಬಹುದು. ಚಿಕ್ಕವನು ತನ್ನ ಉಸಿರು ಹಿಡಿದು ದೊಡ್ಡವರಿಗೆ ತನ್ನ ಆಸನದಿಂದ ಮೇಲೆದ್ದು ನಮಸ್ಕರಿಸುವವರೆಗೆ ಹಾಗೆಯೇ ಇರುತ್ತಾನೆ.

ಊರ್ಧ್ವಂ ಪ್ರಾಣಾಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಯತಿ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ।।18

ಹಿರಿಯವರಿಗೆ ಗೌರವಿಸುವ ಉದ್ದೇಶದಿಂದಲೇ ಮಹಾಭಾರತವು ನೀನು ಎಂಬ ಪದಬಳಸದೆ ಅವರ ಹೆಸರನ್ನು ಸಾಕ್ಷಾತ್ತಾಗಿ ಉಚ್ಚರಿಸುವಂತೆ ಮಾಡುತ್ತದೆ – ತ್ವಂಕಾರಂ ನಾಮಧೇಯಂ ಚ ಜ್ಯೇಷ್ಠಾನಾಂ ಪರಿವರ್ಜಯೇತ್.[19]

ಉಪನಿಷತ್ತು ಪ್ರತಿಪಾದಿಸುವಂತೆ – ಅತಿಥಿಯನ್ನು ದೇವರಂತೆ ಕಾಣು – ಅತಿಥಿ ದೇವೋಭವ. ಮನೆಗೆ ಬಂದ ಯಾವುದೇ ಅತಿಥಿಗಾದರೂ ಸರಿಯಾಗಿ ಗೌರವ ಸಲ್ಲಿಸಬೇಕು. ಅವನನ್ನು ನಗುಮುಖದಿಂದ ಬರಮಾಡಿಕೊಳ್ಳಬೇಕು, ಹೃದಯ ವೃಶಾಲ್ಯವಿರಬೇಕು ಮತ್ತು ನಲ್ಮೆಯ ನುಡಿಯಿರಬೇಕು. ಮೇಲೆದ್ದು, ಅವರ ಬಳಿ ಹೋಗಿ ಅವರಿಗೆ ಆಸನ ನೀಡಿ ಗೌರವಿಸುವುದೇ ಸದಾಚಾರ :-

ಚಕ್ಷುರ್ದದ್ಯಾತ್ ಮನೋದದ್ಯಾತ್ ವಾಚಂ ದದ್ಯಾಚ್ಚ ಸೂನೃತಂ ।
ಉತ್ಥಾಯ ಚಾಸನಂ ದದ್ಯಾತ್ ಏಷ ಧರ್ಮಃ ಸನಾತನಃ ।। [20]

ಒಳ್ಳೆಯವರ ಮನೆಯಲ್ಲಿ ದರ್ಭಾಸನೆಗಳಿಗೇನೂ ಕೊರತೆಯಿರುವುದಿಲ್ಲ. ಕುಳಿತುಕೊಳ್ಳುವ ಪ್ರದೇಶಕ್ಕಾಗಲೀ, ಕೈಕಾಲು ತೊಳೆದುಕೊಳ್ಳಲು ನೀರಿಗಾಗಲೀ, ಮೃದುವಾದ ಮಾತುಗಳಿಗಾಗಲೀ, ಕೊರತೆಯಿರುವುದಿಲ್ಲ.

ತೃಣಾದಿಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ ।
ಸತಾಮೇತಾನಿ ಗೇಹೇಷು ನೋಚ್ಛಿದ್ಯಂತೆ ಕದಾಚನ ।। [21]

ಭಾರತೀಯರ ಮನಸ್ಸಿನಲ್ಲಿ ಅತಿಥಿಸತ್ಕಾರವೆನ್ನುವುದು ಎಷ್ಟು ಬೇರೂರಿದೆಯೆಂದರೆ ಒಬ್ಬ ಶತ್ರುವೇ ಮನೆಗೆ ಬಂದರೂ ಅವನಿಗೆ ಅತಿಥಿಸತ್ಕಾರ ನೀಡಬೇಕು – ಅರಾವಪ್ಯುಚಿತಂ ಕಾರ್ಯಂ ಆತಿಥ್ಯಂ ಗೃಹಮಾಗತೇ[22].

ಆಚಾರದ ಲಕ್ಷ್ಯವೆಂದರೆ ಹೆಂಗಸರನ್ನು ಗೌರವದಿಂದ ಕಾಣುವುದು. ಇದಕ್ಕೆ ಒಂದು ಪೂರಕ ವಾಕ್ಯವೆಂದರೆ ಸಾಮಾನ್ಯವಾಗಿ ಮನುವಿನಿಂದ ಉದ್ಧರಿಸಿರುವ ''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ''[23]. ಎಲ್ಲಿ ಹೆಂಗಸರನ್ನು ಗೌರವಿಸಲ್ಪಡುವರೋ

ಅಲ್ಲಿ ದೇವತೆಗಳೂ ಆನಂದಿಸುತ್ತಾರೆ ಎಂದು ಮಹಾಭಾರತದಲ್ಲಿ ಪ್ರತಿಪಾದಿತವಾಗಿರುವ ಸದಾಚಾರವೂ ಆಗಿದೆ. ಅದೇ ರೀತಿಯಾದ ಆಚಾರವನ್ನು ದೈಹಿಕವಾಗಿ ಅಸಮರ್ಥರಾದವರ ಬಗ್ಗೆ, ಕುರುಡರ, ಕಿವುಡರ ಬಗ್ಗೆ, ಭಾರ ಹೊರುವವರ ಬಗ್ಗೆಯೂ ನೀಡಬೇಕು. ರಾಜನಾದವನು ಎಷ್ಟೇ ಬಲಿಷ್ಠನಾಗಿದ್ದರೂ ಜ್ಞಾನಿಯಾದ ಬ್ರಾಹ್ಮಣನ ನಂತರವೇ ಸ್ಥಾನ ಪಡೆಯುತ್ತಾನೆ :-

ಅಂಧಸ್ಯ ಪಂಥಾಃ ಬಧಿರಸ್ಯ ಪಂಥಾಃ
ಸ್ತ್ರಿಯಃ ಪಂಥಾಃ ಭಾರವಹಸ್ಯ ಪಂಥಾಃ ।
ರಾಜ್ಞಃ ಪಂಥಾಃ ಬ್ರಾಹ್ಮಣೇನಾಸಮೇತ್ಯ
ಸಮೇತ್ಯತು ಬ್ರಾಹ್ಮಣಸ್ಯೈವ ಪಂಥಾಃ ॥ [24]

ಈ ರೀತಿಯಾದ ಸದಾಚಾರವೂ ಹಸುಗಳು, ಗರ್ಭಿಣಿಯರು, ಹಿರಿಯರು, ದೈಹಿಕವಾಗಿ ಅಸಮರ್ಥರಿಗೂ ಅನ್ವಯಿಸುತ್ತದೆ. ಈ ರೀತಿಯಾದ ವಿವರಣೆಯು ಸಾಂಕೇತಿಕವಾಗಿದ್ದು ಸಮಾಜವು ಕೆಲವು ವರ್ಗದವರಿಗೆ ಮಾತ್ರವೇ ನೀಡುತ್ತದೆ ಏಕೆಂದರೆ ಅವರು ಸುಸಂಸ್ಕೃತ ಸಮಾಜದಲ್ಲಿರಲು ಅಸಮರ್ಥರಾಗಿರುತ್ತಾರೆ. ಅದೇ ಆಚಾರ.

ಸಜ್ಜನ ನೀತಿಯೆಂದರೆ ಯಾರಾದರೂ ಕೇಳದಿದ್ದರೆ ತಾನಾಗಿಯೇ ಏನನ್ನು ಹೇಳಲು ಹೋಗಬಾರದು ಮತ್ತು ಕೆಟ್ಟ ಆಲೋಚನೆಯಿಂದ ಕೂಡಿದ ಪ್ರಶ್ನೆಯಾದರೆ ಅದನ್ನು ಉತ್ತರಿಸಲೂಬಾರದು. ನಾಪೃಷ್ಟಃ ಕಸ್ಯಚಿದ್ ಬ್ರೂಯಾನ್ ನ ಚಾನ್ಯೇನ ಪೃಚ್ಛತಃ [25].

ಅಷ್ಟು ಮಾತ್ರವಲ್ಲದೆ ಅವನು ತನ್ನ ಮಾತಿನಲ್ಲಿ ಪ್ರಾಮಾಣಿಕತೆಯನ್ನು ಉಳಿಸಿಕೊಂಡವನಾಗಿದ್ದು, ಸುಮ್ಮನೆಯೂ ಇರದೆ, ಸಭೆಯಲ್ಲಿ ತಪ್ಪಾಗಿಯೇ ಮಾತನಾಡಬಾರದು ಏಕೆಂದರೆ ಅದು ಪಾಪವಾಗುತ್ತದೆ.

ಸಭಾಂವಾ ನ ಪ್ರವೇಷ್ಟವ್ಯಂ ವಕ್ತವ್ಯಂ ವಾ ಸಮಂಜಸಂ ।
ಅಬ್ರುವನ್ ವಿಬ್ರುವನ್ ವಾಪಿ ನರೋಭವತಿ ಕಿಲ್ಬಿಷೀ ॥ [26]

ಇಂದಿನ ಪರಿಭಾಷೆಯಲ್ಲಿ ಹೇಳುವಂತಹ ಶೌಚಾಲಯಗಳು ಹಿಂದೆ ಇಲ್ಲದ್ದರಿಂದ ಜನರು ಸಾರ್ವತ್ರಿಕವಾಗಿಯೇ ಇಂದಿಗೂ ಹಳ್ಳಿಗಳ ಕಡೆಯಿರುವಂತೆ ತಮ್ಮ ದೈಹಿಕಕ್ರಿಯೆಗಳನ್ನು ಮಾಡುತ್ತಿದ್ದರು. ಸರಿಯಾದ ಆರೋಗ್ಯ ಹಾಗೂ ಪ್ರಕೃತಿಯ ಸ್ವಚ್ಛತೆಗೆ ಕೆಲವು ನಿಯಮಗಳು ಇತ್ತು. ಮೂತ್ರವಿಸರ್ಜನೆಯು ಮನೆಯಿಂದ ಸ್ವಲ್ಪ ದೂರದಲ್ಲಿ ಮಾಡಬೇಕು. ಅದು ಸೂರ್ಯನ ದಿಕ್ಕಿನೆಡೆಗೆ, ಬೆಂಕಿಯ ಕಡೆಗೆ, ಹಸುಗಳ ಕಡೆಗೆ, ಬ್ರಾಹ್ಮಣರ ಕಡೆಗೆ, ಸಾರ್ವಜನಿಕ ಸ್ಥಳಗಳಲ್ಲಿ, ನೀರಿನಲ್ಲಿ ಮಾಡಬಾರದೆಂಬ ನಿಯಮವಿತ್ತು. ನೀರಿನಲ್ಲಿ ಮೂತ್ರವಿಸರ್ಜನೆ ಮಾಡಿ ಅದನ್ನು ಕಲುಷಿತಗೊಳಿಸಬಾರದು. ನೀರಿನಲ್ಲಿ ಉಗುಳಬಾರದು. ಕೈಕಾಲನ್ನು ತೊಳೆದುಕೊಂಡ ನೀರನ್ನು, ಉಳಿದ ಅನ್ನವನ್ನು, ಇರುವ ಮನೆಯಿಂದ ದೂರ ಹಾಕಬೇಕಿತ್ತು.

ದೂರಾದಾವಸದಾನ್ ಮೂತ್ರಂ ದೂರಾದ್ ಪಾದಾವಸೇಚನಮ್ ।
ಉಚ್ಛಿಷ್ಟೋತ್ಸರ್ಜನಂ ಚೈವ ದೂರೇ ಕಾರ್ಯಂ ಹಿತೈಷಿಣಾ ॥ [27]

ಸಂಧಿಕಾಲದಲ್ಲಿನಿದ್ದೆ, ಓದು ಹಾಗೂ ಊಟವನ್ನು ನಿಷೇಧಿಸಲಾಗಿದೆ.

ಸಂಧ್ಯಾಯಾಂನ ಸ್ವಪೇದ್ ರಾಜನ್ ವಿದ್ಯಾಂ ನ ಚ ಸಮಾಚರೇತ್ ।
ನ ಭುಂಜೀತ ಚ ಮೇಧಾವೀ ತಥಾಯುರ್ವಿಂದತೇ ಮಹತ್ ॥ [28]

ಭರತ ರಾಮಾಯಣದಲ್ಲಿ ತನ್ನನ್ನು ತಾನು ರಾಮನನ್ನು ಕಾಡಿಗೆ ಕಳುಹಿಸುವ ಕಾರ್ಯದಲ್ಲಿ ಪ್ರಾಯಶ್ಚಿತ್ತವೆಸಗುವ ಸಮಯದಲ್ಲಿ ಸಂಧ್ಯಾಸ್ವಾಪದ ಬಗ್ಗೆ ಹೇಳುತ್ತಾನೆ –ನಾನು ಸಂಧ್ಯಾಕಾಲದಲ್ಲಿ ನಿದ್ದೆ ಮಾಡುವವನಿಗೆ ಬರುವ ಪಾಪವನ್ನು ತಡೆಯುವಂತಾಗಲಿ[29] ಎಂದು.

ದೈಹಿಕವಾಗಿ ಅಸಮರ್ಥರಾದವರನ್ನು ಹೀಯಾಳಿಸುವುದು ಸನ್ನಡತೆಯಲ್ಲ ಕುರುಡರು, ಕುಂಟರು, ಕಿವುಡರು ಹಾಗೂ ರೋಗಿಷ್ಠರು – ದೀನಾಂಧ ಪಂಗು ಬಧಿರಾ ನೋಪಹಾಸ್ಯಃ ಕದಾಚನ.[30] ಇದು ಜ್ಞಾನಬಾಹಿರವಾಗಿದ್ದು ಮುದುಕರು, ಕುರೂಪಿಗಳು, ಬಡವರು ಹಾಗೂ ಹೀನ ಕುಲದವರಿಗೂ ಒಳಗೊಳ್ಳುತ್ತದೆ.

ಹೀನಾಂಗಾನ್ ಅತಿರಿಕ್ತಾಂಗಾನ್ ವಿದ್ಯಾಹೀನಾನ್ ವಯೋಧಿಕಾನ್ ।
ರೂಪದ್ರವ್ಯ ವಿಹೀನಾಂಶ್ಚ ಜಾತಿಹೀನಾಶ್ಚನಾಕ್ಷಿಪೇತ್ ॥ [31]

ಆಚಾರವೆಂದರೆ ವಯಸ್ಸಾದವರಿಗೆ ಗೌರವ ತೋರುವುದೇ ಆಗಿದೆ. ಅವರು ಸಮಾಜಕ್ಕೆ ಭಾರವೆಂದು ಎಂದೂ ಭಾವಿಸಬಾರದು. ತಮ್ಮ ಅನುಭವದ ಹಿನ್ನಲೆಯಲ್ಲಿ ಅವರು ಗೌರವಕ್ಕೆ ಪಾತ್ರರು. ಯಾರು ಹಿರಿಯರಿಗೆ ಗೌರವ ತೋರಿಲ್ಲವೋ ಅಂತಹವರಿಗೆ ವಿಧಿಸಿರುವ ಶಿಕ್ಷೆ ನಮ್ಮ ಅನೇಕ ಪಾರಂಪರಿಕ ಗ್ರಂಥಗಳಲ್ಲಿ ಸಾಕಷ್ಟು ದೊರೆಯುತ್ತದೆ. ಅವರನ್ನು ಕೇವಲ ನಾಮದಿಂದಾಗಲೀ, ಏಕವಚನದಿಂದಲಾಗಲೀ ಸಂಬೋಧಿಸಬಾರದು. ತ್ವಂಕಾರಂ ನಾಮಧೇಯಂ ಚ ಜ್ಯೇಷ್ಠಾನಾಂ ಪರಿವರ್ಜಯೇತ್.[32]

ಆಚಾರವು ಮಾನವನ ಜೀವಿತದ ಪ್ರತಿ ವಿಭಾಗಕ್ಕೂ ಅನ್ವಯವಾಗುತ್ತವೆ. ಅದು ಯಾವುದನ್ನೂ ಹೇಳದೆ ಬಿಟ್ಟಿಲ್ಲ. ಅದು ಉಗುರನ್ನು ಕಚ್ಚುವುದು, ನೀರನ್ನು ಕೈಜೋಡಿಸಿ ಕುಡಿಯುವುದು ಜಲಂ ನಾಂಜಲಿನಾ ಪಿಬೇತ್[33], ಎರಡೂ ಕೈಗಳಿಂದ ತಲೆಯನ್ನು ಏಕಕಾಲದಲ್ಲಿ ಕೆರೆದುಕೊಳ್ಳುವುದು, ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇತ್ ಜಾತು ವೈಶಿರಃ.[34] ಕಾಲುಗಳನ್ನು ಅಗಲವಾಗಿ ಚಾಚಿಕೊಂಡು ಕುಳಿತುಕೊಳ್ಳುವುದು ನ ಕ್ಷಿಪ್ತಪಾದಜಂಘಶ್ಚ ಪ್ರಜ್ಞಾಸ್ತಿಷ್ಠೇತ್ ಕದಾಚನ, ಒಂದು ಕಾಲನ್ನು ಮತ್ತೊಂದು ಕಾಲಿನ ಮೇಲಿರಿಸುವುದು ಪಾದಂ ಪಾದೇನ ನಾಕ್ರಮೇತ್ [35] ಹಿರಿಯರೂ ಹಾಗೂ ದೇವರ ಕಡೆ ಕಾಲನ್ನು ಅಗಲಿಸುವುದು – ಗುರುದೇವಾನ್ ಪ್ರತಿತಥಾ ನಚ ಪಾದೌ ಪ್ರಸಾರಯೇತ್[36] ಚಿಕ್ಕ ಚಿಕ್ಕ ವಿಷಯಗಳ ಬಗ್ಗೆಯೂ ನಿಯಮಗಳಿದೆ. ಯಾವ ದಿಕ್ಕಿನಲ್ಲಿ ನಾವು ನಿದ್ರಿಸಬೇಕು, ಬೆಳಿಗ್ಗೆ

ಎದ್ದು ಏನನ್ನು ಮಾಡಬೇಕು, ಯಾವ ದಿಕ್ಕಿನಲ್ಲಿ ಯಾವಾಗ ಮೂತ್ರವಿಸರ್ಜನೆ ಮಾಡಬೇಕು, ಎಲ್ಲಿ ಹಾಗೂ ಹೇಗೆ ಸ್ನಾನ ಮಾಡಬೇಕು, ಹೇಗೆ ಯಾವ ದಿಕ್ಕಿನಲ್ಲಿ ಕುಳಿತು ಊಟ ಮಾಡಬೇಕು ಯಾವ ರೀತಿಯ ಆಹಾರ, ಇತ್ಯಾದಿಗಳು.

ಮನುಸ್ಮೃತಿಯಂತಹ ಸ್ಮೃತಿ, ವಾಮನ[37], ಪದ್ಮ[38], ವಿಷ್ಣು[39] ಮತ್ತು ಮಾರ್ಕಂಡೇಯ[40] ಪುರಾಣಗಳು ಆಚಾರದ ಬಗ್ಗೆ ಸಂಪೂರ್ಣ ಅಧ್ಯಾಯವನ್ನೇ ಒಳಗೊಂಡಿದೆ. ಸಂಕ್ಷಿಪ್ತವಾದ ವರದಿ ವಾಮನ ಪುರಾಣದಿಂದ ಇಲ್ಲಿ ನೀಡಲಾಗಿದೆ ನಮ್ಮ ಹಿರಿಯರು ಆಚಾರ ಅಥವಾ ಸದಾಚಾರದ ಬಗ್ಗೆ ಏನು ಹೇಳಿರುವರೆಂಬುದರ ಬಗ್ಗೆ.

ಮುಂಜಾನೆ ಎದ್ದು ಸುಪ್ರಭಾತ ಸ್ತೋತ್ರವನ್ನು ಪಠಿಸಬೇಕು. ಅನಂತರ ಅವನು ವಿಸರ್ಜನೆಗೆ ತೆರಳಬೇಕು. ಯಾವುದೇ ಕಾರಣಕ್ಕೂ ಮಾರ್ಗ ಮಧ್ಯದಲ್ಲಿ ದೇವತಾವಿಗ್ರಹ, ಗೋವು, ಬ್ರಾಹ್ಮಣ, ರಾಜಮಾರ್ಗ, ಚೌಕ, ಗೋಶಾಲೆಯು ಹತ್ತಿರ ಮೂತ್ರವಿಸರ್ಜನೆ ಮಾಡಬಾರದು. ಬೆಳಿಗ್ಗೆಯಾದರೆ ಅಥವಾ ಸಂಧಿಕಾಲದಲ್ಲಿ ಆದರೆ ಉತ್ತರದಿಕ್ಕಿಗಭಿಮುಖವಾಗಿ ಮೂತ್ರವಿಸರ್ಜನೆ ಮಾಡಬೇಕು, ರಾತ್ರಿಯಾದರೆ ದಕ್ಷಿಣಕ್ಕೆ ಅಭಿಮುಖ ಮಾಡಿ ಮೂತ್ರವಿಸರ್ಜಿಸಬೇಕು. ರಸ್ತೆಯಲ್ಲಾಗಲೀ, ಬೂದಿಯ ಮೇಲಾಗಲೀ, ಗೋಶಾಲೆಯಲ್ಲಾಗಲೀ, ಉತ್ತಿರುವ ಭೂಮಿಯಲ್ಲಾಗಲೀ, ನೀರಿನಲ್ಲಾಗಲೀ, ಇಟ್ಟಿಗೆ ಗೂಡಿನಲ್ಲಾಗಲೀ, ಪರ್ವತದ ಮೇಲಾಗಲೀ, ಹಾಳುಬಿದ್ದ ದೇವಾಲಯಗಳಲ್ಲಾಗಲೀ, ಹುತ್ತದಲ್ಲಾಗಲೀ, ಪ್ರಾಣಿಗಳು ವಾಸಿಸುವ ರಂಧ್ರಗಳಲ್ಲಾಗಲೀ, ನಿಂತಾಗಲೀ, ನಡೆಯುವಾಗಲಾಗಲೀ, ನದಿಯ ತೀರದಲ್ಲಾಗಲೀ ಮೂತ್ರವನ್ನು ವಿಸರ್ಜಿಸಬಾರದು, ನಗ್ನವಾಗಿ ಸ್ನಾನಮಾಡಬಾರದು. ಒಂದೇ ವಸ್ತ್ರ ಧರಿಸಿ ಊಟಮಾಡಬಾರದು, ಕೆಟ್ಟವರೊಡನೆ ಸಂಪರ್ಕ ಬೆಳೆಸಬಾರದು, ಸಂಧಿಯ ಕಾಲದಲ್ಲಿ ತಿನ್ನಬಾರದು, ಹಗಲು ಲೈಂಗಿಕ ಕ್ರಿಯೆಯಲ್ಲಿ ತೊಡಗಬಾರದು. ಕಾರಣವಿಲ್ಲದೆ ತಿರುಗಾಡಬಾರದು, ಕಾರಣವಿಲ್ಲದೆ ದಾನಕೊಡುವುದಾಗಲೀ, ಪ್ರಾಣಿಹತ್ಯೆಯನ್ನಾಗಲೀ ಮಾಡಬಾರದು. ಬೇರೆಯವರ ಹಣ, ಹೆಂಗಸರಿಂದ ದೂರವಿರಬೇಕು, ಬೇರೆಯವರ ಹೆಂಗಸರು ನಗ್ನರಾಗಿದ್ದರೆ ದೃಷ್ಟಿಸಿ ನೋಡಬಾರದು, ಕಳ್ಳರೊಡನೆ ಸಂಭಾಷಣೆ ಮಾಡಬಾರದು, ರಜಸ್ವಲೆಯಾದ ಹೆಂಗಸರನ್ನು ನೋಡಬಾರದು, ಅವಳೊಡನೆ ಸಂಪರ್ಕವಿಟ್ಟುಕೊಳ್ಳಬಾರದು, ಮಾತನಾಡಲೂ ಬಾರದು. ನಗ್ನವಾಗಿ ನಿದ್ರಿಸಬಾರದು, ತನ್ನ ಹೆಂಡತಿ ಊಟ ಮಾಡುವಾಗ ನೋಡಬಾರದು. ಅವಳು ಸೀನಿದಾಗಲಾಗಲೀ, ಆಕಳಿಸಿದಾಗಲಾಗಲೀ, ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುವಾಗಲಾಗಲೀ ತನ್ನನ್ನು ತಾನು ಮುಚ್ಚಿಕೊಳ್ಳದಿರುವಾಗಲಾಗಲೀ ನೋಡಬಾರದು. ನೀರಿಗೆ ಮೂತ್ರವನ್ನಾಗಲೀ, ಉಗುರನ್ನಾಗಲಿ, ಮಲವನ್ನಾಗಲೀ ಎಸೆಯಬಾರದು – ಮನುಸ್ಮೃತಿಯ ವಾಕ್ಯದೊಂದಿಗೆ ಹೋಲಿಸಿ – ನಾಪ್ಸು ಮೂತ್ರಪುರೀಷಂ ವಾ ಷ್ಠೀವನಂ ವಾ ಸಮುತ್ಸೃಜೇತ್ [41] ಬಟ್ಟೆಗಳನ್ನು ಅಶುದ್ಧವಾದ ದ್ರವ್ಯಗಳಿಂದ ಒಗೆಯಬಾರದು. ಅಥವಾ ಯಾವುದೇ ಅಶುದ್ಧವಾದುದರಿಂದಲೂ ಸಹ, ರಕ್ತದಿಂದಲಾಗಲೀ, ವಿಷಯುಕ್ತವಾದುದ ರಿಂದಲಾಗಲೀ, ಸೂರ್ಯೋದಯವನ್ನಾಗಲೀ, ಸೂರ್ಯಾಸ್ತವನ್ನಾಗಲೀ ವೀಕ್ಷಿಸಬಾರದು. ಗ್ರಹಣ ಸಮಯದಲ್ಲಾಗಲೀ, ನೀರಿನಲ್ಲಿ ಸೂರ್ಯ ಪ್ರತಿಫಲಿಸಿದಾಗಲಾಗಲೀ,

ಆಕಾಶ ಮಧ್ಯದಲ್ಲಿ ಇರುವಾಗಲಾಗಲೀ ಸೂರ್ಯನನ್ನು ನೋಡಬಾರದು. ಅವನು ಯಾವುದಾದರೂ ಅಶುದ್ಧವಾದುದನ್ನು ಮುಟ್ಟಿದರೆ, ಕೂಡಲೇ ಸ್ನಾನ ಮಾಡಬೇಕು. ಯಾರಾದರೂ ಹೆಣ ಹೊತ್ತುಕೊಂಡು ಹೋಗುವವರೊಂದಿಗೆ ಸಂಪರ್ಕಿಸಿದರೆ ಸ್ನಾನ ಮಾಡಬೇಕು. ಕರು ಹಾಲು ಕುಡಿಯುತ್ತಿರುವಾಗ ಹಸುವಿಗೆ ತೊಂದರೆ ಕೊಡಬಾರದು. ಅದನ್ನು ಯಾರಿಗೂ ಹೇಳಲೂಬಾರದು. ಎಣ್ಣೆಯಿಂದ ಕೂಡಿದ ಯಾವ ಪದಾರ್ಥವನ್ನೂ ತಿನ್ನಬಾರದು. ಅವನು ಹೊಟ್ಟೆಬಾಕನಾಗಿರಬಾರದು, ಬೆಳಿಗ್ಗೆ ಬಹಳ ಬೇಗ ತಿನ್ನಬಾರದು. ಹಾಗೆಯೇ ರಾತ್ರಿ ಬಹಳ ನಿಧಾನವಾಗಿಯೂ ತಿನ್ನಬಾರದು. ತನ್ನ ಎರಡು ಕೈಗಳಿಂದ ನೀರನ್ನು ಒಟ್ಟಿಗೆ ಮಾಡಿ ಕುಡಿಯಬಾರದು. ತೊಡೆಯ ಮೇಲಿಟ್ಟುಕೊಂಡು ಊಟ ಮಾಡಬಾರದು, ಕುತೂಹಲತೆಯನ್ನು ವಿನಾಕಾರಣ ತೋರಿಸಬಾರದು. ಬಿಳಿಯ ಹಿತ್ತಾಳೆಯಲ್ಲಿ ತೊಳೆಯಬಾರದು. ಮುರಿದುಹೋದ ಸಾಮಗ್ರಿಯಲ್ಲಿ ತಿನ್ನಬಾರದು. ಹಳಸಿದ ಪದಾರ್ಥವನ್ನು ತಿನ್ನಬಾರದು, ಬೇರೆಯವರು ಉಪಯೋಗಿಸಿದ ಪಾದರಕ್ಷೆಯನ್ನಾಗಲೀ, ಬಟ್ಟೆಯನ್ನಾಗಲೀ, ಆಭರಣಗಳನ್ನಾಗಲೀ, ಹಾರಗಳನ್ನಾಗಲೀ, ನೀರಿನ ಪಾತ್ರೆಯನ್ನಾಗಲೀ ಉಪಯೋಗಿಸಬಾರದು. ಉಗುರನ್ನಾಗಲೀ, ಕೂದಲನ್ನಾಗಲೀ ಕಚ್ಚಬಾರದು.

ಈ ರೀತಿ ಈ ವಿವರಣೆಯು ಸಾಗುತ್ತದೆ. ನಾಗರೀಕನಾದವನು ಮೃದುವಾಗಿ ಮಾತನಾಡಬೇಕು, ಬೇರೆಯವರಿಗೆ ಸಹಾಯ ಮಾಡಬೇಕು, ಮನೆತನದ ಸದಾಚಾರಗಳನ್ನನುಸರಿಸಬೇಕು, ಹಿರಿಯರನ್ನು ಗೌರವಿಸಬೇಕು, ಬೇರೆಯವರಿಂದ ಬೈಗಳಿಗೆ ಒಳಗಾಗದಂತೆ ತನ್ನನ್ನು ತಾನು ನಡೆಸಿಕೊಳ್ಳಬೇಕು. ದೇವತೆಗಳ ಆಶೀರ್ವಾದ ಪಡೆಯಬೇಕು. ಇಂತಹ ಆಚಾರವನ್ನು ಪರಂಪರೆ ವಿಧಿಸಿರುವ ಶೃತಿ, ಹಾಗೂ ಸ್ಮೃತಿಗಳಲ್ಲಿ ನಿರೂಪಿಸಿರುವುದನ್ನು ನಾಗರೀಕರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅದರಿಂದ ಲೋಕದಲ್ಲಿ ಕೀರ್ತಿವಂತರಾಗುತ್ತಾರೆ:- ಶೃತಿಸ್ಮೃತ್ಯುದಿತಂ ಧರ್ಮಂ ಅನುತಿಷ್ಠನ್ ಹಿ ಮಾನವಃ ಇಹಕೀರ್ತಿಮವಾಪ್ನೋತಿ[42] ಅದೇ ಅವನ ಜೀವಿತದಲ್ಲಿ ಮಧ್ಯಮ ರಂಗವಾಗುತ್ತದೆ.

---

ಆಕರ ಗ್ರಂಥಗಳು

1) ವಸಿಷ್ಠಸ್ಮೃತಿ.6.3 2) ಮನುಸ್ಮೃತಿ.1.108 3) 2.24.98 4) 3.250.4. 5) ಅದೇ.271.1.4 6)ಅದೇ 7) ಮನುಸ್ಮೃತಿ.1.107 8) ಅದೇ.1.108.1. 9) ಅದೇ 10) ಉದ್ಯೋಗಪರ್ವನ್.35.42. ವಸಿಷ್ಠಸ್ಮೃತಿಯಲ್ಲಿ ಸಾಲುಗಳಲ್ಲಿ ಸ್ವಲ್ಪ ಪರಿವರ್ತನೆಯಿದೆ.6.3. ಛಂದಾಂಸ್ಯೇವಂ ಮೃತ್ಯುಕಾಲೇ ತ್ಯಜಂತಿ ನೀಡಂ ಶಕುಂತಾ ಇವ ಜಾತಪಕ್ಷಾಃ 11) ವಿಷ್ಣುಪುರಾಣ.3.11.3 12) ಐ.155 13) 1.108 14) ಐಐ.18 15) ಐಐ.17 16) ನಿರುಕ್ತ.1.4.12. 17) ತೈತ್ತಿರೀಯೋಪನಿಷತ್.ಶಿಕ್ಷಾವಲ್ಲೀ 18) ಅನುಶಾಸನಪರ್ವನ್. 104.64 19) ಶಾಂತಿಪರ್ವನ್.195.25 20) ವನಪರ್ವನ್.2.56 21) ಅದೇ.2.54 22) ಶಾಂತಿಪರ್ವನ್.186.5 23) ಐಐಐ.56. 24) ವನಪರ್ವನ್.133.1. 25) ಶಾಂತಿಪರ್ವನ್.287.35 26) ಮನುಸ್ಮೃತಿ.8.13 27) ಅನುಶಾಸನ ಪರ್ವನ್.104. 82. 28) ಅದೇ.104.19 29) ಅಯೋಧ್ಯಾಕಾಂಡ.75.44. 30) ಶುಕ್ರನೀತಿ. ಐಐಐ.15 31) ಮನುಸ್ಮೃತಿ. ಐ.141 32) ಶಾಂತಿಪರ್ವನ್.193.25 33) ಮಾರ್ಕಂಡೇಯ ಪುರಾಣ 34.113.ಒಂದು ಕೈಯಿಂದ ನೀರನ್ನು ಕುಡಿಯವುದು ವಿಹಿತವಾದುದು. ಅದು ಬಲಗೈ. ದಕ್ಷಿಣಂತು ಕರಂ ಕೃತ್ವಾ ಗೋಕರ್ಣಾಕೃತಿವತ್ ಪುನಃ ತ್ರಿಃಪಿಬೇತ್ ಈಪ್ಸಿತಂ ತೋಯಂ, ಹಾರೀತಸ್ಮೃತಿ.4.26. 34) ಅದೇ.34.44. 35) ಅದೇ.34.45 36) 34.112. 37) ನಾಲ್ಕನೆಯ ಅಧ್ಯಾಯ 38) ಸ್ವರ್ಗಖಂಡ.29.31ನೇ ಅಧ್ಯಾಯಗಳು 39) 3.11. 40) 34ನೇ ಅಧ್ಯಾಯ 41) ಮನುಸ್ಮೃತಿ.4.56 42) ಅದೇ.2.9.

# 6. ಕಾರುಣ್ಯ

ಆಂಗ್ಲಭಾಷೆಯಲ್ಲಿ ಬೇರೆಯವರಿಗೆ ಸಹಾಯ ಮಾಡುವುದು ಎಂಬರ್ಥದಲ್ಲಿ ಪಿಟಿ, ಮರ್ಸಿ ಮತ್ತು ಕಂಪ್ಯಾಷನ್ ಎಂಬ ಮೂರು ಪದಗಳಿದ್ದರೆ ಸಂಸ್ಕೃತದಲ್ಲಿ ಅದಕ್ಕೆ ಎರಡುಪಟ್ಟು ಶಬ್ದಗಳಿವೆ. ಅನುಕಂಪಾ, ಅನುಕೂಲ, ಅನುಗ್ರಹ, ಕರುಣಾ, ಕೃಪಾ ಮತ್ತು ದಯಾ ಇದೇ ಸಂಸ್ಕೃತ ಸಾಹಿತ್ಯ ಈ ಪದಕ್ಕೆ ನೀಡುವ ಪ್ರಾಮುಖ್ಯತೆಗೆ ಸಾಕ್ಷಿಯಾಗಿದೆ. ಸಾಮಾನ್ಯವಾಗಿ ಈ ಸಂಸ್ಕೃತ ಪದಗಳು ಪರ್ಯಾಯವಾಗಿ ಸ್ವೀಕರಿಸಿದ್ದರೂ ಸಹ ಅದು ಹಾಗೇನಲ್ಲ. ಅದಕ್ಕಿರುವಂತಹ ಅಂತರಾರ್ಥವು ಅದಕ್ಕೆ ಇರುವ ನಿಜವಾದ ಅರ್ಥವನ್ನು ನಿರೂಪಿಸಲು ಕಷ್ಟವಾಗುತ್ತದೆ. ಆದರೆ ಅತ್ಯಂತ ಜನಜನಿತವಾದ ಪದವೆಂದರೆ ದಯಾ, ತುಲಸೀದಾಸರು ಶ್ರೇಷ್ಠ ಸಂತ ಕವಿಗಳು ದಯೆಯೇ ಧರ್ಮದ ಮೂಲವೆಂದು ಬಣ್ಣಿಸುತ್ತಾರೆ.

ದಯಾಧರ್ಮಕಾ ಮೂಲ ಹೈ ಪಾಪಮೂಲ್ ಅಭಿಮಾನ್ ।
ತುಲಸೀದಯಾ ನಾ ಚೋರಿಯೇ ಜಬ್‌ಲಗ್‌ಘಟಾಮೇ ಪ್ರಾಣ್ ॥

ದಯೆಯೇ ದರ್ಮದ ಮೂಲವು, ಅಹಂಕಾರ ಅಥವಾ ಜಂಭವೇ ಪಾಪದ ಮೂಲವುಎಂದೆನ್ನುತ್ತಾರೆ ತುಳಸೀ. ಎಲ್ಲಿಯವರೆಗೂ ನಿನ್ನಲ್ಲಿ ಪ್ರಾಣವಿರುವುದೋ ಅಲ್ಲಿಯವರೆಗೂ ದಯೆಬಿಡಬೇಡಿ ಎನ್ನುತ್ತಾರೆ.

ಎಲ್ಲ ಜೀವಿಗಳೂ ಸಮಾನರು ಎಂಬ ಬುದ್ಧಿಯಿದ್ದರೆ ಮಾತ್ರವೇ ದಯೆಯು ಸಾಧ್ಯ. ಆ ಮನೋಭಾವನೆಯಿಂದಲೇ ತನ್ನನ್ನು ಬೇರೆಯವರೊಂದಿಗೆ ಭಾವಿಸಬಹುದು ಮತ್ತು ಅವರ ದುಃಖ ಹಾಗೂ ಪೀಡೆಗಳನ್ನು ಅರಿಯಬಹುದು. ಹೇಗೆ ಮಾನವರು ತಮ್ಮ ಕಷ್ಟಗಳನ್ನು ಪರಿಹರಿಸಿಕೊಳ್ಳಲು ಬಯಸುವರೋ ಅದಕ್ಕೆ ಬೇಕಾದಂತಹ ಪ್ರಯತ್ನ ಮಾಡಿ ಹಾಗೆಯೇ ಅವರು ಬೇರೆಯವರ ದುಃಖನಿವಾರಣೆಗೂ ಪ್ರಯತ್ನಿಸುವರು. ಅದೇ ಸಮದೃಷ್ಟಿ. ಅದೇ ಅವನನ್ನು ಎಲ್ಲವನ್ನೂ ಮಾಡಲು ಪ್ರೇರೇಪಿಸುತ್ತದೆ. ತನ್ನ ಜೀವವನ್ನೂ ಸಂಚಕಾರವಾಗಿಟ್ಟು ನದಿಯಲ್ಲಿ, ಮುಳುಗುತ್ತಿರುವವರನ್ನು, ಭವನದ ಬೆಂಕಿಯಲ್ಲಿ ಸಿಲುಕಿರುವವರನ್ನೂ ಬದುಕಿಸಲು ತನ್ನೆಲ್ಲಾ ಹಣವನ್ನೂ ತೆತ್ತು ಬೇರೆಯವರಿಗೆ ಸಹಾಯ ಮಾಡಲು ಬಯಸುವವರು ಅವರಾಗುತ್ತಾರೆ. ಬೇರೆಯವರು ಅವನಿಗೆ ಪರಿಚಿತರೋ ಅಥವಾ ಅಪರಿಚಿತರೋ ಎನ್ನುವುದು ಮುಖ್ಯವಲ್ಲ. ಸರಿಯಾದ ಸಮಯಕ್ಕೆ ಬೇಕಾಗಿರುವ ಸರಿಯಾದ ಸ್ಫುರಣೆಯೇ ಅದಕ್ಕೆ ಕಾರಣವಾಗುತ್ತದೆ. ಅದೇ ದಯೆ. ವಾಯುಪುರಾಣ ಅದನ್ನು ಹೀಗೆ ನಿರೂಪಿಸುತ್ತದೆ :-

ಆತ್ಮವತ್‌ಸರ್ವಭೂತೇಷು ಯಾ ಹಿತಾಯ ಅಹಿತಾಯ ಚ ।
ಸಮಾಪ್ರವರ್ತತೇ ದೃಷ್ಟಿಃ ಕೃತ್ಸ್ನಾಹ್ಯೇಷಾ ದಯಾಸ್ಮೃತಾ ॥ [1]

ಎಲ್ಲರನ್ನೂ ಒಂದೇ ರೀತಿಯಲ್ಲಿ ಒಳ್ಳೆಯವರನ್ನೂ ಕೆಟ್ಟವರನ್ನೂ ಕಾಣುವ ಮನೋದೃಷ್ಟಿಯೇ ದಯೆ.

ಭವಿಷ್ಯ ಪುರಾಣ ಈ ರೀತಿ ನಿರೂಪಿಸುತ್ತದೆ.

ಅಪಾರೇಬಂಧುವರ್ಗೇ ವಾ ಮಿತ್ರೇ ದ್ವೇಷ್ಟರಿ ವಾ ಸದಾ ।
ಆತ್ಮವತ್‌ವರ್ತಮಾನಂ ಯತ್‌ಸ್ಯಾತ್‌ಸಾ ದಯಾ ಪರಿಕೀರ್ತಿತಾ ॥[2]

ಹೊರಗಿನವನಾಗಲೀ, ಬಂಧುವಾಗಲೀ, ಸ್ನೇಹಿತನಾಗಲೀ, ನಮ್ರನಾಗಲೀ ಯಾರು ಎಲ್ಲರನ್ನೂ ತನ್ನಂತೆ ಭಾವಿಸುವರೋ ಅವರೇ ದಯಾವಂತರು.

ಅಪ್ಟೆಯವರ ಸಂಸ್ಕೃತ-ಆಂಗ್ಲ-ಕೋಶವು ಒಂದು ಶ್ಲೋಕವನ್ನು ಅದರ ಮೂಲಕೊಡದೆ ಉದ್ಧರಿಸುತ್ತದೆ ಅದರ ಪ್ರಕಾರ ದಯೆ ಎಂದರೆ :-

ಯತ್ನಾದಪಿ ಪರಕ್ಲೇಶಂ ಹರ್ತುಂಯಾ ಹೃದಿ ಜಾಯತೇ ।
ಇಚ್ಛಾಭೂಮಿಸುತಶ್ರೇಷ್ಠ ಸಾದಯಾ ಪರಿಕೀರ್ತಿತಾ ॥

ಮನಸ್ಸಿನಲ್ಲಿ ಬೇರೆಯವರ ಕಷ್ಟದೂರಮಾಡುವ ಯಾವ ಇಚ್ಛೆ ಹುಟ್ಟುತ್ತದೆಯೋ ಅದೇ ದಯೆ.

ಈ ಎಲ್ಲಾ ವ್ಯಾಖ್ಯಾನಗಳನ್ನೂ ಕ್ರೋಢೀಕರಿಸಿ ಹೇಳುವುದಾದರೆ, ದಯೆಯೆಂದರೆ ಭೇರೆಯವರ ಕಷ್ಟಗಳನ್ನು ನಿವಾರಿಸಲು ಉಂಟಾಗುವಂತಹ ಪ್ರಯಾಸ.

ಮೇಲೆ ತಿಳಿಸಿದಂತೆ ದಯೆ ಎನ್ನುವುದಕ್ಕೆ ವ್ಯಾಪಕವಾದ ಅರ್ಥವಿದೆ. ಅದೇ ವ್ಯಾಪ್ತಿಯಲ್ಲಿ ಬರುವಂತಹದು ಸರ್ವಭೂತ. ಎಲ್ಲ ಜೀವಿಗಳೂ ಕೇವಲ ಕೆಲವರು ಮಾತ್ರವಲ್ಲ. ದಯಾ ಎಂಬ ಪದಕ್ಕೆ ಸಮಾನವಾದುದೆಂದರೆ ಸರ್ವಭೂತವೇ ಅದನ್ನು ಪರ್ಯಾಯವಾಗಿ ಸ್ವೀಕರಿಸಬಹುದು. ಸಾಮಾನ್ಯವಾಗಿ ನಾವು ಸರ್ವಭೂತಕೃತಾ ಅಥವಾ ಸರ್ವಭೂತಕಾರುಣ್ಯ ಎಂಬ ಪದಗಳನ್ನು ಬಳಸುವುದಿಲ್ಲ. ಆದರೆ ''ಸರ್ವಭೂತಾನುಕಂಪಾ'' ಎಂಬುದೊಂದೇ ಪದ ನಮಗೆ ಗಮನಕ್ಕೆ ಬರುವಂತಹದು.

ಆದ್ದರಿಂದ ಆಂಗ್ಲ ಪದಗಳಾದ ಪಿಟಿ, ಮರ್ಸಿ ಅಥವಾ ಕಂಪ್ಯಾಷನ್ ಎಂಬುದಕ್ಕೆ ಸಂವಾದಿಯಾದ ಸಂಸ್ಕೃತ ಪದಗಳನ್ನು ಅದರ ಒಳಾರ್ಥಗಳನ್ನು ಹುಡುಕುವುದು ಒಳ್ಳೆಯ ಕೆಲಸವಾಗಿರುತ್ತದೆ. ಇಂತಹ ಅತ್ಯಗತ್ಯವಾದ ಕೆಲಸವನ್ನು ಪೂನಾದ ಡೆಕ್ಕನ್ ಕಾಲೇಜಿನಲ್ಲಿ ತಯಾರಾಗುತ್ತಿರುವ ಚಾರಿತ್ರಿಕ ಅಂಶಗಳ ಹಿನ್ನಲೆಯಲ್ಲಿ ಸಂಸ್ಕೃತ ನಿಘಂಟುಮಾತ್ರ ನೀಡಬಲ್ಲದು.

ಈಗ ನಾವು ಪಿಟಿ, ಮರ್ಸಿ ಅಥವಾ ಕಂಪ್ಯಾಷನ್ ಎಂಬ ಪದಗಳನ್ನು ಗಮನಿಸೋಣ. ಮೊದಲನೆಯದೇ ಅನುಕಂಪೆ. ಪಾಣಿನಿ ಅದನ್ನು ''ಅನುಕಂಪಾಯಾಂ''[3] ಎಂಬ ಸೂತ್ರದಲ್ಲಿ ಬಳಸುತ್ತಾನೆ. ಅಲ್ಲಿ ಕನ್ ಪ್ರತ್ಯಯವು ಅನುಕಂಪಾ ಸೂಚಕವಾಗಿದೆ. ಅದರ ವ್ಯಾಖ್ಯಾನವಾದ ಬಾಲ ಮನೋರಮಾ ಅದನ್ನು ''ದಯಾ'' ಎಂದು ವಿವರಿಸುತ್ತದೆ. ತತ್ವಬೋಧಿನೀ

ವ್ಯಾಖ್ಯಾನವೂ ಸಹ ಅಮರವಾಕ್ಯವನ್ನೇ ಉದ್ಧರಿಸುತ್ತದೆ – ''ಕೃಪಾದಯಾನುಕಂಪಾಸ್ಯಾತ್.'' ಆದರೆ ಉದಾಹರಣೆಯಲ್ಲಿರುವ ಪುತ್ರಕಾಪದವು ಪ್ರೀತಿಪಾತ್ರ ಎಂಬ ಅರ್ಥದಲ್ಲಿ ಬಳಕೆಯಾಗಿದ್ದು, ಪುತ್ರಕಾ ಎಂದರೆ ಪ್ರೀತಿಯ ಮಗ ಎಂದರ್ಥವಾಗುತ್ತದೆ. ಆದರೆ ಪುತ್ರಕ ಎಂಬ ಉದಾಹರಣೆಯಿಂದ ಪ್ರೀತಿಯನ್ನು ಹೊರಸೂಸುವುದರಿಂದ ಅದು ಪ್ರೀತಿಪಾತ್ರ ಎಂದು ಸಾಬೀತಾಗುತ್ತದೆ. ಇದರಿಂದ ಬೇರೆಯವರ ಬಗ್ಗೆ ಅನುಕಂಪ ತೋರುವುದು ಎಂಬ ಅರ್ಥ ಮಾಡುವುದು ಕಷ್ಟವಾಗುವುದಿಲ್ಲ ಉದಾಹರಣೆಗೆ ''ಕಥಂ ಬ್ರಾಹ್ಮಣೀ ಮಾಂ ಅನುಕಂಪತೇ'' ಈ ಬ್ರಾಹ್ಮಣ ಹೆಂಗಸು ನನ್ನ ಬಗ್ಗೆ ಅನುಕಂಪವುಳ್ಳವಳಾಗಿದ್ದಾಳೆ ಅಥವಾ ''ಕಿಂ ಉಜ್ಝಿಹಾನಜೀವಿತಾಂ ಮಾಮ್ ಅನುಕಂಪತೇ''[5] ಜೀವನದ ಆಸೆಯನ್ನು ಬಿಟ್ಟಿರುವಂತಹ ನನ್ನ ಬಗ್ಗೆ ಏಕೆ ನೀನು ಅನುಕಂಪ ತೋರಿಸುತ್ತಿರುವೆ? ಅನುಕಂಪವಿರುವುದು ಸಹಜವೇ ಆದರೂ ಹಿರಿಯ, ಉತ್ಕೃಷ್ಟ, ಶಕ್ತಿಶಾಲಿಯಾದವನು ಕಿರಿಯ, ನಿಕೃಷ್ಟ, ಬಲಹೀನನ ಬಗ್ಗೆ ತೋರುವುದೆಂದು ಸಿದ್ಧವಾಗುತ್ತದೆ. ದೇವಧೇನುವಾದ ನಂದಿನಿಯು ಈ ಪದವನ್ನು ಬಳಸುವಾಗಲೂ ಅದು ತನಗೇ ಸಂಬೋಧಿಸುತ್ತದೆ :- ಭಕ್ತ್ಯಾಗುರೌಮಯ್ಯನು ಕಂಪಯಾಚ [6] ಅದು ದಿಲೀಪನ ಅಣತಿಯಂತೆ ತನ್ನನ್ನು ಅವನೊಡನೆ ವಿನಿಮಯ ಮಾಡಿಕೊಳ್ಳುವಾಗ ಉತ್ಕೃಷ್ಟರೊಂದಿಗೆ ನಿಕೃಷ್ಟ ವಿನಿಮಯವೆಂದೇ ಭಾವಿಸಿದೆ. ''ಭೂತಾನುಕಂಪಾ ತವಚೇತ್''ಎಂಬಲ್ಲೂ ಸಹ ಇದೇ ಅರ್ಥವಿದೆ. ''ಅನುಕ್ರೋಶ'' ಎಂಬ ಪದವು ಸಾಹಿತ್ಯದಲ್ಲಿ ''ಅನುಗ್ರಹ'', ''ಕೃಪಾ'' ಎನ್ನುವುದಕ್ಕಿಂತಲೂ ಕಡಿಮೆ ಬಳಕೆಯಲ್ಲಿದೆ. ಕಾಳಿದಾಸ ತನ್ನ ಎರಡು ಕೃತಿಗಳಲ್ಲಿ ಅದನ್ನು ಬಳಸುತ್ತಾನೆ – ಅಭಿಜ್ಞಾನ ಶಾಂಕುಂತಲ ಮತ್ತು ಮೇಘದೂತ. ಮೊದಲನೆಯದರಲ್ಲಿ ಮೂರು ಬಾರಿ, ಎರಡನೆಯದರಲ್ಲಿ ಒಂದು ಬಾರಿ. ಮೂರುಬಾರಿಗಳಲ್ಲಿ ಮೊದಲನೆಯದೆಂದರೆ ದುಃಷ್ಯಂತ ಕಾಮಪೀಡಿತನಾಗಿ ಕಾಮದೇವನನ್ನು ಕುರಿತು ತಪ್ಪು ಕಂಡುಹಿಡಿಯುವಾಗ. ಕಾಮನಿಗೆ ತನ್ನ ಬಗ್ಗೆ ಅನುಕ್ರೋಶವಿಲ್ಲವೆಂದು – ಭಗವಾನ್ ಕಾಮದೇವ ನತೇ ಮಯ್ಯನುಕ್ರೋಶಃ[7] ಎರಡನೆಯ ಸಂದರ್ಭವೆಂದರೆ ಪ್ರಿಯಂವದೆಯು ಶೀಘ್ರಕೋಪಿಯಾದ ದೂರ್ವಾಸ ಶಕುಂತಲೆಗೆ ಶಾಪಕೊಟ್ಟ ಸಂದರ್ಭದಲ್ಲಿ, ದುಷ್ಯಂತನಲ್ಲೇ ನೆಲೆಸಿರುವ ಮನವುಳ್ಳ ಅವಳನ್ನು ಆ ರಾಜ ಮರೆಯಲಿ ಎಂದು. ಕಿಮಪಿ ಪುನಃ ಸಾನುಕ್ರೋಶಃ ಕೃತಃ[8] ಅದರಿಂದ ಅವನು ಸ್ವಲ್ಪ ಮೆತ್ತಗಾದ. ಆಪ್ಟೆ''ಅನುಕ್ರೋಶ'' ಎನ್ನುವುದನ್ನು ಅನುಕಂಪ ಅಥವಾ ಕರುಣೆ ತೋರುವುದೆಂದು ಅರ್ಥೈಸುತ್ತಾನೆ. ಅವನು ಅನುಕ್ರೋಶ ಹಾಗೂ ಅನುಕಂಪ ಪದಗಳ ನಿಷ್ಪತ್ತಿ ಸಾಮ್ಯವನ್ನು ತೋರಿಸುತ್ತಾನೆ. ಅನುಕ್ರೋಶ ''ಕೃಷ್'' ಧಾತುವಿನಿಂದ ಜನ್ಯವಾದದ್ದು ''ಅಳುವುದು'' ಆದರೆ ಮುಂದಿನ ಪದ ''ಸಿಮ್'' ಇಂದ ನಿಷ್ಪನ್ನವಾಗಿದ್ದು ಜೊತೆಯಾಗಿರುವುದು ಎಂಬರ್ಥದಲ್ಲಿ ಬಳಕೆಯಾಗಿದ್ದು ''ಒದ್ದಾಡುವುದು'', ''ಅನುಭವಿಸುವುದು'' ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಮೂರನೆಯ ಬಾರಿ ಈ ಪದವು ಬರುವ ಪ್ರಸಂಗವೆಂದರೆ ಶಕುಂತಲೆ ತನ್ನ ಎಲ್ಲಾ ಅನರ್ಥಗಳಿಗೂ ಜನ್ಮಾಂತರದ ಪಾಪದ ಮೇಲೆ ಆರೋಪಿಸುವುದು – ಸಮಾಕ್ರೋಶೋಽಪಿ ಆರ್ಯಪುತ್ರೋ ಮಯಿ ವಿರಸಃ ಸಂವೃತ್ತಃ[9]. ವ್ಯಾಖ್ಯಾನಕಾರರಾದ ರಾಘವಭಟ್ಟ ವಿವರಿಸುವಂತೆ ಸಾನುಕ್ರೋಶ ।।ಸಕೃಪಾ।।. ಅಂದರೆ ಇಬ್ಬರೂ ಒಂದೇ

ಅರ್ಥದಲ್ಲೇ ತಾತ್ಪರ್ಯವುಳ್ಳವರು. ಇಲ್ಲಿ ಕೃಪಾ ಎಂದರೆ ಕರುಣೆ ಅಥವಾ ದಯೆ ಎಂಬ ಮೂಲಾರ್ಥದಲ್ಲಿ ಸಾಮಾನ್ಯವಾಗಿ ಕರುಣಾಳುವಾದ ದುಷ್ಯಂತ ಈಗ ಶಕುಂತಲೆಯ ಬಗ್ಗೆ ಕಠಿಣಾಳುವಾದ ಋಷಿಗಳು ಅವಳನ್ನು ಅರಮನೆಗೆ ಕರೆತಂದಾಗ, ಮೇಘದೂತದಲ್ಲಿ ಕೊನೆಯ ಶ್ಲೋಕದಲ್ಲಿ ಯಕ್ಷನು ತನ್ನ ಸಂದೇಶವನ್ನು ಅಂತ್ಯಗೊಳಿಸುವಾಗ ಮೋಡವು ಅನುಕ್ರೋಶ ವಹಿಸಬೇಕೆನ್ನುತ್ತಾನೆ – ಮಯ್ಯನುಕ್ರೋಶಬುಧ್ಯಾ[10] (ಮಲ್ಲಿನಾಥ ಅನುಕ್ರೋಶ ಎಂಬ ಪದಕ್ಕೆ ದಯೆ ಎಂದೇ ಅರ್ಥ ಮಾಡುತ್ತಾನೆ). ಅದು ಸ್ನೇಹಭಾವದಿಂದ ಬಂದದ್ದು ಅಥವಾ ತನ್ನ ಪ್ರಿಯೆಯಿಂದ ಅಗಲುವಿಕೆಯಾದದ್ದು ಸೌಹಾರ್ದಾದ್ವಾ ವಿದುರ ಇತಿವಾ.

ಅನುಗ್ರಹ ಎನ್ನುವುದು ದಯೆಯಲ್ಲ, ಕರುಣೆಯಲ್ಲ ಆದರೆ ಅದು ಮನೋಹರತೆ ಮತ್ತು ಕೃಪೆ. ಸಾಹಿತ್ಯದಲ್ಲಿ ಅದರ ಬಳಕೆ ಅದನ್ನು ಸ್ಪಷ್ಟೀಕರಿಸುತ್ತದೆ. ಕಾಳಿದಾಸ ನಾಲ್ಕು ಬಾರಿಯಾದರೂ ಅದರ ಪ್ರಯೋಗವನ್ನು ತನ್ನ ಕೃತಿಗಳಲ್ಲಿ ಮಾಡಿದ್ದಾನೆ. ರಘುವಂಶದಲ್ಲಿ ಎರಡು ಬಾರಿ, ಒಂದು ಸಲ ಕುಮಾರ ಸಂಭವದಲ್ಲಿ ಹಾಗೂ ಒಂದು ಸಲ ಅಭಿಜ್ಞಾನ ಶಾಕುಂತಲದಲ್ಲಿ. ರಘುವಂಶದಲ್ಲಿ ಬರುವ ಮೊದಲ ಸನ್ನಿವೇಶವೆಂದರೆ ಸಿಂಹವು ನಂದಿನಿಯನ್ನು ಅಡ್ಡಗಟ್ಟಿ, ತಾನು ಶಿವಗಣವೆಂದೂ ಕುಂಬೋಧರನೆಂದೂ ಆದರೆ ಹಿಂಭಾಗ ಶಿವನು ತನ್ನ ವಾಹನವಾದ ಎತ್ತನ್ನೇರುವಾಗ ಅನುಗ್ರಹಿಸಿರುವನೆಂದು ಹೇಳುತ್ತದೆ – ಕೈಲಾಸಗೌರಂ ವೃಷಮಾರುರುಕ್ಷೋಃ ಪಾದಾರ್ಪಣಾನುಗ್ರಹ ಪೂತ ಪೃಷ್ಠಂ ಅವೇಹಿಮಾಂ ಕಿಂಕರಮಷ್ಟಮೂರ್ತೇಃ[11]

ಎರಡನೆಯ ಬಾರಿ ಶ್ರವಣನ ತಂದೆ ದಶರಥನಿಗೆ ಶಾಪನೀಡುವ ಪ್ರಸಂಗದಲ್ಲಿ ತಪ್ಪಾದ ಗ್ರಹಿಕೆಯಿಂದ ಮಗನನ್ನು ಕೊಂದದ್ದರಿಂದ ದಶರಥನೂ ಕೊನೆಯ ಕಾಲದಲ್ಲಿ ಮಕ್ಕಳು ಹತ್ತಿರವಿಲ್ಲದಾಗ ಸಾಯುವಿ ಎಂಬ ಮಾತು ದಶರಥನಿಗೆ ವರವಾಗಿ ಪರಿಣಮಿಸುತ್ತದೆ. ಏಕೆಂದರೆ ಇಲ್ಲಿಯವರೆಗೂ ಅವನಿಗೆ ಮಕ್ಕಳೇ ಇಲ್ಲದಿರುವುದರಿಂದ. – ಶಾಪೋಪ್ಯದೃಷ್ಟತ್ ನಯನಪದ್ಮಶೋಭೇ ಸಾನುಗ್ರಹೋ ಭಗವತಾಮಯಿ ಪತಿತೋಯಂ[12] ಕುಮಾರಸಂಭವದ ಸಂದರ್ಭವೆಂದರೆ ಕಾಮದೇವ ಇಂದ್ರನ ಬಳಿ ಬಂದು ತನ್ನನ್ನು ಏಕೆ ಇಂದ್ರ ನೆನಪಿಸಿಕೊಂಡನೆಂದು – ಅನುಗ್ರಹಂ ಸಂಸ್ಮರಣ ಪ್ರವೃತ್ತಾಂ[13]. ಅಭಿಜ್ಞಾನ ಶಾಕುಂತಲದಲ್ಲಿ ದುಷ್ಯಂತನು ಶಕುಂತಲೆಯು ಹಿಂದಿನ ಕಥೆಯನ್ನೂ ಕೇಳುವ ಸಂದರ್ಭದಲ್ಲಿ ಸ್ನೇಹಿತರು ಹೇಳುವಂತೆ ಅದು ಅನುಗ್ರಹವೇ ಹೊರತು ಬೇರೇನೂ ಅಲ್ಲ – ಅನುಗ್ರಹ ಇವೇಯಂ ಅಭ್ಯರ್ಥನಾ[14]. ಅನುಗ್ರಾಹ್ಯ ಎಂಬ ರೂಪವನ್ನು ಬಾಣ ತನ್ನ ಕಾದಂಬರಿಯಲ್ಲಿ ಬಳಸಿದ್ದಾನೆ – ಕಥನೇನಾತ್ಮಾನಂ ಅನುಗ್ರಾಹ್ಯ ಮಿಚ್ಛಾಮಿ[15]. ನವಯಂ ಅನುಗ್ರಾಹ್ಯಾಃ ಪ್ರಾಯೋದೇವತಾನಾಂ[16].

ದಯಾ ಎಂಬ ಪದವಾದ ನಂತರ ಸಂಸ್ಕೃತ ಸಾಹಿತ್ಯದಲ್ಲಿ ಅತಿ ಹೆಚ್ಚು ಬಳಕೆಯಾಗಿರುವ ಪದವೆಂದರೆ ಕೃಪಾ. ಅದು ಹಿಂದಿನದಕ್ಕಿಂತಲೂ ಬೇರೆ ಪದವಾಗಿಯೇ ತೋರುವುದಿಲ್ಲ, ಯಾವಾಗ ಅರ್ಜುನ ನನ್ನ ಒಡಹುಟ್ಟಿದವರೊಡನೆ ಯುದ್ಧದಲ್ಲಿ ಯುದ್ಧಮಾಡಿ

ಅತ್ಯಂತ ಖಿನ್ನನಾಗಿದ್ದನೋ ಆಗ ಕೃಷ್ಣನಿಗೆ ಅವನ ಬಗ್ಗೆ ಕೃಪೆ ಉಂಟಾಗುತ್ತದೆ. ಕೃಪಯಾ ಪರಯಾವಿಷ್ಟಃ[17]. ಪಾರ್ವತಿಗೆ ಬೇರ್ಪಟ್ಟಂತಹ ಚಕ್ರವಾಕ ಮಿಥುನದ ಬಗ್ಗೆ ಕೃಪೆ - ಚಕ್ರವಾಕಯೋಃ ಪುರೋವಿಯುಕ್ತೇ ಮಿಥುನೇ ಕೃಪಾವತೀ[18].

ದಯೆಗೆ ಪರ್ಯಾಯವಾಗಿರುವ ''ಕರುಣಾ'' ಎಂಬ ಪದವನ್ನು ದೀನೇಷ್ವರ್ಥೇಷು ಭೀತೇಷು ಚಮಾನೇಷು ಜೀವಿತಂ । ಪ್ರತೀಕಾರಪರಾಬುದ್ಧಿಃ ಕಾರುಣ್ಯಮಭಿಧೀಯತೇ [19] ಎಂದು ನಿರೂಪಿಸಿದ್ದಾರೆ.

ಯಾರು ಕಷ್ಟ, ದುಃಖ ಹಾಗೂ ನೋವಿನಿಂದಿರುವರೋ, ಯಾರು ಜೀವನಕ್ಕೋಸ್ಕರ ಬೇಡುತ್ತಿರುವರೋ ಅಂತಹವರಿಗೆ ಸಹಾಯ ಮಾಡುವುದೇ ಕಾರುಣ್ಯ (ಕರುಣಾ), ಸರ್ವಾರ್ಥಸಿದ್ಧಿ ''ಕಷ್ಟದಿಂದಿರುವವರಿಗೆ ಕರುಣೆತೋರುವುದು'' ಎಂದು ವ್ಯಾಖ್ಯಾನಿಸಿದ್ದಾನೆ. ''ದೀನಾನುಗ್ರಹಬುದ್ಧಿಃ ಕಾರುಣ್ಯಂ''[20]. ಭಗವಂತನಲ್ಲಿ ಕರುಣೆ ನೆಲೆಸಿರುತ್ತದೆ. ಸರ್ವಶಕ್ತನಾದ ಭಗವಂತ ಕರುಣಾಮಯಿ (ಬೌದ್ಧರು ತಮ್ಮ ಸಂದರ್ಭದಲ್ಲಿ ಮಹಾಕರುಣಾ ಎಂದು ಸಂಬೋಧಿಸುತ್ತಾರೆ) ರಾಮನು ಕರುಣಾಮಯ - ಕಾಕುಸ್ಥಂ ಕರುಣಾಮಯಂ ಗುಣನಿಧಿಂ ವಿಪ್ರಪ್ರಿಯಂ''. ಸಾವು ಕ್ರೂರಿಯಾದುದು. ಆದ್ದರಿಂದಲೇ ಅದನ್ನು ಕರುಣಾ ವಿಮುಖ ಎಂದು ವರ್ಣಿಸಿರುವುದು ಕರುಣಾವಿಮುಖೇನ ಮೃತ್ಯುನಾ'' - ಇಂದುಮತಿಯ ಮರಣದ ನಂತರ ಅಜನವಿಲಾಪ. ಸ್ವಪ್ನವಾಸವದತ್ತನಾಟಕದಲ್ಲಿ ವಾಸವದತ್ತೆಯು ತನ್ನ ಸವತಿಯಾಗುವಂತಹ ಪದ್ಮಾವತಿಗೆ ಹಾರ ಪೋಣಿಸಬೇಕಾದಾಗ ಅತ್ಯಂತ ಜಿಗುಪ್ಸೆಯಿಂದ ನುಡಿಯುತ್ತಾಳೆ - ಅಹೋ ಅಕರುಣಾಃ ಖಲ್ವೀಶ್ವರಾಃ[22] ನಿಜಕ್ಕೂ ದೇವತೆಗಳು ಕರುಣೆಯಲ್ಲದವರು. ಮೇಘದೂತದಲ್ಲಿ ಯಕ್ಷನು ಮೋಡವನ್ನು ಕುರಿತು ಹೇಳುತ್ತಾನೆ - ತನ್ನ ಹೆಂಡತಿಯ ದೀನಸ್ಥಿತಿಯನ್ನು ನೋಡಿ ಮೋಡವು ಕಣ್ಣೀರಿನ ರೂಪದಂತೆ ಮಳೆ ಸುರಿಸುತ್ತದೆ. ಮೃದು ಹೃದಯವುಳ್ಳವರು ಅತ್ಯಂತ ಕರುಣಾಮಯಿಗಳಾಗಿರುತ್ತಾರೆ - ಪ್ರಾಯಃ ಸರ್ವೋ ಭವತಿ ಕರುಣಾವೃತ್ತಿಃ ಆದ್ರಾಂತರಾತ್ಮಾ[23]. ನೈಷಧದಲ್ಲೂ ಬಂಗಾರದ ಹಂಸವು ನಳನ ಕೈಯಲ್ಲಿ ಸಿಲುಕಿಕೊಂಡು ನಾನು ನನ್ನ ಮುದಿ ತಾಯಿ ಹಾಗೂ ಚಿಕ್ಕಮಗುವನ್ನು ಹಡೆದಿರುವ ಹೆಂಡತಿಗೆ ಏಕೈಕ ಸಹಾಯನೆಂದೂ ಹೇಳುತ್ತದೆ. ಎಲೈ ಕ್ರೂರನಾದ ದೈವವೇ ನಿನಗೆ ಸ್ವಲ್ಪವೂ ಕಾರುಣ್ಯವಿಲ್ಲವೇ - ಅಹೋ ವಿಧೇತ್ವಾಂ ಕರುಣಾ ರುಣದ್ಧಿನೋ[24].

ಅನುಕಂಪ, ಕರುಣೆ, ನಯವಾದ ಹೃದಯ, ದಯೆ, ಕನಿಕರ, ಸಹಾನುಭೂತಿ ಮೊದಲಾದ ಮೌಲ್ಯಗಳು ಮಾನವೀಯತೆಯೊಂದಿಗೆ ಹೋಗುತ್ತದೆ. ಈ ಗುಣಗಳಿಲ್ಲದಿದ್ದರೆ ವಿಶ್ವವೇ ಕ್ರೂರವಾಗಿರುತ್ತಿತ್ತು. ಅವುಗಳು ವಿಶ್ವವನ್ನು ಉದಾತ್ತೀಕರಿಸುತ್ತದೆ ಮತ್ತು ಗೌರವಯುತವನ್ನಾಗಿ ಮಾಡುತ್ತದೆ. ಮಿಕ್ಕೆಲ್ಲಾ ಗುಣಗಳಂತೆಯೇ ಅವು ಹುಟ್ಟುಗುಣಗಳು ಕೆಲವನ್ನು ಮಾತ್ರ ನಾವು ಕಲಿಯಬೇಕಾಗುತ್ತದೆ. ಅದು ಧಾರ್ಮಿಕ ಗ್ರಂಥಾಧ್ಯಯನ ಹಾಗೂ ಸತ್ಸಂಗದಿಂದ ದೊರೆಯುತ್ತದೆ. ಕೆಲವರಿಗೆ ಬೇರೆಯವರ ಕಷ್ಟ ಕಾರ್ಪಣ್ಯಗಳ ಬಗ್ಗೆ ಕಾಳಜಿ ಇಲ್ಲದಿರಬಹುದು. ಅವರಿಗೆ ಉಕ್ಕಿನಂತಹ ಎದೆಯಿರುತ್ತದೆ. ಅಂತಹವರೇ

ಅತ್ಯಂತ ಹೇಯವಾದ ಕೃತ್ಯಗಳಲ್ಲಿ ತೊಡಗುತ್ತಾರೆ. ಅವರೇ ವಕ್ರಮಾರ್ಗಾನುಯಾಯಿಗಳು, ಅಪಚಾರಿಗಳು, ನೃಶಂಸರು ಮತ್ತು ಎರಡನೇ ಮಾತಿಲ್ಲದೆಯೇ ಮರಣದಂಡನೆಗೆ ಅರ್ಹರು. ಅತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್[25], ಅವರ ಗುಂಪು ಸಣ್ಣದಾಗಿರುವುದೇ ಸಮಾಜದ ಭಾಗ್ಯ. ಅಪಚಾರಿಗಳು, ನೃಶಂಸರು ಆಗದಿರುವುದೇ ದೊಡ್ಡ ಗುಣ. ಆನೃಶಂಸ್ಯಂಪರೋ ಧರ್ಮಃ[26].

ಸಂಸ್ಕೃತ ಸಾಹಿತ್ಯದಲ್ಲಿ ಕರುಣೆ, ಅನುಕಂಪ, ದಯೆಯನ್ನು ಉದಾತ್ತೀಕರಿಸುವಂಹ ಹೇಳಿಕೆಗಳು ಅನೇಕವಿದೆ, ಅದರಲ್ಲಿ ಮಹಾಪುರುಷರಾಗಲೀ, ಸಾಮಾನ್ಯರಾಗಲೀ, ಹಿರಿಯರಾಗಲೀ ಕಿರಿಯರಾಗಲೀ ಬೇರೆಯವರ ಒಳಿತಿಗಾಗಿ ಶ್ರಮಿಸಿದ್ದಾರೆ. ವಾಲ್ಮೀಕಿ ಹಾಗೂ ಶೀನರ ದೊರೆಯಾದ ಶಿಬಿಯ ಜೀವನವೇ ಇದಕ್ಕೆ ಆದರ್ಶ. ವಾಲ್ಮೀಕಿಯ ರಾಮಾಯಣವು ಕ್ರೌಂಚಪಕ್ಷಿಯ ದಯನೀಯ ಕೂಗಿನಿಂದ ಕರಗಿದ ಹೃದಯವುಳ್ಳ ನಿದರ್ಶನವೇ ಆಗಿದೆ. ರುರಾವ ಕರುಣಾಂ ಗಿರಂ [27]. ಗಂಡುಕ್ರೌಂಚವು ನೆಲದ ಮೇಲೆ ಬಿದ್ದು ವಿಲಿವಿಲಿ ಒದ್ದಾಡುವ ದೃಶ್ಯ ವಾಲ್ಮೀಕಿಗೆ ಕರುಣೆಯುಕ್ಕುವಂತೆ ಮಾಡಿತು. ಋಷೇಸ್ತಸ್ಯ ಕಾರುಣ್ಯಂ ಸಮಪದ್ಯತ[28]. ಕೂಡಲೇ ಅವನಿಂದ ಶಾಪಹೊರ ಹೊಮ್ಮಿತು – ಮಾನಿಷಾದ ಪ್ರತಿಷ್ಠಾಂ ತ್ವಮಗಮಃ29. ಈ ಶೋಕವೇ ಶ್ಲೋಕವಾಯಿತು – ಶೋಕಃ ಶ್ಲೋಕತ್ವಮಾಗತಃ[30].

ಯಾವಾಗ ರಾಮನು ಸೀತೆಯೊಂದಿಗೆ ಸುಖವಾಗಿದ್ದಾನೆ ರಾವಣನಿಂದ ಅಪಹರಿಸಿದ ಬಳಿಕವೂ ಎಂಬ ಸುದ್ದಿ ಜನಸಾಮಾನ್ಯರಲ್ಲಿ ಹರಡಿತೋ, ಆಗ ರಾಮ ಅವರನ್ನು ಮತ್ತೊಂದು ಪ್ರದೇಶಕ್ಕೆ ಎಂದರೆ ಗಂಗೆಯ ಮತ್ತೊಂದು ದಡಕ್ಕೆ ಕಳುಹಿಸಿ ಅಲ್ಲಿ ವಾಲ್ಮೀಕಿಗೆ ಶಿಷ್ಯರಿಂದ ಯಾವಾಗ ತಿಳಿಯಿತೋ ಒಬ್ಬ ಸುಂದರಿಯು ಅಳುತ್ತಿದ್ದಾಳೆಂದು, ಅವಳು ಬಂದು, ಅವಳಿಗೆ ಸಮಾಧಾನಪಡಿಸಿ, ಅವಳನ್ನು ಕರೆತಂದು ಪರ್ಣಕುಟಿಯಲ್ಲಿದ್ದ ಹೆಂಗಸರ ಬಳಿ ಅವಳು ದಶರಥನ ಸೊಸೆಯೆಂದೂ, ಜನಕನ ಮಗಳೆಂದೂ ಅವಳ ಯಾವ ತಪ್ಪೂ ಇಲ್ಲವೆಂದು ಅದರಿಂದಲೇ ಅವಳಿಗೆ ವಿಶೇಷ ಕಾಳಜಿವಹಿಸಬೇಕೆಂದೂ ತಿಳಿಸಿದನು. ಆ ಆಶ್ರಮದಲ್ಲೆ ಸೀತೆಯು ಅವಳಿಗಳನ್ನು ಹೆತ್ತಳು. ವಾಲ್ಮೀಕಿಗೆ ಆ ಮಕ್ಕಳಿಗೆ ವಿಶೇಷವಾದ ರಕ್ಷಣೆಯನ್ನು ದುಷ್ಟಶಕ್ತಿಗಳಾದ ದೆವ್ವಭೂತಗಳಿಂದ ಕೊಟ್ಟು ಹಿರಿಯವನಿಗೆ ಕುಶ ಎಂದೂ ಚಿಕ್ಕವನಿಗೆ ಲವ ಎಂದೂ ನಾಮಕರಣಮಾಡಿ ಅವರ ರಕ್ಷಣೆಯನ್ನು ಹೆಂಗಸರಿಗೆ ಆಶ್ರಮದಲ್ಲಿ ಸಮರ್ಪಿಸಿದನು. (ರಾಮಾಯಣ, ಉತ್ತರಕಾಂಡ.49.66) ತಾನು ರಾಮಾಯಣವನ್ನು ರಚಿಸಿ ಅವಳಿಗಳಿಗೂ ಕಲಿಸಿದ. ಅವರು ಆ ರಾಮಾಯಣವನ್ನು ಹಾಡಿದಾಗ ಆಶ್ರಮದಲ್ಲಿದ್ದ ಮುನಿಗಳು ಆ ಮಕ್ಕಳಿಗೆ ಉಡುಗೊರೆ ಕೊಟ್ಟರು. ಅನಂತರ ವಾಲ್ಮೀಕಿ ಆ ಮಕ್ಕಳನ್ನು ಅಯೋಧ್ಯೆಗೆ ಕರೆದೊಯ್ದನು. ಅಲ್ಲಿ ಅಶ್ವಮೇಧಯಾಗವು ಪ್ರಾರಂಭವಾಗಿತ್ತು. ಅದು ಕಾನೂನಿಗೆ ತನ್ನ ಮಕ್ಕಳನ್ನು ತೋರಿಸುವ ಒಂದು ಸಾಧನವಾಗಿದ್ದರೆ ಮತ್ತೊಂದರ ಪ್ರಕಾರ ಸೀತೆಯ ಬಗ್ಗೆ ಜನಸಾಮಾನ್ಯರಿಗೆ ಒಳ್ಳೆಯ ಭಾವನೆ ಮೂಡಿಸುವುದೂ ಆಗಿತ್ತು. ಆ ಇಬ್ಬರು ಮಕ್ಕಳೂ ರಾಮಾಯಣವನ್ನು ಹಾಡುವುದು ಸೀತೆಯ ಪಾತಿವ್ರತ್ಯೆಗೆ ಪುರಾವೆಯೂ ಆಗಿದ್ದಿತು. ಈ ತನ್ನ ಕಾರ್ಯದಲ್ಲಿ ವಾಲ್ಮೀಕಿಗೆ ಸಂಪೂರ್ಣವಾಗಿ ಜಯದೊರೆಯಿತು. ತಾನು

ಅತ್ಯಂತ ಖಿನ್ನನಾಗಿದ್ದನೋ ಆಗ ಕೃಷ್ಣನಿಗೆ ಅವನ ಬಗ್ಗೆ ಕೃಪೆ ಉಂಟಾಗುತ್ತದೆ. ಕೃಪಯಾ ಪರಯಾವಿಷ್ಟಃ[17]. ಪಾರ್ವತಿಗೆ ಬೇರ್ಪಟ್ಟಂತಹ ಚಕ್ರವಾಕ ಮಿಥುನದ ಬಗ್ಗೆ ಕೃಪೆ – ಚಕ್ರವಾಕಯೋಃ ಪುರೋವಿಯುಕ್ತೇ ಮಿಥುನೇ ಕೃಪಾವತೀ[18].

ದಯೆಗೆ ಪರ್ಯಾಯವಾಗಿರುವ ''ಕರುಣಾ'' ಎಂಬ ಪದವನ್ನು ದೀನೇಷ್ವರ್ಥೇಷು ಭೀತೇಷು ಚಮಾನೇಷು ಜೀವಿತಂ । ಪ್ರತೀಕಾರಪರಾಬುದ್ಧಿಃ ಕಾರುಣ್ಯಮಭಿಧೀಯತೇ [19] ಎಂದು ನಿರೂಪಿಸಿದ್ದಾರೆ.

ಯಾರು ಕಷ್ಟ, ದುಃಖ ಹಾಗೂ ನೋವಿನಿಂದಿರುವರೋ, ಯಾರು ಜೀವನಕ್ಕೋಸ್ಕರ ಬೇಡುತ್ತಿರುವರೋ ಅಂತಹವರಿಗೆ ಸಹಾಯ ಮಾಡುವುದೇ ಕಾರುಣ್ಯ (ಕರುಣಾ), ಸರ್ವಾರ್ಥಸಿದ್ಧಿ ''ಕಷ್ಟದಿಂದಿರುವವರಿಗೆ ಕರುಣೆತೋರುವುದು'' ಎಂದು ವ್ಯಾಖ್ಯಾನಿಸಿದ್ದಾನೆ. ''ದೀನಾನುಗ್ರಹಬುದ್ಧಿಃ ಕಾರುಣ್ಯಂ''[20]. ಭಗವಂತನಲ್ಲಿ ಕರುಣೆ ನೆಲೆಸಿರುತ್ತದೆ. ಸರ್ವಶಕ್ತನಾದ ಭಗವಂತ ಕರುಣಾಮಯಿ (ಬೌದ್ಧರು ತಮ್ಮ ಸಂದರ್ಭದಲ್ಲಿ ಮಹಾಕರುಣಾ ಎಂದು ಸಂಬೋಧಿಸುತ್ತಾರೆ) ರಾಮನು ಕರುಣಾಮಯ – ಕಾಕುಸ್ಥಂ ಕರುಣಾಮಯಂ ಗುಣನಿಧಿಂ ವಿಪ್ರಪ್ರಿಯಂ''. ಸಾವು ಕ್ರೂರಿಯಾದುದು. ಆದ್ದರಿಂದಲೇ ಅದನ್ನು ಕರುಣಾ ವಿಮುಖ ಎಂದು ವರ್ಣಿಸಿರುವುದು ಕರುಣಾವಿಮುಖೇನ ಮೃತ್ಯುನಾ'' – ಇಂದುಮತಿಯ ಮರಣದ ನಂತರ ಅಜನವಿಲಾಪ. ಸ್ವಪ್ನವಾಸವದತ್ತನಾಟಕದಲ್ಲಿ ವಾಸವದತ್ತೆಯು ತನ್ನ ಸವತಿಯಾಗುವಂತಹ ಪದ್ಮಾವತಿಗೆ ಹಾರ ಪೋಣಿಸಬೇಕಾದಾಗ ಅತ್ಯಂತ ಜಿಗುಪ್ಸೆಯಿಂದ ನುಡಿಯುತ್ತಾಳೆ – ಅಹೋ ಅಕರುಣಾಃ ಖಲ್ವೀಶ್ವರಾಃ[22] ನಿಜಕ್ಕೂ ದೇವತೆಗಳು ಕರುಣೆಯಲ್ಲದವರು. ಮೇಘದೂತದಲ್ಲಿ ಯಕ್ಷನು ಮೋಡವನ್ನು ಕುರಿತು ಹೇಳುತ್ತಾನೆ – ತನ್ನ ಹೆಂಡತಿಯ ದೀನಸ್ಥಿತಿಯನ್ನು ನೋಡಿ ಮೋಡವು ಕಣ್ಣೀರಿನ ರೂಪದಂತೆ ಮಳೆ ಸುರಿಸುತ್ತದೆ. ಮೃದು ಹೃದಯವುಳ್ಳವರು ಅತ್ಯಂತ ಕರುಣಾಮಯಿಗಳಾಗಿರುತ್ತಾರೆ – ಪ್ರಾಯಃ ಸರ್ವೋ ಭವತಿ ಕರುಣಾವೃತ್ತಿಃ ಅದ್ರಾರ್ಂತರಾತ್ಮ[23]. ನೈಷಧದಲ್ಲೂ ಬಂಗಾರದ ಹಂಸವು ನಳನ ಕೈಯಲ್ಲಿ ಸಿಲುಕಿಕೊಂಡು ನಾನು ನನ್ನ ಮುದಿ ತಾಯಿ ಹಾಗೂ ಚಿಕ್ಕಮಗುವನ್ನು ಹಡೆದಿರುವ ಹೆಂಡತಿಗೆ ಏಕೈಕ ಸಹಾಯನೆಂದೂ ಹೇಳುತ್ತದೆ. ಎಲೈ ಕ್ರೂರನಾದ ದೈವವೇ ನಿನಗೆ ಸ್ವಲ್ಪವೂ ಕಾರುಣ್ಯವಿಲ್ಲವೇ – ಅಹೋ ವಿಧೇತ್ವಾಂ ಕರುಣಾ ರುಣದ್ಧಿನೋ[24].

ಅನುಕಂಪ, ಕರುಣೆ, ನಯವಾದ ಹೃದಯ, ದಯೆ, ಕನಿಕರ, ಸಹಾನುಭೂತಿ ಮೊದಲಾದ ಮೌಲ್ಯಗಳು ಮಾನವೀಯತೆಯೊಂದಿಗೆ ಹೋಗುತ್ತದೆ. ಈ ಗುಣಗಳಿಲ್ಲದಿದ್ದರೆ ವಿಶ್ವವೇ ಕ್ರೂರವಾಗಿರುತ್ತಿತ್ತು. ಅವುಗಳು ವಿಶ್ವವನ್ನು ಉದಾತ್ತೀಕರಿಸುತ್ತದೆ ಮತ್ತು ಗೌರವಯುತವನ್ನಾಗಿ ಮಾಡುತ್ತದೆ. ಮಿಕ್ಕೆಲ್ಲಾ ಗುಣಗಳಂತೆಯೇ ಅವು ಹುಟ್ಟುಗುಣಗಳು ಕೆಲವನ್ನು ಮಾತ್ರ ನಾವು ಕಲಿಯಬೇಕಾಗುತ್ತದೆ. ಅದು ಧಾರ್ಮಿಕ ಗ್ರಂಥಾಧ್ಯಯನ ಹಾಗೂ ಸತ್ಸಂಗದಿಂದ ದೊರೆಯುತ್ತದೆ. ಕೆಲವರಿಗೆ ಬೇರೆಯವರ ಕಷ್ಟ ಕಾರ್ಪಣ್ಯಗಳ ಬಗ್ಗೆ ಕಾಳಜಿ ಇಲ್ಲದಿರಬಹುದು. ಅವರಿಗೆ ಉಕ್ಕಿನಂತಹ ಎದೆಯಿರುತ್ತದೆ. ಅಂತಹವರೇ

ಅತ್ಯಂತ ಹೇಯವಾದ ಕೃತ್ಯಗಳಲ್ಲಿ ತೊಡಗುತ್ತಾರೆ. ಅವರೇ ವಕ್ರಮಾರ್ಗಾನುಯಾಯಿಗಳು, ಅಪಚಾರಿಗಳು, ನೃಶಂಸರು ಮತ್ತು ಎರಡನೇ ಮಾತಿಲ್ಲದೆಯೇ ಮರಣದಂಡನೆಗೆ ಅರ್ಹರು. ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್[25], ಅವರ ಗುಂಪು ಸಣ್ಣದಾಗಿರುವುದೇ ಸಮಾಜದ ಭಾಗ್ಯ. ಅಪಚಾರಿಗಳು, ನೃಶಂಸರು ಆಗದಿರುವುದೇ ದೊಡ್ಡ ಗುಣ. ಆನೃಶಂಸ್ಯಂಪರೋ ಧರ್ಮಃ[26].

ಸಂಸ್ಕೃತ ಸಾಹಿತ್ಯದಲ್ಲಿ ಕರುಣೆ, ಅನುಕಂಪ, ದಯೆಯನ್ನು ಉದಾತ್ತೀಕರಿಸುವಂಥ ಹೇಳಿಕೆಗಳು ಅನೇಕವಿದೆ, ಅದರಲ್ಲಿ ಮಹಾಪುರುಷರಾಗಲೀ, ಸಾಮಾನ್ಯರಾಗಲೀ, ಹಿರಿಯರಾಗಲೀ ಕಿರಿಯರಾಗಲೀ ಬೇರೆಯವರ ಒಳಿತಿಗಾಗಿ ಶ್ರಮಿಸಿದ್ದಾರೆ. ವಾಲ್ಮೀಕಿ ಹಾಗೂ ಶೀನರ ದೊರೆಯಾದ ಶಿಬಿಯ ಜೀವನವೇ ಇದಕ್ಕೆ ಆದರ್ಶ. ವಾಲ್ಮೀಕಿಯ ರಾಮಾಯಣವು ಕ್ರೌಂಚಪಕ್ಷಿಯ ದಯನೀಯ ಕೂಗಿನಿಂದ ಕರಗಿದ ಹೃದಯವುಳ್ಳ ನಿದರ್ಶನವೇ ಆಗಿದೆ. ರುರಾವ ಕರುಣಾಂ ಗಿರಂ [27]. ಗಂಡುಕ್ರೌಂಚವು ನೆಲದ ಮೇಲೆ ಬಿದ್ದು ವಿಲಿವಿಲಿ ಒದ್ದಾಡುವ ದೃಶ್ಯ ವಾಲ್ಮೀಕಿಗೆ ಕರುಣೆಯುಕ್ಕುವಂತೆ ಮಾಡಿತು. ಋಷೇಸ್ತಸ್ಯ ಕಾರುಣ್ಯಂ ಸಮಪದ್ಯತ[28]. ಕೂಡಲೇ ಅವನಿಂದ ಶಾಪಹೊರ ಹೊಮ್ಮಿತು – ಮಾನಿಷಾದ ಪ್ರತಿಷ್ಠಾಂ ತ್ವಮಗಮಃ29. ಈ ಶೋಕವೇ ಶ್ಲೋಕವಾಯಿತು – ಶೋಕಃ ಶ್ಲೋಕತ್ವಮಾಗತಃ[30].

ಯಾವಾಗ ರಾಮನು ಸೀತೆಯೊಂದಿಗೆ ಸುಖವಾಗಿದ್ದಾನೆ ರಾವಣನಿಂದ ಅಪಹರಿಸಿದ ಬಳಿಕವೂ ಎಂಬ ಸುದ್ದಿ ಜನಸಾಮಾನ್ಯರಲ್ಲಿ ಹರಡಿತೋ, ಆಗ ರಾಮ ಅವರನ್ನು ಮತ್ತೊಂದು ಪ್ರದೇಶಕ್ಕೆ ಎಂದರೆ ಗಂಗೆಯ ಮತ್ತೊಂದು ದಡಕ್ಕೆ ಕಳುಹಿಸಿ ಅಲ್ಲಿ ವಾಲ್ಮೀಕಿಗೆ ಶಿಷ್ಯರಿಂದ ಯಾವಾಗ ತಿಳಿಯಿತೋ ಒಬ್ಬ ಸುಂದರಿಯು ಅಳುತ್ತಿದ್ದಾಳೆಂದು, ಅವಳು ಬಂದು, ಅವಳಿಗೆ ಸಮಾಧಾನಪಡಿಸಿ, ಅವಳನ್ನು ಕರೆತಂದು ಪರ್ಣಕುಟಿಯಲ್ಲಿದ್ದ ಹೆಂಗಸರ ಬಳಿ ಅವಳು ದಶರಥನ ಸೊಸೆಯೆಂದೂ, ಜನಕನ ಮಗಳೆಂದೂ ಅವಳ ಯಾವ ತಪ್ಪೂ ಇಲ್ಲವೆಂದು ಅದರಿಂದಲೇ ಅವಳಿಗೆ ವಿಶೇಷ ಕಾಳಜಿವಹಿಸಬೇಕೆಂದೂ ತಿಳಿಸಿದನು. ಆ ಆಶ್ರಮದಲ್ಲೆ ಸೀತೆಯು ಅವಳಿಗಳನ್ನು ಹೆತ್ತಳು. ವಾಲ್ಮೀಕಿಗೆ ಆ ಮಕ್ಕಳಿಗೆ ವಿಶೇಷವಾದ ರಕ್ಷಣೆಯನ್ನು ದುಷ್ಟಶಕ್ತಿಗಳಾದ ದೆವ್ವಭೂತಗಳಿಂದ ಕೊಟ್ಟು ಹಿರಿಯವನಿಗೆ ಕುಶ ಎಂದೂ ಚಿಕ್ಕವನಿಗೆ ಲವ ಎಂದೂ ನಾಮಕರಣಮಾಡಿ ಅವರ ರಕ್ಷಣೆಯನ್ನು ಹೆಂಗಸರಿಗೆ ಆಶ್ರಮದಲ್ಲಿ ಸಮರ್ಪಿಸಿದನು. (ರಾಮಾಯಣ, ಉತ್ತರಕಾಂಡ.49.66) ತಾನು ರಾಮಾಯಣವನ್ನು ರಚಿಸಿ ಅವಳಿಗಳಿಗೂ ಕಲಿಸಿದ. ಅವರು ಆ ರಾಮಾಯಣವನ್ನು ಹಾಡಿದಾಗ ಆಶ್ರಮದಲ್ಲಿದ್ದ ಮುನಿಗಳು ಆ ಮಕ್ಕಳಿಗೆ ಉಡುಗೊರೆ ಕೊಟ್ಟರು. ಅನಂತರ ವಾಲ್ಮೀಕಿ ಆ ಮಕ್ಕಳನ್ನು ಅಯೋಧ್ಯೆಗೆ ಕರೆದೊಯ್ದನು. ಅಲ್ಲಿ ಅಶ್ವಮೇಧಯಾಗವು ಪ್ರಾರಂಭವಾಗಿತ್ತು. ಅದು ಕಾನೂನಿಗೆ ತನ್ನ ಮಕ್ಕಳನ್ನು ತೋರಿಸುವ ಒಂದು ಸಾಧನವಾಗಿದ್ದರೆ ಮತ್ತೊಂದರ ಪ್ರಕಾರ ಸೀತೆಯ ಬಗ್ಗೆ ಜನಸಾಮಾನ್ಯರಿಗೆ ಒಳ್ಳೆಯ ಭಾವನೆ ಮೂಡಿಸುವುದೂ ಆಗಿತ್ತು. ಆ ಇಬ್ಬರು ಮಕ್ಕಳೂ ರಾಮಾಯಣವನ್ನು ಹಾಡುವುದು ಸೀತೆಯ ಪಾತಿವ್ರತ್ಯೆಗೆ ಪುರಾವೆಯೂ ಆಗಿದ್ದಿತು. ಈ ತನ್ನ ಕಾರ್ಯದಲ್ಲಿ ವಾಲ್ಮೀಕಿಗೆ ಸಂಪೂರ್ಣವಾಗಿ ಜಯದೊರೆಯಿತು. ತಾನು

ಅಯೋಧ್ಯೆಗೆ ಹೋಗಲು ಆಮಂತ್ರಣವಿಲ್ಲದಿದ್ದರೂ ಸಹ ಮಿಕ್ಕೆಲ್ಲರಿಗೂ ಸಹ ಆಮಂತ್ರಣ ಬಂದಿದ್ದರೂ ಸಹ ತೆರಳಿದ್ದು ಸಾರ್ಥಕವಾಯಿತು. ಆ ಚಿಕ್ಕಮಕ್ಕಳನ್ನು ಕರೆತರುವಂತೆ ಹೇಳಿದಾಗ ವಾಲ್ಮೀಕಿಗೆ ತುಂಬಿದ ಸಭೆಯಲ್ಲಿ ಸೀತೆಯ ಪಾವಿತ್ರ್ಯತೆ ನಿರೂಪಿಸಲೂ ಸಾಧ್ಯವಾಯಿತು. ಸೀತೆಯನ್ನು ರಾಮನಮುಂದೆ ಸಮರ್ಪಿಸಿ ವಾಲ್ಮೀಕಿ ನುಡಿದನು – ನಾನು ಸಾವಿರಾರು ವರ್ಷದವರೆಗೆ ತಪಗೈದಿರುವೆ. ಸೀತೆಯು ಪಾಪಿಷ್ಠಳೇ ಆಗಿದ್ದರೆ ನನಗೆ ಅದರ ಫಲ ದೊರೆಯದಿರಲಿ :-

ಬಹುವರ್ಷ ಸಹಸ್ರಾಣಿ ತಪಶ್ಚರ್ಯಾ ಮಯಾ ಕೃತಾ ।
ನೋಪಾಸನೀಯಂ ಫಲಂ ತಸ್ಯಾ ದುಷ್ಟೇಯಂ ಯದಿ ಮೈಥಿಲಿ ॥ [31]

ಈ ಮುನಿಯಾದ ವಾಲ್ಮೀಕಿಯು ಸೀತೆಯ ಪಾವಿತ್ರ್ಯತೆಗೆ ತನ್ನ ಸಾವಿರಾರು ವರ್ಷದ ತಪಸ್ಸನ್ನೇ ಪಣವಾಗಿಡುವನು, ಈ ರೀತಿಯಾದ ಅನುಕಂಪ ಸಮಗ್ರವಾದ ವಿಶ್ವದಲ್ಲೇ ಅನನ್ಯಾದೃಶವಾದುದು.

ಅಷ್ಟೇ ಅನನ್ಯಾದೃಶವಾದ ಪ್ರಸಂಗವು ಮಹಾಭಾರತದಲ್ಲೂ ಕಂಡುಬರುತ್ತದೆ. ಶಿಬಿ ಚಕ್ರವರ್ತಿಯು ಪಾರಿವಾಳದ ಜೀವವನ್ನು ರಕ್ಷಿಸಲು (ಹದ್ದಿನಿಂದ ಭಯಗೊಂಡು ತನ್ನಲ್ಲಿ ಆಶ್ರಯ ಪಡೆದ) ತನ್ನ ಜೀವವನ್ನೇ ಹದ್ದಿಗೆ ಆಹಾರವಾಗಿ ನೀಡುವ ಪ್ರಸಂಗ ಬರುತ್ತದೆ.

ಕಥೆಯಂತೆ ಇಂದ್ರ ಹಾಗೂ ಅಗ್ನಿ ಶಿಬಿಯ ನೈತಿಕತೆಯನ್ನು ಪರೀಕ್ಷಿಸಲು ಹದ್ದು ಹಾಗೂ ಪಾರಿವಾಳಗಳ ರೂಪ ಧರಿಸಿದರು. ಪಾರಿವಾಳವು ತನ್ನನ್ನು ಹದ್ದಿನಿಂದ ರಕ್ಷಿಸುವಂತೆ ಶಿಬಿಯ ಬಳಿಬಂದಿತು. ಶಿಬಿಯು ಪಾರಿವಾಳಕ್ಕೆ ಅಭಯನೀಡಿ ಹದ್ದು ಎಷ್ಟೇ ಒತ್ತಾಯಿಸಿದರೂ ಅದನ್ನು ಬಿಟ್ಟುಕೊಡಲಿಲ್ಲ. ಅದಕ್ಕೆ ಪ್ರತಿಯಾಗಿ ಹದ್ದು ಅದರ ಬದಲಿಗೆ ಮತ್ತಾವುದನ್ನೂ ಒಪ್ಪಲಿಲ್ಲ. ಆ ಪಾರಿವಾಳದ ಮಾಂಸಕ್ಕೆ ಅನುಗುಣವಾದ ಮಾಂಸವನ್ನು ಶಿಬಿಯ ದೇಹದಿಂದ ಮಾತ್ರವೇ ಅದು ಪಡೆಯಲು ಸಿದ್ಧವಾದಾಗ ಶಿಬಿ ತನ್ನ ದೇಹದ ಮಾಂಸವನ್ನು ಕತ್ತರಿಸಿ ಅದಕ್ಕೆ ನೀಡಿದನು. ಪ್ರತಿಸಲವೂ ಆ ಪಾರಿವಾಳವೇ ಭಾರವಾಗಿ ತಕ್ಕಡಿಯಲ್ಲಿ ತೂಗಿದಾಗ ತನ್ನ ಸಮಸ್ತವಾದ ದೇಹವನ್ನೂ ನೀಡಿ ಆ ಪಾರಿವಾಳವನ್ನು ರಕ್ಷಿಸಿ, ಅನುಕಂಪೆಗೆ ಶಾಶ್ವತ ಸ್ಥಾನ ಪಡೆದು ತಾನು ಸ್ವರ್ಗಕ್ಕೆ ಹೋದನು.

ಪುರಾಣಗಳಲ್ಲಿ ಬರುವಂತಹ ವಿಸ್ತಾರವಾದ ಸಾಹಿತ್ಯದಲ್ಲಿ ಕಾರುಣ್ಯ ಹಾಗೂ ಅನುಕಂಪಗೆ ಅನೇಕ ಉದಾಹರಣೆಗಳೂ ದೊರೆಯುತ್ತದೆ. ಇಲ್ಲಿ ಆ ಎಲ್ಲಾ ನಿದರ್ಶನಗಳನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದ್ದರಿಂದ ಅತ್ಯಂತ ಮುಖ್ಯವಾದ ಕೆಲವನ್ನೇ ಕೊಡಲಾಗಿದೆ. ವಿಷ್ಣು ಪುರಾಣ[32] ಔರ್ವ ಎಂಬ ಮುನಿಯು ವಾಹು ಎಂಬ ರಾಜನ ಇನ್ನೂ ಹುಟ್ಟದ ಮಗುವಿನ ಪ್ರಾಣವನ್ನು ರಕ್ಷಿಸಿದ ಘಟನೆಬರುತ್ತದೆ. ರಾಣಿ ಮಗುವನ್ನು ಹೆರುವುದು ಸಾಧ್ಯವಿರಲಿಲ್ಲ, ಏಕೆಂದರೆ ಆ ರಾಜನ ಮತ್ತೋರ್ವ ರಾಣಿ ಈ ರಾಣಿಯ ಗರ್ಭದಲ್ಲಿ ವಿಷತುಂಬಿದ ಪದಾರ್ಥವನ್ನಿಟ್ಟಿದ್ದಳು. ಯಾವಾಗ ಮಗುವಿನ ಜನನವು ಅನಿರ್ದಿಷ್ಟವಾಗಿ

ಮುಂದುವರೆಯಿತೋ, ರಾಜ ಏಳು ವರ್ಷಗಳಲ್ಲಿ ಸತ್ತಾಗ ಅವನ ಹೆಂಡತಿ ಇನ್ನೂ ಗರ್ಭಸ್ಥವಾಗಿಯೇ ಇದ್ದು ಮಗುವಿಗೆ ಜನ್ಮ ನೀಡದೆ ತನ್ನ ಪ್ರಾಣತ್ಯಾಗ ಮಾಡಲು ನಿಶ್ಚಯಿಸಿದಾಗ ಮುನಿಯು ಅವಳಿಗೆ ಮಗುವನ್ನು ಹೆರುವಂತೆ ಮಾಡಿದ್ದಲ್ಲದೆ ಆ ಮಗುವಿನ ಬೆಳವಣಿಗೆಯನ್ನು ನೋಡಿಕೊಂಡು ಸಮಾಜಕ್ಕೆ ಸಹಕರಿಸಿದನು. ಈ ವಿಷಯದಲ್ಲಿ ಮುನಿಗೆ ಯಾವ ರೀತಿ ಸ್ವಾರ್ಥವೂ ಇರಲಿಲ್ಲ.

ಬ್ರಹ್ಮಪುರಾಣ ಬೇಡನ ಕೈಯ್ಯಲ್ಲಿ ಸಿಕ್ಕಿಬಿದ್ದಿದ್ದ ಪಾರಿವಾಳ ದಂಪತಿಗಳ ಕರುಣಾಜನಕವಾದ ಕಥೆಯನ್ನು ನಿರೂಪಿಸುತ್ತದೆ. ಬೇಡರವನು ಯಾವ ಮರದ ಬುಡದ ಬಳಿ ಬಂದನೋ ಅದೇ ಮರದಲ್ಲಿ ಗಂಡು ಪಾರಿವಾಳ ಪಕ್ಷಿ ವಿಶ್ರಮಿಸುತ್ತಿತ್ತು. ರಾತ್ರಿ ಹೊತ್ತು ಹೆಣ್ಣು ಪಕ್ಷಿ ತನ್ನ ಗಂಡನ ಕೂಗಿಗೆ ಪ್ರತಿಕ್ರಿಯಿಸಿತು ಆದರೆ ಬೇಡ ಅದನ್ನು ಸ್ವತಂತ್ರವಾಗಿರಿಸಲು ಬಿಡಲಿಲ್ಲ. ಆದಕ್ಕೆ ಪಕ್ಷಿ ಆ ಬೇಡರವನ ತಪ್ಪೆಂದು ಭಾವಿಸಲಿಲ್ಲ ಅದು ಇನ್ನೂ ಒಂದು ಹೆಜ್ಜೆ ಮುಂದೆ ಹೋಯಿತು. ಅದು ಆ ಬೇಡರವನನ್ನು ಅತಿಥಿಯನ್ನಾಗಿ ಸ್ವೀಕರಿಸುವಂತೆ ಗಂಡು ಹಕ್ಕಿಗೆ ಹೇಳಿತು ಮತ್ತು ತನ್ನನ್ನೇ ಆ ಅತಿಥಿಗೆ ಆಹಾರವನ್ನಾಗಿ ನೀಡುವಂತೆ ಹೇಳಿತು. ಆ ಬೇಡರವನು ಮಾತೇ ಇಲ್ಲದೆ ಸ್ತಬ್ದನಾದನು.

ಅದೇ ಪುರಾಣ 92ನೆಯ ಅಧ್ಯಾಯದಲ್ಲಿ ಮಹಿ ಎಂಬ ವಿಧವೆಯ ಘಟನೆಯನ್ನು ನಿರೂಪಿಸುತ್ತದೆ. ಆ ಮಹೀ ಎಂಬ ವಿಧವೆಯು ತನ್ನ ಚಿಕ್ಕ ಮಗನನ್ನು ಗಾಲವ ಎಂಬ ಮುನಿಯ ಆಶ್ರಮದಲ್ಲಿ ಬಿಟ್ಟು ಪ್ರಾಪಂಚಿಕ ಜ್ಞಾನ ಪಡೆಯಲು ಹೊರಟಳು. ಅವಳ ತಿರುಗಾಟದಲ್ಲಿ ಅವಳು ಸೂಳೆಯಾದಳು. ಸಮಯವು ಎಲ್ಲವನ್ನೂ ನಿರ್ಧರಿಸುವಂತೆ ತಾಯಿ ಮತ್ತು ಮಗ ಒಬ್ಬರಿಗೊಬ್ಬರು ಮುಖಾಮುಖಿಯಾದಾಗ ತಾಯಿಯನ್ನೇ ಅವನು ಸಪತ್ನಿಯಾಗಿ ಮಾಡಿಕೊಂಡ. ಕಾಲ ಕಳೆದಂತೆ ಸತ್ಯ ಸಂಗತಿ ತಿಳಿದ ಅವರಿಬ್ಬರೂ ತಮ್ಮ ಜೀವನ ಅಂತ್ಯಗೊಳಿಸಿಕೊಳ್ಳಬೇಕೆಂದಿರುವಾಗ ಕರುಣಾಮಯಿಯಾದ ಗಾಲವಮುನಿ ಅವರನ್ನು ರಕ್ಷಿಸಿ ಅವರಿಗೆ ಸನ್ಮಾರ್ಗ ತೋರಿಸುತ್ತಾನೆ.

ಒಂಭತ್ತು ಸದ್ಗುಣಗಳಿಂದ ಕೂಡಿರುವ ಬುದ್ಧನಲ್ಲಿ ಕರುಣೆಯೆಂಬುದೂ ಉಂಟು. ಇತಿಪಿಸೋ ಭಗವಾ ಅರ್ಹಾಂ ಸಮ್ಮತಂಬದ್ಧೋ ವಿಜ್ಜಾಚರಣ ಸಂಪನ್ನೋ ಸುಗತೋ ಲಕವಿದು ಅನುತ್ತರೋ ಪುರಿಸದಮ್ಮ ಸರದಿ ಸತ್ತಾದೇವ ಮನುಷ್ಯಾಣಾಂ ಬುದ್ಧೋ ಭಗವಾನಿತಿ. ಅತ್ಯುತ್ತಮವಾದ ಮಲಿನತೆಯನ್ನು ನಾಶಗೊಳಿಸುವ, ಪರಿಪೂರ್ಣನಾದ ಬುದ್ಧ, ಸಮ್ಯಕ್ ಜ್ಞಾನದಿಂದ ಪರಿಪೂರ್ಣನಾಗಿದ್ದು, ಕರುಣಾಳುವಾಗಿ, ಪ್ರಪಂಚವನ್ನರಿತವನಾಗಿ, ಪಳಗಿಸುವವರಲ್ಲಿ ಅನನ್ಯಾದೃಶನಾಗಿ, ದೇವ ಮಾನವರಿಗೆ ಗುರುವಾಗಿ, ಎಲ್ಲರಲ್ಲೂ ಜಾಗೃತಿ ಮೂಡಿಸುವವನಾಗಿ ಧರ್ಮದ ಗುರುವಾಗಿ ಬೆಳಗಿದ. ಇದೇ ಬೌದ್ಧಧರ್ಮದ ಅಡಿಗಲ್ಲಾಯಿತು. ಈ ಕೆಳಗಿನ ಸಂದರ್ಭ ಅದಕ್ಕೆ ಸಾಕ್ಷಿಯಾಗಿದೆ.

ಒಂದು ಬಾರಿ ಒಬ್ಬ ಭಿಕ್ಷುವು ಆಮಶಂಕೆಯಿಂದ ಕೂಡಿದ್ದಾಗ ಬುದ್ಧನು ತನ್ನ ಶಿಷ್ಯನಾದ ಆನಂದನೊಡನೆ ಆ ಭಿಕ್ಷುವಿನಲ್ಲಿ ಬಂದನು. ಅವನ ಸ್ಥಿತಿಯನ್ನು ನೋಡಿ ಬುದ್ಧ ಅವನ ಬಳಿ

ಬಂದು ಹೇಳಿದನು. ಎಲೈ ಭಿಕ್ಷುವೇ ನಿನ್ನ ರೋಗಕ್ಕೆ ಕಾರಣವೇನು ! ಆಮಶಂಕೆ ಎಂದು ಅದಕ್ಕೆ ಅವನು ಉತ್ತರಿಸಿದನು. ಆದರೆ ನಿನಗೆ ಯಾರೂ ನೋಡಿಕೊಳ್ಳುವವರಿಲ್ಲವೇ? ಇಲ್ಲ. ಏತಕ್ಕೋಸ್ಕರ ಮಿಕ್ಕ ಭಿಕ್ಷುಗಳು ನಿನ್ನನ್ನು ನೋಡಿಕೊಳ್ಳುತ್ತಿಲ್ಲ? ನಾನು ಅಂತಹ ಪ್ರಮುಖನಾಗದಿರುವುದರಿಂದ. ಆನಂದ ಸ್ವಲ್ಪ ನೀರನ್ನು ತಂದ. ಇಬ್ಬರೂ ಆ ಭಿಕ್ಷುವನ್ನು ತೊಳೆದರು. ಅವನನ್ನು ಎಬ್ಬಿಸಿ ಅವನನ್ನು ಹಾಸಿಗೆಯ ಮೇಲಿಟ್ಟರು.

ಈ ಸಂಗತಿಯಾದ ಕೂಡಲೇ ಬುದ್ಧ ಎಲ್ಲಾ ಭಿಕ್ಷುಗಳನ್ನು ಕರೆಸಿ ''ನಿಮ್ಮಲ್ಲಿ ಯಾರಾದರೂ ರೋಗಿಗಳಿರುವರೇ'' ಎಂದು ವಿಚಾರಿಸಿದ ಇದ್ದಾರೆ ಪ್ರಭು. ಹಾಗಿದ್ದರೆ ಆ ಭಿಕ್ಷುವಿಗಿರುವ ರೋಗ ಯಾವುದು? ಅವನಿಗೆ ಆಮಶಂಕೆಯಿದೆ. ಅವನನ್ನು ನೋಡಿಕೊಳ್ಳುವವರು ಯಾರೂ ಇಲ್ಲವೇ? ಅವನಿಗೆ ಗುರುಗಳಿದ್ದರೆ ಆ ಗುರುವು ಇರುವವರೆಗೂ ಅವನನ್ನು ನೋಡಿಕೊಳ್ಳಲಿ. ಅಥವಾ ಅವನಿಗೆ ಯಾರಾದರೂ ಶಿಷ್ಯರಿದ್ದರೆ ಅವನಿಗೆ ಇವರ್ಯಾರೂ ಇಲ್ಲದಿದ್ದರೆ ಅವನನ್ನು ಅವನ ಸಮುದಾಯದವರು ನೋಡಿಕೊಳ್ಳಬೇಕು. ಹಾಗೆ ಮಾಡದಿರುವುದು ತಪ್ಪು. ಕಾರುಣ್ಯ ಎನ್ನುವುದು ಸ್ವಯಂಪ್ರೇರಿತ ಹಾಗೂ ಎಂದೆಂದೂ ಇರಬೇಕು.

ಈ ಧರ್ಮ ಪ್ರವಚನವು ಬೌದ್ಧಧರ್ಮದಲ್ಲಿ ಕಾರುಣ್ಯದ ಪಾತ್ರಕ್ಕೆ ಒಳ್ಳೆಯ ನಿದರ್ಶನ.

ಶ್ರಾವಸ್ತಿಯಲ್ಲಿದ್ದ ಒಬ್ಬ ಯುವಕ ಒಬ್ಬ ಗುರು ಬೋಧಿಸುತ್ತಿದ್ದ ಧರ್ಮ ಕೇಳಿದ. ಸವೇನಾಗೆ ತನ್ನ ಹೃದಯವನ್ನರ್ಪಿಸಿ, ಮನೆಯಿಲ್ಲದವನಾಗಿ ಸಂಘಕ್ಕೆ ನೇಮಕನಾಗಿ ತೇರತಿಸ್ಯ ಎಂದು ನಾಮಾಂಕಿತನಾದ. ಸಮಯ ಕಳೆದಂತೆ ಅವನ ದೇಹದಲ್ಲಿ ಗುಳ್ಳೆಎದ್ದಿತು. ಪ್ರಾರಂಭದ ಹಂತದಲ್ಲಿ ಸಾಸಿವೆಕಾಳಿನಷ್ಟೆ ಇದ್ದರೂ ಅದು ಬೆಳೆಯುತ್ತಾ ಮೂತ್ರಪಿಂಡದ ಆಕಾರವನ್ನೂ, ಹುರುಳಿಯ ಗಾತ್ರವನ್ನೂ, ಕೋಳಿಯ ಮರಿಯ ಆಕಾರವನ್ನೂ, ಹಣ್ಣಿನ ಆಕಾರವನ್ನೂ ತಾಳಿತು. ಅನಂತರ ಕೀವಿನಿಂದ ಅದೆಲ್ಲವೂ ಒಡೆದು ದೇಹವೆಲ್ಲವೂ ಕೂಡಿದಾಗ ತೇರ ಪೂತಿಗತ್ತ ತಿಸ್ಯ ಎಂಬ ನೂತನ ನಾಮಾಂಕಿತವಾಯಿತು. (ಕೊಳೆತದೇಹವುಳ್ಳವನು) ಸ್ವಲ್ಪ ಸಮಯದ ನಂತರ ಅವನ ಮೂಳೆಗಳೂ ಸವೆದು ಯಾರೂ ಅವನನ್ನು ನೋಡಿಕೊಳ್ಳುತ್ತಿರಲಿಲ್ಲ. ಅವನ ಗುಳ್ಳೆಯ ಕೆಳ ಹಾಗೂ ಮೇಲಿನ ಭಾಗವು ರಕ್ತದಿಂದ ಕೂಡಿದ್ದು ಮೊಳೆತ ಚಿಗುರೆಲೆಯಂತೆ ಕಾಣುತ್ತಿತ್ತು. ಅವನೊಂದಿಗಿದ್ದವರು, ಅವನನ್ನು ನೋಡಿಕೊಳ್ಳದೆ ಹೊರಹಾಕಿದಾಗ ಯಾರೂ ಅವನನ್ನು ನೋಡಿಕೊಳ್ಳದೆ ನೆಲದ ಮೇಲೆ ಬಿದ್ದಿದ್ದನು. ಬುದ್ಧ ಅವನಲ್ಲಿ ಸಹಾನುಭೂತಿಯುಳ್ಳವನಾದ, ಅವನಿಗೆ ಗೊತ್ತಿತ್ತು ಬಿಕ್ಕುತಿಸ್ಯ ಅರ್ಹಂತನಾಗಲು ಯೋಗ್ಯನೆಂದು. ತನ್ನಷ್ಟಕ್ಕೆ ತಾನೇ ಅಂದುಕೊಂಡ - ಈ ಬಿಕ್ಕುವು ತನ್ನವರಿಂದ ತಿರಸ್ಕರಿಸಲ್ಪಟ್ಟಿದ್ದಾನೆ. ನನ್ನನ್ನು ಬಿಟ್ಟರೆ ಈಗ ಇವನಿಗೆ ಯಾರೂ ಗತಿಯಿಲ್ಲ. ಕೂಡಲೇ ಬಿಕ್ಕು ಇದ್ದ ಪಡಸಾಲೆಗೆ ಬಂದ. ಭಿಕ್ಕುವಿನ ದೇಹವನ್ನು ತೊಳೆದ. ನೀರು ಬಿಸಿಯಾಗುವವರೆಗೂ ಕಾದ. ಅದು ಕಾದಿದೆಯೆಂದು ತಿಳಿದಾಗ, ಹಾಸಿಗೆಯ ತುದಿಯನ್ನು ಹಿಡಿದುಕೊಂಡು ಅದರ ಮೇಲೆ ಬಿಸಿನೀರನ್ನು ಸಿಂಪಡಿಸಿದ. ಅನಂತರ ತಿಸ್ಸನ ಬಳಿ ನಿಂತು ಬಿಸಿನೀರಿನಿಂದ ದೇಹ

ತೊಳೆದು ಅವನ ಬಟ್ಟೆ ಬದಲಾಯಿಸಿದ. ಅತ್ಯಂತ ಕರುಣಾಮಯವಾದ ಹೃದಯದಿಂದ ಭಿಕ್ಕುವಿಗೆ ಹೇಳಿದ - ಈಗ ನಿನ್ನ ಎಚ್ಚರ ತಪ್ಪುತ್ತದೆ. ನಿನ್ನ ದೇಹದಿಂದ ಪ್ರಯೋಜನವಿಲ್ಲ. ಬುದ್ಧನ ಬೋಧನೆ ಕೊನೆಯಾಗುತ್ತಿದ್ದಂತೆಯೇ ತೇರ ಪೂತಿಗತ್ತ ತಿಸ್ಸ ಅರ್ಹಂತನಾಗಿ ನಿಬ್ಬನನಾದ. ಬುದ್ಧನೇ ಅವನ ಅಂತ್ಯಸಂಸ್ಕಾರ ಮಾಡಿ ಮೃತದೇಹದ ಅವಶೇಷಗಳನ್ನು ಹೊರತೆಗೆದು ಮಂದಿರವನ್ನು ಸ್ಥಾಪಿಸಿದ.

ಈ ಕೆಳಗಿನ ಬುದ್ಧನ ಬೋಧನೆ ಭಿಕ್ಷುಗಳಿಗೆ ಸ್ಪಷ್ಟವಾಗಿ ಅನುಕಂಪೆಯ ಹೆದ್ದಾರಿಯು ತೆಗೆಯಲ್ಪಟ್ಟಿದೆ. ಕುಮಾರ್ಗವು ಮುಚ್ಚಲ್ಪಟ್ಟಿದೆ. ಭಿಕ್ಷುಗಳೇ, ಅನುಕಂಪೆಯಿಂದ ಗುರು ವಿದ್ಯಾರ್ಥಿಗಳಿಗೆ ಏನೆಲ್ಲಾ ಮಾಡಬಹುದೋ ಅದು ನನ್ನಿಂದ ಮಾಡಲ್ಪಟ್ಟಿದೆ ನಿಮ್ಮ ಮೇಲಿರುವ ಅನುಕಂಪದಿಂದ. ಆದ್ದರಿಂದ ಅನುಕಂಪೆ ಹಾಗೂ ಪ್ರೀತಿಯಿಂದ ವರ್ತಿಸಿ.

ಬುದ್ಧನು ಅನುಕಂಪೆಯು ಸಮಾಜದ ಒಳಿತಿಗೋಸ್ಕರ ಇತ್ತೆಂದು ಮಹಾಕರುಣಾ ಸಾರುತ್ತದೆ - ಇದು ಕೇವಲ ಬುದ್ಧನಿಗೆ ಮಾತ್ರವೇ ಸೀಮಿತವಾದುದಲ್ಲ. ಸಮಗ್ರ ಭಾರತೀಯ ಪರಂಪರೆಯ ಅತ್ಯುತ್ಕೃಷ್ಟ ಅಂಗವೇ ಅದಾಗಿದೆ. ಭಗವಂತನು ''ಕರುಣಾ ವರುಣಾಲಯನು'' ಕರುಣಾಸಾಗರನು, ಕರುಣಾವತಾರನು. ಅವನ ಕರುಣೆಯಿಂದಲೇ ಅವನು ಸಮಸ್ತವಿಶ್ವವನ್ನೂ ನಡೆಯುವಂತೆ ಮಾಡುತ್ತಾನೆ.

---

ಆಕರಗ್ರಂಥಗಳು

1) 59.43 2) 1.2.158 3) 5.3.76 4) ಮಾಲವಿಕಾಗ್ನಿಮಿತ್ರ. ಮೂರನೇ ಅಂಕ 5) ಮಾಲತೀ ಮಾಧವ ಹತ್ತನೆಯ ಅಂಕ 6) ರಘುವಂಶ 2.63 7) ಸಂಪಾದನೆ.ಕಾಲೆ. ಎಂ.ಆರ್.ಗೋಪಾಲ್ ನಾರಾಯಣ್ ಅಂಡ್ ಕಂಪನಿ. ಬಾಂಬೆ. 1920.ಅಡಿಟಪ್ಪಣಿ .ಪು.64 8) ಮೂರನೆಯ ಅಂಕವು. 9) ಏಳನೆಯ ಅಂಕ.24ನೇ ಪದ್ಯವಾದ ಬಳಿಕ 10) ಉತ್ತರಮೇಘ.52ನೇ ಶ್ಲೋಕ 11) 2.35 12)ರಘುವಂಶ.9.80 13) 3.3. 14) ಸಂಪಾದನೆ.ಕಾಳೆ. ಎಂ.ಆರ್.ಗೋಪಾಲ್ ನಾರಾಯಣ್ ಅಂಡ್ ಕಂಪನಿ. ಬಾಂಬೆ. ಪು.30. 15) ಪುಟ.134. 16) ಪುಟ.61 17) ಗೀತಾ.1.28 18) ಕುಮಾರ ಸಂಭವ.5.26 19) ಅದ್ಯಾತ್ಮಕಲ್ಪದ್ರುಮ.10.11 20) 6.11. 21) ರಘುವಂಶ.8.67. 22) ಎರಡನೇ ಅಂಕ 23) ಉತ್ತರಮೇಘ.30 24) 1.135 25) ಮನುಸ್ಮೃತಿ.8.350 26) ಕಾಮಂದಕನೀತಿಸಾರ .36. 27) 1.2.11 28) 1.2.13 29) 1.2.15 30) 1.2.40 31) ರಾಮಾಯಣ.ಉತ್ತರಕಾಂಡ.96.19. 32) ವನಪರ್ವ.1.31 33) 48 34) ಎಂಬತ್ತನೇ ಅಧ್ಯಾಯ

# 7. ಚಿತ್ತಶುದ್ಧಿ

ಪ್ರಕೃತಿ ಮಾನವನಿಗೆ ಎಲ್ಲ ರೀತಿಯ ಅನುಭವಗಳನ್ನೂ ನೀಡಿದೆ. ಒಳ್ಳೆಯ, ಕೆಟ್ಟ ಒಳ್ಳೆಯವುವೆಂದರೆ ಪ್ರೀತಿ, ಅನುಕಂಪ, ನೆಮ್ಮದಿ, ಕೆಟ್ಟವುದೆಂದರೆ, ಮದ, ಮಾತ್ಸರ್ಯ, ಕೋಪ, ಸಿಟ್ಟು ಇತ್ಯಾದಿ. ಈಗ ಈ ಎರಡರ ಮಧ್ಯದಲ್ಲಿ ಆರಿಸಿಕೊಳ್ಳುವುದು ಅವನಿಗೆ ಬಿಟ್ಟಿದ್ದು. ಅವನು ಒಳ್ಳೆಯವರ ಬಳಿ ಹೋದರೆ ಅವನ ಮನಸ್ಸು ಶಾಂತವಾಗಿರುತ್ತದೆ. ಕೆಟ್ಟ ವಿಷಯಗಳಿಂದ ದೂರವಿರುವುದೇ ಚಿತ್ತಶುದ್ಧಿ. ಮಾನಸಿಕ ಶುದ್ಧಿ, ಈ ಶುದ್ಧಿಯಿಂದ, ಪ್ರಸಾದ, ಅವನು ತನ್ನ ತೊಂದರೆಗಳಿಂದ ಹೊರಬರುವನು ಗೀತೆಯಲ್ಲಿ ಪರಮಾತ್ಮ ಹೇಳಿರುವಂತೆ, ಪ್ರಸಾದೇ ಸರ್ವಭೂತಾನಾಂ ಹಾನಿರಸ್ಯೋಪಜಾಯತೇ[1] ಯಾವಾಗ ಮನಸ್ಸು ಶಾಂತವಾಗಿರುವುದೋ ಪ್ರಸನ್ನಚೇತಸಃ[2] ಅವನ ಮನಸ್ಸು ಸ್ಥಿರತೆಯನ್ನು ಹೊಂದುತ್ತದೆ ಮತ್ತು ನಿಶ್ಚಲವಾಗುತ್ತದೆ. ಬುದ್ಧಿಃ ಪರ್ಯವತಿಷ್ಠತೇ. ಆಗ ಅದಕ್ಕೆ ಯಾವುದೇ ರೀತಿಯ ಅನಿಶ್ಚಿತತೆ, ದ್ವಂದ್ವಗಳು ಇರುವುದಿಲ್ಲ. ಇದರಿಂದ ಮಾನವನು ಸರಿಯಾದ ನಿರ್ಧಾರಕೈಗೊಳ್ಳಲು ಸಹಾಯವಾಗುವುದು. ಮಾನಸಿಕ ನಿಶ್ಚಲತೆಯೇ ಸರಿಯಾದ ಆಲೋಚನೆ ಹಾಗೂ ಸರಿಯಾದ ಮಾರ್ಗಕ್ಕೆ ಪೂರ್ವಭಾವಿಯಾಗಿರುತ್ತದೆ. ಆದ್ದರಿಂದಲೇ ಪ್ರಾಚೀನಗ್ರಂಥಗಳು ಚಿತ್ತಶುದ್ಧಿಗೆ ಒತ್ತುಕೊಟ್ಟಿದೆ.

ಚಿತ್ತಂ ವಿನೋದಯೇತ್ ತಸ್ಮಾತ್ ಕಿಮನ್ಯೈಃ ಬಾಹ್ಯಶೋಧನೈಃ ।
ಭಾವತಃ ಸಂವಿಶುದ್ಧಾತ್ಮಾ ಸ್ವರ್ಗಂ ಮೋಕ್ಷಂಚ ವಿಂದತಿ ॥ [3]

ಆದ್ದರಿಂದ ಪ್ರತಿಯೊಬ್ಬರೂ ಚಿತ್ತಶುದ್ಧಿ ಮಾಡಿಕೊಳ್ಳಬೇಕು. ಮಿಕ್ಕ ಶುದ್ಧಿಗಳಿಂದೇನು ಪ್ರಯೋಜನ? ಯಾರಿಗೆ ಚಿತ್ತಶುದ್ಧಿಯಿದೆಯೋ ಅವರು ಸ್ವರ್ಗವನ್ನೂ ಮೋಕ್ಷವನ್ನೂ ಪಡೆಯುತ್ತಾರೆ. ಈ ಚಿತ್ತಶುದ್ಧಿಯಿಂದ ಅವನು ಒಳ್ಳೆಯ ಅಥವಾ ಕೆಟ್ಟ ಕ್ರಿಯೆಗಳಿಂದ ಹೊರಬರುತ್ತಾನೆ. ಚಿತ್ತಶುದ್ಧಿಯು ಅವನ ಆತ್ಮನಲ್ಲೇ ನೆಲೆಸಿದ್ದು ಅವನಿಗೆ ಶಾಶ್ವತ ಸುಖವನ್ನುಂಟುಮಾಡುತ್ತದೆ.

ಚಿತ್ತಶುದ್ಧಿ ಬಾಯಲ್ಲಿ ಹೇಳುವುದು ಸುಲಭ ಆದರೆ ಮಾಡಲು ಕಷ್ಟವು. ಭಗವಂತನು ಅರ್ಜುನನೊಡನೆ ಸಮ್ಮತಿಸುತ್ತಾನೆ. ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ದೃಢಂ[4]. ಸಹಜವಾಗಿಯೇ ಅಸ್ಥಿರವಾಗುವುದರೊಂದಿಗೆ ಮನಸ್ಸು ತೊಂದರೆಕೊಡುತ್ತದೆ. ನಮ್ಮ ಅಧೀನದಲ್ಲಿರುವುದಿಲ್ಲ –ಅದರ ನಿಗ್ರಹವು ಗಾಳಿಯನ್ನು ನಿಗ್ರಹಿಸುವಷ್ಟೇ ಕಷ್ಟ – ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ.[5] ಭಗವಂತನ ಪ್ರಕಾರ ಅಭ್ಯಾಸ ಹಾಗೂ ವೈರಾಗ್ಯದಿಂದ ಅದನ್ನು ಹಿಡಿತದಲ್ಲಿರಿಸಬಹುದು.

ಆದರೆ ಅಭ್ಯಾಸ ಹಾಗೂ ವೈರಾಗ್ಯ ಅಷ್ಟು ಸುಲಭವಾದುದಲ್ಲ. ಅವು ಕಠಿಣಸಾಧ್ಯವಾದವುಗಳು. ಹದಿನಾರನೇ ಅಧ್ಯಾಯ ಗೀತೆಯಲ್ಲಿ ಭಗವಂತ ಮೂರು ರೀತಿಯಾದ ತಪಸ್ಸನ್ನು ವರ್ಣಿಸಿದ್ದಾನೆ – ಶಾರೀರ, ವಾಚಿಕ ಹಾಗೂ ಮಾನಸಿಕ[6]. ಮಾನಸಿಕ ತಪಸ್ಸೆಂದರೆ ಮನಸ್ಸನ್ನು ನಿಗ್ರಹಿಸುವುದು, ಸೌಮ್ಯವಾದ ಆಕಾರವಿರುವುದು (ಕೆಟ್ಟ ಯೋಚನೆಗಳನ್ನು ಬಿಡುವುದು)

ಮನಃ ಪ್ರಸಾದ ಸೌಮ್ಯತ್ವಂ ಮೌನಂ ಆತ್ಮವಿನಿಗ್ರಹಃ |
ಭಾವಸಂಶುದ್ಧಿರಿತ್ಯೇತ್ತತ್ ತಪೋ ಮಾನಸಮುಚ್ಯತೇ ||8

ಗೀತೆಯಲ್ಲಿ ಕೊನೆಯಲ್ಲಿ ನಿರೂಪಿತವಾಗಿದ್ದರೂ, ಮಾನಸ ತಪಸ್ಸು ಮಿಕ್ಕವುಗಳಿಗಿಂತಲೂ ಮುಖ್ಯವಾದುದು, ಏಕೆಂದರೆ ಎಲ್ಲಕ್ಕೂ ಅದೇ ಆಧಾರವು. ಮನಃಶುದ್ಧಿಯಿಂದ ಮಾತು ಹಾಗೂ ದೇಹಶುದ್ಧಿಯುಂಟಾಗುತ್ತದೆ. ಆದ್ದರಿಂದ ಮೊದಲು ಮನಃಶುದ್ಧಿಯನ್ನು ಮಾಡಿಕೊಳ್ಳಬೇಕು. ಅನಂತರ ಅಭ್ಯಾಸ ಇತ್ಯಾದಿಗಳು ಸಹಜವಾಗಿಯೇ ಆಗುತ್ತದೆ. ಶಿವಸಂಕಲ್ಪ ಅಥವಾ ಒಳ್ಳೆಯ ಸಂಕಲ್ಪ, ಒಳ್ಳೆಯ ನಿರ್ಧಾರಗಳು, ಇಂದ್ರಿಯ ನಿಗ್ರಹ ಅತೀವ ಅವಶ್ಯಕವಾದುದು. ನಮ್ಮ ಮನಸ್ಸೇ ಬಂಧನಕ್ಕೆ ಅಥವಾ ಬಿಡುಗಡೆಗೆ ಕಾರಣವಾದುದು :- ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ. ರಾಗದ್ವೇಷಗಳು ಮನಸ್ಸಿನಿಂದಲೇ ಹುಟ್ಟುತ್ತದೆ. ಈ ಕೆಟ್ಟಗುಣಗಳಿಂದ ರಹಿತವಾದ ಮನಸ್ಸು ತಪ್ಪು ಮಾಡುವುದಿಲ್ಲ. ಅದು ಶಾಂತವಾಗಿರುತ್ತದೆ.

ಚಿತ್ತಶುದ್ಧಿಗೆ ಪ್ರಪಂಚವನ್ನು ತೊರೆಯುವ ಅಗತ್ಯವಿಲ್ಲ. ಪ್ರಾಪಂಚಿಕ ವಿಷಯಗಳೊಡನೆ ಇದ್ದರೂ ಸಹ ಅದಕ್ಕೆ ಅಂಟದಂತೆ ಇರಬಹುದು. ಅವನು ಅನಾಸಕ್ತನಾಗಿರುವುದರಿಂದ ಅವನ ಕ್ರಿಯೆಗಳು ಸರಿಯಾಗಿಯೇ ಇರುವುದು. ಅಂತಹವನ ಮನಸ್ಸು ಯಾವ ಆಘಾತಕ್ಕೂ ಒಳಗಾಗುವುದಿಲ್ಲ – ಅನುಪಪ್ಲುತ ಚೇತಸಃ[9]. ಅಂತಹವರು ಹಿಂದಿನ ಮುಂದಿನ ಘಟನೆಗಳನ್ನು ಕಾಣುವವರಾಗುತ್ತಾರೆ – ಅತೀತಾನಾಗತಜ್ಞಾನಂ ಪ್ರತ್ಯಕ್ಷಂನ ವಿಶಿಷ್ಯತೇ.

ಸತ್ವಶುದ್ಧಿಗಿರುವ ಅನೇಕ ಪೂರ್ವಸಿದ್ಧತೆಗಳಲ್ಲಿ ಮಾನಸಿಕಶುದ್ಧಿ, ಆಹಾರಶುದ್ಧಿಯೂ ಮುಖ್ಯ. ಉಪನಿಷತ್ತು ಆದೇಶಿಸುತ್ತದೆ – ಆಹಾರ ಶುದ್ಧೌ ಸತ್ವಶುದ್ಧಿಃ[10]. – ತೆಗೆದುಕೊಳ್ಳುವ ಆಹಾರ ಶುದ್ಧವಾಗಿದ್ದರೆ ಅವರ ಮನಸ್ಸೂ ಶುದ್ಧವಾಗಿರುತ್ತದೆ. ಅದು ದೇಹಶುದ್ಧಿಯಲ್ಲಿ ಅವೆರಡಕ್ಕೂ ಒತ್ತನ್ನು ಕೊಡಲಾಗಿದೆ. ಶತಂ ವಿಹಾಯ ಭೋಕ್ತವ್ಯಂ , ಸಹಸ್ರಂ ಸ್ನಾನಮಾಚರೇತ್. ಊಟಕ್ಕಾಗಿ ನೂರು ಕ್ರಿಯೆಗಳನ್ನು ಬಿಡಬೇಕು ಸಾವಿರ ಕ್ರಿಯೆಗಳನ್ನು ಬಿಟ್ಟು ಸ್ನಾನ ಮಾಡಬೇಕು. ಸ್ನಾನವು ದೈಹಿಕ ಶುದ್ಧಿಯನ್ನು ಉಂಟು ಮಾಡಿ ಮಾನಸಿಕ ಶುದ್ಧಿಗೆ ಸಹಕಾರಿಯಾಗುತ್ತದೆ.

ಬಹಳ ಹಿಂದಿನಿಂದಲೂ ಸಹ ಮುನಿಗಳು ತಮ್ಮ ಒಳ್ಳೆಯ ಮನೋನಿರ್ಧಾರಕ್ಕಾಗಿ ನಿಶ್ಚಯಿಸಿದ್ದಾರೆ – ಮೇ ಮನಃ ಶಿವಸಂಕಲ್ಪಮಸ್ತು[11] ನಮ್ಮ ಮನಸ್ಸು ಸನ್ಮಾರ್ಗದತ್ತ ಇರಲಿ – ಅಗನ್ಮಹಿ ಮನಸಾ ಸಂಶಿವೇನ[12] ನಮ್ಮ ಹೃದಯವು ದುಃಖರಹಿತವಾಗಿರಲಿ – ಅಸಂತಾಪಂ ಮೇ ಹೃದಯಂ. ನಾನು ಒಳ್ಳೆಯ ಭಾವನೆಗಳನ್ನು ಹೊಂದುವಂತಾಗಲಿ. ಆಕೂತಿಂ ದೇವೀಮ್ ಸುಭಗಂ ಪುರೋದಧೇ.[13]

---

ಆಕರ ಗ್ರಂಥಗಳು

1) 2.65 2) ಅದೇ 3) ಸ್ಕಂದಪುರಾಣ ಮಾ.ಕೌ. 42.63-64 4) ಭಗವದ್ಗೀತಾ.6.34 5) ಅದೇ 6) ಅದೇ 7) ಅದೇ.17.14-16 8) ಬ್ರಹ್ಮಬಿಂದೂಪನಿಷತ್. 29) ವಾಕ್ಯಪದೀಯ.1.37 10) ಯಜುರ್ವೇದ. 6.53.3. ವಾಜಸನೇಯಿ ಸಂಹಿತಾ. 34.5.6. 11) ಅಥರ್ವವೇದ 6.53.3 12) ಅದೇ. 16.3.6. 13) ಅದೇ. 19.4.2.

# 8. ಧೈರ್ಯ

ಮಹಾಭಾರತದಲ್ಲಿ ನಿರೂಪಿಸಿರುವಂತೆ ಧೈರ್ಯ ಎಂದರೆ ಸಂತೋಷವಾಗಲೀ, ದುಃಖವಾಗಲೀ ಧೃತಿಗೆಡದೆ ಒಂದೇ ಸಮನಾಗಿರುವುದು :- ಧೃತಿರ್ನಾಮ ಸುಖೇ ದುಃಖೇಯಥಾ ನಾಪ್ನೋತಿ ವಿಕ್ರಿಯಾಮ್[1]. ಸುಖದುಃಖಗಳಲ್ಲಿ ಒಂದೇ ಸಮನಿದ್ದು ದುಃಖದಲ್ಲಿ ಕುಗ್ಗದೆ, ಸುಖದಲ್ಲಿ ಹಿಗ್ಗದೆ ಇರುವುದೇ ಧೈರ್ಯದ ತಿರುಳು. ಯಾರು ಎಲ್ಲಾ ಸಮಯದಲ್ಲೂ ಇದನ್ನು ಅನುಸರಿಸುವರೋ ಅವರೇ ಧೀರರು. ದುಃಖೈರ್ನತಪ್ಯೇತ ನ ಸುಖೈಃ ಪ್ರಹೃಷ್ಯೇತ್ ಸಮೇನ ವರ್ತೇತ ಸದೈವ ಧೀರಃ[2]. ಕಾಳಿದಾಸ ಅದರ ಸಾರವನ್ನೇ ಶಿವ ಪಾರ್ವತಿಗೆ ತನ್ನ ಸೇವೆ ಮಾಡುವಂತೆ ಹೇಳಿದ್ದು ಅದು ತನ್ನ ಏಕಾಗ್ರತೆಯಿಂದ ಕೂಡಿದ ತಪಸ್ಸಿಗೆ ಬಂಧ ಬರಬಹುದೆಂಬುದಾಗಿ ತಿಳಿದೂ ಸಹ ''ಪ್ರತ್ಯರ್ಥಿಭೂತಾಮಪಿತಾಂ ಸಮಾಧೇಃ'' ಯಾರು ತಮ್ಮ ಏಕಾಗ್ರತೆಗೆ ಭಂಗ ಬರುವ ಸನ್ನಿವೇಶವಿದ್ದರೂ ವಿಚಲಿತರಾಗುವುದಿಲ್ಲವೋ ಅವರೇ ಧೀರರು :- ವಿಕಾರಹೇತೌಸತಿವಿಕ್ರಿಯಂತೇ ಯೇಷಾಂನ ಚೇತಾಂಸಿ ತ ಏವ ಧೀರಾಃ. ಸನ್ನಿವೇಶ ಎಷ್ಟೇ ಕೀಳಾಗಿದ್ದರೂ ಯಾರು ತಮ್ಮ ಮೇಲೆ ಹತೋಟಿಯನ್ನು ತಪ್ಪುವುದಿಲ್ಲವೋ ಅವರೇ ಧೀರರು. ಅತ್ಯಂತ ದಾರುಣವಾದ ಘಟನೆಗಳನ್ನೂ ಧೀರರು ಎದೆಗುಂದದೆ ಎದುರಿಸುವರು. ಕಷ್ಟಸನ್ನಿವೇಶದಲ್ಲೂ ಧೃತಿಗೆಡದಿರುವುದು ಅವರ ವ್ಯಕ್ತಿತ್ವವನ್ನು ತೋರಿಸುತ್ತದೆ. ಜೀವನದಲ್ಲಿ ಸಫಲರಾಗಲು ಈ ಧೃತಿಯೇ ಅತ್ಯಂತ ಮುಖ್ಯವಾದುದು. ಸಾಧಾರಣವಾಗಿ ಹುಟ್ಟಿನಿಂದಲೇ ಬರುವ ಇದನ್ನು ಬಲ್ಲವರಿಂದ ಸಲಹೆಯಿಂದ ಕಲಿಯಲೂಬಹುದು. ಅಥವಾ ಏಕಾಗ್ರತೆಯಿಂದ ಕೂಡಿದ ಅಭ್ಯಾಸದಿಂದಲೂ ಪಡೆಯಬಹುದು. ತನ್ನ ಬಗ್ಗೆ ಹತೋಟಿ ಕಳೆದುಕೊಳ್ಳುವಂತಹ ಪರಿಸ್ಥಿತಿಗಳು ಮಾನವರ ಜೀವಿತದಲ್ಲಿ ಕೆಲವೊಮ್ಮೆ ಬರಬಹುದು. ಆಗ ಅವನು ತನ್ನನ್ನು ತಾನು ಹಿಡಿತದಲ್ಲಿಟ್ಟುಕೊಂಡರೆ ಹೊಸ ಮಾರ್ಗವನ್ನೇ ಆರಂಭಿಸಬಹುದು. ಬಾಯಲ್ಲಿ ಹೇಳುವುದು ಸುಲಭವಾದರೂ ಸಹ ಅನುಷ್ಠಾನದಲ್ಲಿ ಕಷ್ಟಕರವಾದ ಅದನ್ನು ಅನುಸರಿಸಲು ಧೃತಿಗೆಡದೆಯಿದ್ದು, ಭಾವಪರವಶತೆಗೆ ಸಿಲುಕದೆ, ಭಾವಾತಿರೇಕಕ್ಕೊಳಗಾಗದೆ ಸಹಾನುಭೂತಿಗೆ ಮಣೆಯದೇ ಇರಬೇಕು. ಇದೇ ವಸಿಷ್ಠರು ಅಜನಿಗೆ ನೀಡಿದ ಬೋಧನೆಯ ಸಾರ. ಯಾವಾಗ ಅವನು ರಾಜ್ಯಭಾರದತ್ತ ಗಮನ ವಹಿಸದೆ ಇದ್ದನೋ ರಘುವಂಶದಲ್ಲಿ ನಿರೂಪಿಸಿರುವಂತೆ ಆಗ ಪತ್ನಿಯಾದ ಇಂದುಮತಿಯ ವಿಯೋಗದಿಂದ :- ದ್ರುಮಸಾನುಮತಾಂಕಿಮಂತರಂ ಯದಿ ವಾಯೌ ದ್ವಿತಯೇಽಪಿ ಚತೇ ಚಲಾಃ. ಗಾಳಿಗೆ ಅಲ್ಲಾಡುವಂತಿದ್ದರೆ ಮರಕ್ಕೂ, ಬೆಟ್ಟಕ್ಕೂ ಏನು ತಾನೇ ವ್ಯತ್ಯಾಸ? ಎಲ್ಲಾ ಕಷ್ಟಗಳನ್ನೂ ಸಹ ಎದ್ದುನಿಂತು ದೃಢವಾಗಿ ಎದುರಿಸಬೇಕು ಮತ್ತು ಅದರಿಂದ ಧೃತಿಗೆಡಬಾರದು. ಇದೇ ಸರಿಯಾದ ವ್ಯಕ್ತಿತ್ವವುಳ್ಳವರ ಸಂಕೇತ. ಆದ್ದರಿಂದಲೇ ಸನ್ಮಾರ್ಗಕ್ಕೆ ಇದೇ ಮೊದಲನೆಯ ಹೆಜ್ಜೆಯು:-

ಧೃತಿಃಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಂ ॥[1]

ಧೃತಿಯೇ ಎಲ್ಲಕ್ಕಿಂತಲೂ ಮುಖ್ಯವಾದುದು. ಜೀವನದ ಕಠಿಣ ಸಂದರ್ಭಗಳಲ್ಲಿ ಅತ್ಯಂತ ಕಷ್ಟಕರವಾದುದನ್ನು ಪಡೆಯಲು ಸಮಬುದ್ಧಿಯಿಂದ ವರ್ತಿಸಲು ಎಲ್ಲರಿಂದಲೂ ಮನ್ನಣೆ ಪಡೆಯಲು ಧೃತಿಯೇ ಮುಖ್ಯವಾದುದು. ರಾಮನು ಯುವರಾಜನೆಂದು ಪ್ರಕಟಿಸಿದ ಬಳಿಕ ತಂದೆಯ ಎದುರು ಸುಮಂತ್ರ ಎಂಬ ರಥಿಕನು ಅರಮನೆಯಲ್ಲಿ ನಡೆದದ್ದರ ಬಗ್ಗೆ ಯಾವ ಮಾಹಿತಿಯೂ ಇಲ್ಲದೆ ಇದ್ದನು. ಯಾವಾಗ ಅವನು ಪ್ರಜೆಗಳ ಹರ್ಷಾತಿರೇಕವನ್ನು ಮುಖತಃ ಕಂಡನೋ ತನ್ನ ತಂದೆಯಾದ ದಶರಥ ಮಡದಿಯಾದ ಕೈಕೇಯಿಯು ಪಕ್ಕದಲ್ಲೇ ತನ್ನನ್ನು ಸರಿಯಾಗಿ ಸಂಬೋಧಿಸಲಿಲ್ಲವೋ. ಕೈಕೇಯಿಯು ಎರಡು ವರಗಳ ಬಗ್ಗೆ ಪ್ರಸ್ತಾಪಿಸಿದಳು, ಅದರ ಪ್ರಕಾರ ಭರತನಿಗೆ ರಾಜ್ಯ ಮತ್ತು ರಾಮನಿಗೆ 14 ವರ್ಷ ವನವಾಸ. ಇಂತಹ ವಿಪರೀತವಾದ ಸಂದರ್ಭವೂ ಸಹ ರಾಮನ ಮೇಲೆ ಯಾವ ಪರಿಣಾಮವನ್ನು ಬೀರಲಿಲ್ಲ.ಅದರಿಂದ ಅವನು ದುಃಖಿತನೂ ಆಗಲಿಲ್ಲ, ಧೃತಿಯನ್ನೂ ಗೆಡಲಿಲ್ಲ.

ನಚೈವ ರಾಮಃ ಪ್ರವಿವೇಶ ಶೋಕಂ[7].

ಕಾಡಿಗೆ ಹೋಗುವಾಗಲೂ ಮಾನಸಿಕವಾಗಿ ಯಾವ ಗೊಂದಲವೂ ಇಲ್ಲದೆ, ರಾಜ್ಯಭಾರವನ್ನು ತೊರೆದಾಗಲೂ ಅದೇ ರೀತಿ ಇದ್ದು ಜೀವನ್ಮುಕ್ತನಂತೆ ರಾಮ ತೋರುತ್ತಿದ್ದ:-

ನ ವನಂಗಂತುಕಾಮಸ್ಯ ತ್ಯಜತಶ್ಚವಸುಂಧರಾಮ್ ।
ಸರ್ವ ಲೋಕಾತಿಗಸ್ಯೇವ ಲಕ್ಷ್ಯತೇ ಚಿತ್ತವಿಕ್ರಿಯಾ ॥ [8]

ಮಾರೀಚನನ್ನು ಸಂಹರಿಸಿ ಸೀತೆಯಿಲ್ಲದ ಪರ್ಣಕುಟೀರವನ್ನು ಕಂಡು ರಾಮ ಧೃತಿಗೆಟ್ಟವನಾದನು. ಸ್ವಲ್ಪ ಸಮಯದಲ್ಲೇ ತನ್ನನ್ನೇ ತಾನು ಸಮಾಧಾನ ಪಡಿಸಿಕೊಂಡು, ಕಪಿಗಳೊಂದಿಗೆ ಕರಡಿಗಳೊಂದಿಗೆ ಸಂಧಾನ ಮಾಡಿಕೊಂಡು ಅವರ ಸಹಾಯದಿಂದ ರಾವಣನನ್ನು ಸಂಹರಿಸಿ ಸೀತೆಯನ್ನು ಪುನಃ ಪಡೆದ.

ಮಹಾತ್ಮರು ರಕ್ತಗತವಾಗಿಯೇ ಕಷ್ಟಕರ ಸಂದರ್ಭಗಳಲ್ಲೂ ತಮ್ಮ ಸಮತೋಲನ ಕಳೆದುಕೊಳ್ಳದೆ ಸ್ಥಿರವಾಗಿರುವರು. ಹಿತೋಪದೇಶ ನಿರೂಪಿಸುವಂತೆ .

ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ
ಸದಸಿ ವಾಕ್ಪಟುತಾ ಯುಧಿ ವಿಕ್ರಮಃ ।
ಯಶಸಿ ಚಾಭಿರುಚಿರ್ವ್ಯಸನಂ ಶ್ರುತೌ
ಪ್ರಕೃತಿ ಸಿದ್ಧಮಿದಂ ಹಿ ಮಹಾತ್ಮನಾಮ್ ॥ [9]

ವಿಪತ್ತಿನಲ್ಲಿ ಎದೆಗುಂದದಿರುವಿಕೆ, ಏಳಿಗೆ ಹೊಂದಿದಾಗ ಕ್ಷಮಾಗುಣ, ಸಭೆಯಲ್ಲಿ ಮಾತಿನ ಚಟಾಕಿ, ಯುದ್ಧದಲ್ಲಿ ಪರಾಕ್ರಮ, ಕೀರ್ತಿಯ ಕಾಮನೆ, ವಿದ್ಯೆಯಲ್ಲಿ ಆಸಕ್ತಿ ಇವೆಲ್ಲವೂ ಮಹಾತ್ಮರಿಗೆ ಸಹಜ ಸಿದ್ಧವಾದುದು.

ಮಹಾತ್ಮಾ ಗಾಂಧೀಜೀಯವರು ಆಂಗ್ಲರ ಮೇಲೆ ಹೋರಾಡುವಾಗ ಆಂಗ್ಲರ ಪರಾಕ್ರಮ ಗಾಂಧೀಜಿಯವರಿಗೆ ಗೊತ್ತಿಲ್ಲದಿರಲಿಲ್ಲ. ಸುಭಾಷ್ ಚಂದ್ರಬೋಸ್ ಅವರು ಭಾರತೀಯ ರಾಷ್ಟ್ರಸೇನೆ ನಿರ್ಮಾಣ ಮಾಡಿದಾಗ ಅವರಿಗೂ ಆಂಗ್ಲರ ಬಲಗೊತ್ತಿಲ್ಲದಿರಲಿಲ್ಲ. ಹಾಗಿದ್ದರೂ ಅವರು ಮುಂದುವರೆಸಿದರು. ಅವರ ತಾಳ್ಮೆಯೇ ಅವರಿಗೆ ಸಹಕರಿಸಿ ರಾಷ್ಟ್ರವನ್ನು ವಿದೇಶೀಯ ದಬ್ಬಾಳಿಕೆಯಿಂದ ಮುಕ್ತಗೊಳಿಸಿ ಸ್ವತಂತ್ರವನ್ನಾಗಿಸಿತು. ಇದೇ ಮಾತು ಅಸಂಖ್ಯಾತ ಯೋಧರ ವಿಷಯದಲ್ಲೂ ತತ್ವವಾಗಿತ್ತು. ಅವರು ವಿದೇಶೀಯ ದಬ್ಬಾಳಿಕೆಯಿಂದ ಧೃತಿಗೆಡಲಿಲ್ಲ. ತಮ್ಮ ಕೊನೆಯ ಕಾಲದವರೆಗೂ ಅವರು ಉತ್ಸಾಹದಿಂದಲೇ ಇದ್ದರು.

ಅವರು ಉಕ್ಕಿನ ಮನುಷ್ಯರಾಗಿದ್ದರು. ಅಂತಹವರೇ ಜೀವನದಲ್ಲಿ ಗುರಿಮುಟ್ಟಲು ಸಾಧ್ಯವು. ಧೃತಿಯಿಲ್ಲದವರು ಜೀವನದಲ್ಲಿ ಏನನ್ನೂ ಸಾಧಿಸಲಾಗುವುದಿಲ್ಲ. ಮಧ್ಯಮಾರ್ಗದವರು ಕೆಲಸ ಪ್ರಾರಂಭಿಸಿ ಮಧ್ಯದಲ್ಲೇ ಕೈಬಿಡುತ್ತಾರೆ. ಆದರೆ ಉತ್ತಮರು ಎಷ್ಟೇ ಕಷ್ಟಬಂದರೂ ಧೃತಿಗೆಡದೆ ತಮ್ಮ ಗುರಿ ಸಾಧಿಸುತ್ತಾರೆ.

ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈಃ
ಪ್ರಾರಭ್ಯ ವಿಘ್ನವಿಹತಾ ವಿರಮಂತಿ ಮಧ್ಯಾಃ ।
ವಿಘ್ನೈಃ ಪುನಪುನರಪಿ ಪ್ರತಿಹನ್ಯಮಾನಾ
ಪ್ರಾರಬ್ಧಂ ಉತ್ತಮ ಗುಣಾ ನ ಪರಿತ್ಯಜಂತಿ ॥ [10]

ಇದರ ನೀತಿಯೆಂದರೆ ಸಮಯ ಕಷ್ಟಕರವಾಗಿದ್ದರೂ ಸಹ ತಮ್ಮ ಧ್ಯೇಯ ಹಾಗೂ ಸಮತೋಲನವನ್ನು ಬಿಡಬಾರದೆಂಬುದೇ ಆಗಿದೆ.

ತ್ಯಾಜ್ಯಂ ನಧೈರ್ಯಂ ವಿಧುರೇಽಪಿ ಕಾಲೇ [11]

ತಮ್ಮನ್ನು ತಾವು ನಿಯಂತ್ರಿಸಿಕೊಂಡರೆ, ಅಂತಹವರು ತಮ್ಮ ಗುರಿ ಸಾಧಿಸುತ್ತಾರೆ - ಧೈರ್ಯಾತ್ ಕದಾಚಿತ್‌ಗತಿಮಾಪ್ನುಯಾತ್‌ಸಃ[12].

ಒಂದು ವೇಳೆ ಹಡಗು ಮುಳುಗಿದರೂ ಸಹ ಧೈರ್ಯವಂತ ಈಜುವುದನ್ನು ಬಿಡುವುದಿಲ್ಲ. ಚರಿತ್ರೆ ಸಮುದ್ರ ಈಜಿದವರನ್ನು ಉಲ್ಲೇಖಿಸುತ್ತದೆ. ಇದಕ್ಕಿರುವ ಗಮನಾರ್ಹ ಉದಾಹರಣೆಯೆಂದರೆ ವೀರಸಾವರ್‌ಕರನು ಕೊರೆಯುವ ಚಳಿಯಲ್ಲೂ ಪ್ಯಾರೀಸ್ ನಗರದಲ್ಲಿಸಮುದ್ರಕ್ಕೆ ಧುಮುಕಿದ.

ಸಮತೋಲನೆಯ ಪರಿಭಾಷೆಯನ್ನರಿಯಬೇಕಾದರೆ ಕಾಳಿದಾಸನಿಗೇ ಮೊರೆ ಹೋಗಬೇಕು :-

ವಿಕಾರ ಹೇತೌಸತಿ ವಿಕ್ರಿಯಂತೇ ಯೇಷಾಂನ ಚೇತಾಂಸಿ ತ ಏವ ಧೀರಾಃ.[13]

ವಿಕಾರಕ್ಕೆ ಕಾರಣವಾಗುವ ಸಂದರ್ಭದಲ್ಲೂ ಯಾರು ತಮ್ಮ ಸಮತೋಲನ ಕಳೆದುಕೊಳ್ಳುವುದಿಲ್ಲವೋ ಅವರೇ ಧೀರರು.

ಸಮತೋಲನಕ್ಕಿರುವ ಮತ್ತೊಂದು ವ್ಯಾಖ್ಯಾನವೆಂದರೆ ಸಂಪತ್ತಿರಲಿ, ನಷ್ಟವಾಗಲೀ ಒಂದೇ ಸಮನೆ ವರ್ತಿಸುವುದು :-

ಸಂಪತ್ತೌಚ ವಿಪತ್ತೌಚ ಮಹತಾಮೇಕ ರೂಪತಾ ।
ಉದಯೇ ಸವಿತಾರಕ್ತೋ ರಕ್ತಶ್ಚಾಸ್ತಮಯೇ ತಥಾ ॥

ಸೂರ್ಯ ತಾನು ಉದಯವಾಗುವಾಗ ಅಸ್ತವಾಗುವಾಗ ಹೇಗೆ ತನ್ನ ಕೆಂಬಣ್ಣವನ್ನು ತೊರೆಯುವುದಿಲ್ಲವೋ ಹಾಗೆಯೇ ಮಹಾತ್ಮರು ಸಂಪತ್ತಿರಲಿ, ಇಲ್ಲದಿರಲಿ, ಒಂದೇ ಸಮನವಾಗಿರುತ್ತಾರೆ.

ಅಂತಹವರು ಈ ಲೋಕದಲ್ಲಿ ಅತ್ಯಂತ ವಿರಳರು :-

ಸಂಪದಿ ಏಷಾಂ ನ ಹರ್ಷೋ
ವಿಪದಿವಿಷಾದೋ ರಣೇಚ ಭೀರುತ್ವಂ ।
ತಂ ಭುವನತ್ರಯ ತಿಲಕಂ
ಜನಯತಿ ಜನನೀ ಸುತಂ ವಿರಲಂ.[15]

ಸಂಪತ್ತೊದಗಿದಾಗ ಹಿಗ್ಗದೆ, ಸಂಪತ್ತಿಲ್ಲದಾಗ ಕುಗ್ಗದೆ, ಯುದ್ಧದಲ್ಲಿ ಸ್ಥಿರವಾಗಿದ್ದು ಮೂರು ಲೋಕಕ್ಕೂ ಅಲಂಕಾರ ಪ್ರಾಯವಾಗಿರುವಂತಹ ಮಕ್ಕಳಿಗೆ ತಾಯಿ ಅಪರೂಪವಾಗಿ ಜನ್ಮ ನೀಡುವಳು.

ಯಾರು ಇಂತಹ ಸಮತೋಲನವನ್ನು ತಮ್ಮ ಸಹಜಗುಣವನ್ನಾಗಿ ಪಡೆದುಕೊಂಡಿರುವರೋ ಅವರು ದುಃಖದಲ್ಲೂ ಸಹ ಧೃತಿಗೆಡುವುದಿಲ್ಲ. ಬೆಂಕಿಯ ಜ್ವಾಲೆ ತಲೆಕೆಳಗಾದರೂ ಕೆಳಗೆ ಹರಿಯುವುದಿಲ್ಲ.

ಕದರ್ಥಿತಸ್ಯಾಪಿ ಹಿ ಧೈರ್ಯವೃತ್ತೇಃ
ನ ಶಕ್ಯತೇ ಧೈರ್ಯಗುಣಃ ಪ್ರಮಾರ್ಷ್ಟುಂ ।
ಅಧೋಮುಖಸ್ಯಾಪಿ ಕೃತಸ್ಯ ವಹ್ನೇಃ
ನಾಧಃ ಶಿಖಾಯಾತಿ ಕದಾಚಿದೇವ ॥ [16]

ಯಾರು ತಮ್ಮ ಮನಸ್ಸನ್ನು ಸಮತೋಲದಲ್ಲಿರಿಸಿಕೊಂಡಿರುವರೋ ಅವರು ತಮ್ಮ ಮನಸ್ಸನ್ನು ಚಂಚಲವಾಗುವುದಕ್ಕೆ ಅಥವಾ ಸ್ಪಷ್ಟತೆ ಕಳೆದುಕೊಳ್ಳುವುದಕ್ಕೆ ಬಿಡುವುದಿಲ್ಲ. ಅದೇ ಅದರ ಶಕ್ತಿ. ಅವರು ಅದಕ್ಕೆ ವಿರುದ್ಧವಾಗಿದ್ದರೆ ಆಗ ಸಮದೃಷ್ಟಿಯವರೇ ಆಗುತ್ತಿರಲಿಲ್ಲ. ಅಂತಹವರು ಎಷ್ಟೇ ಕಷ್ಟಬಂದರೂ ಸಹ ತಮ್ಮ ದೃಢವಾದ ನಿಲುವನ್ನು ಬೇರ್ಪಡಿಸಿಕೊಳ್ಳುವುದಿಲ್ಲ :- ಕೃಚ್ಛ್ರೇಪಿನ ಚಲತ್ಯೇವ ಧೀರಾಣಾಂ ನಿಶ್ಚಲಂ ಮನಃ. ಅವರ ಮನಸ್ಥೈರ್ಯದ ಮುಂದೆ ಅಡಚಣೆಗಳು ಬಹಳ ಕ್ಷುಲ್ಲಕವಾಗಿ ತೋರುತ್ತದೆ. ಭೂಮಿಯು

ಅಂತಹವರಿಗೆ ಮನೆಯ ದೊಡ್ಡ ಅಂಗಳ, ಸಾಗರವೇ ಒಂದು ಕಾಲುವೆ, ಪಾತಾಳವು ಒಂದು ಭೂಭಾಗದಂತೆಯೂ, ಸುಮೇರುವೂ ಒಂದು ಹುತ್ತದಂತೆ ತೋರುತ್ತದೆ :-

ಅಂಗನವೇದೀ ವಸುಧಾ ಕುಲ್ಯಾ ಜಲಧಿಃ ಸ್ಥಲೀಚ ಪಾತಾಲಂ ।
ವಲ್ಮೀಕಶ್ಚ ಸುಮೇರುಃ ಕೃತ ಪ್ರತಿಜ್ಞಸ್ಯ ಧೀರಸ್ಯ ॥ [17]

ಬಹುತೇಕವಾದ ಅನ್ವೇಷಣೆಗಳು ಹಾಗೂ ಆವಿಷ್ಕಾರಗಳು ಅಂತಹವರಿಗೆ ಸಂಬಂಧಪಟ್ಟಿರುತ್ತದೆ. ಅವರು ದಟ್ಟವಾದ ಕಾಡುಗಳಲ್ಲಿ ಇದ್ದು ವನ್ಯಜೀವನವನ್ನೂ, ಸಮುದ್ರದಲ್ಲಿದ್ದು ಕಡಲಿಗೆ ಸಂಬಂಧದ ಜೀವನವನ್ನು, ತಮ್ಮ ಜೀವಿತವನ್ನೂ ಲೆಕ್ಕಿಸದೆ ಹೊರಗೆಡಹುವುದರಲ್ಲಿ ಸಮರ್ಥರಾಗುತ್ತಾರೆ. ಅನೇಕರು ಅದಕ್ಕಾಗಿ ತಮ್ಮ ಜೀವತವನ್ನೇ ಸಮರ್ಪಿಸಿದರು. ಗೋಬೀ ಮರುಳುಗಾಡಿನಲ್ಲಿದ್ದ ಹಸ್ತಪ್ರತಿಗಳ ಅನ್ವೇಷಣೆ ಸ್ಟೇನ್‌ನಿಂದಲೂ ಟಿಬೆಟ್‌ನಲ್ಲಿ ರಾಹುಲ್ ಸಾಂಕೃತ್ಯಾಯನನಿಂದಲೂ, ಸಮುದ್ರದಲ್ಲಿ ಹುದುಗಿದ್ದ ದ್ವಾರಕೆಯನ್ನು ಹೊರಗೆಡಹಲು ಎಸ್.ಆರ್.ರಾವ್, ಎಡ್ಮಂಡ್ ಹಿಲರಿ ಹಾಗೂ ಶರ್ಪ ತೇನ್‌ಸಿಂಗ್‌ರಿಂದ ಹಿಮಾಲಯಾರೋಹಣ, ಗಗನಯಾತ್ರಿಗಳ ತಂಡದಿಂದ ಅಂತರಿಕ್ಷದ ಅಧೀನತೆ, ಚಂದ್ರನ ಮೇಲೆ ಹಾಗೂ ಅಂಗಾರಕದ ಮೇಲೆ ಇಳಿಯುವ ಯತ್ನಗಳು, ಅಂತಹವರಿಗೆ ಮಾನವರು ಚಿರಋಣಿಗಳಾಗಿರಬೇಕು.

ಒಂದು ಸಲ ಅವರು ಯಾವುದಾದರೂ ಕಾರ್ಯನಿಶ್ಚಯಿಸಿದರೆ ಎಂದೂ ಹಿಂದಕ್ಕೆ ಸರಿಯುವುದಿಲ್ಲ. ಅವರ ಧ್ಯೇಯದ ಗುರಿಮುಟ್ಟುವವರೆಗೂ ಅವರು ಹಿಂಜರಿಯುವುದಿಲ್ಲ. ನ ನಿಶ್ಚಿತಾರ್ಥಾತ್ ವಿರಮಂತಿ ಧೀರಾಃ.[18] ಯಾವ ರೀತಿಯ ಪ್ರಲೋಭನೆಗಳಿಗೂ ಮುಂದಾಗಬಹುದಾದ ಅನಿಶ್ಚಯ ಘಟನೆಯ ಬಗ್ಗೆ ಭಯಭೀತಿಗಳೂ ಅವರಿಗಿರುವುದಿಲ್ಲ. ಅದನ್ನೇ ಭವಭೂತಿ ನಿಶ್ಚಯಾತ್ಮಕ ಬುದ್ಧಿಯುಳ್ಳವರು ಕಾರ್ಯಸಾಧನೆಯಾಗುವವರೆಗೆ ನಿಲ್ಲಿಸುವುದಿಲ್ಲ ಎಂದು ಹೇಳಿರುವುದು. ದೇವತೆಗಳು ಸಮುದ್ರ ಕಡೆದು ಅಮೃತ ಹೊರಬರುವವರೆಗೂ ನಿಲ್ಲಲಿಲ್ಲ ಹಾಗೂ ಭಯಂಕರವಾದ ವಿಷದಿಂದ ಭಯಗೊಳ್ಳಲಿಲ್ಲ.19 ಸಮುದ್ರದಿಂದ ಅಮೃತ ಹೊರತೆಗೆಯುವವರೆಗೆ ಅವರು ಸುಮ್ಮನಾಗಲಿಲ್ಲ. ಯಾರು ದೃಢ ಸಂಕಲ್ಪವುಳ್ಳವರೆಂದರೆ ಯಾರಿಗೆ ಅಪ್ಸರೆಯರ ನೋಟ ಸೆಳೆಯುವುದಿಲ್ಲವೋ, ಕೋಪದ ವಾಸವು ಯಾರನ್ನು ತಟ್ಟುವುದಿಲ್ಲವೋ, ಯಾರನ್ನು ಇಂದ್ರಿಯಜನ್ಯಸುಖಗಳು ಅತ್ಯಾಸೆಯೆಂಬ ಪಾಶಕಟ್ಟಿ ಹಾಕುವುದಿಲ್ಲವೋ, ಅಂತಹವರು ಮೂರು ಲೋಕಗಳನ್ನೂ ಜಯಿಸುತ್ತಾರೆ.

ಕಾಂತಾಕಟಾಕ್ಷ ವಿಶಿಖಾನ ತುದಂತಿ ಯಸ್ಯ
ಚಿತ್ತಂನ ನಿರ್ದಹತಿ ಕೋಪಕೃಶಾನುತಾಪಃ ।
ಕರ್ಷಂತಿ ಭೂರಿವಿಷಯಾಶ್ಚ ನ ಲೋಭ ಪಾಶೈಃ
ಲೋಕತ್ರಯಂ ಜಯತಿ ಕೃತ್ಸ್ನ ಇದಂ ಸಧೀರಃ ॥[20]

ಮತ್ತೊಂದೆಡೆ ಅದೇ ಭರ್ತೃಹರಿ ಹೇಳುವಂತೆ ಧೀರರು ನ್ಯಾಯ ಮಾರ್ಗದಿಂದ ವಿಚಲಿತರಾಗುವುದಿಲ್ಲ - ನ್ಯಾಯಾತ್‌ಪಥಃ ರಾಜನೀತಿಬಲ್ಲವರು ಅವರನ್ನು

ಹೊಗಳಲಿ ಅಥವಾ ತೆಗಳಲಿ ಸಂಪತ್ತು ಇಂದೇ ಬರಲಿ ಅಥವಾ ಹೋಗಲಿ, ಇಂದೇ ಮರಣವುಂಟಾಗಲಿ ಅಥವಾ ಯುಗದ ನಂತರ ಮರಣ ಬರಲಿ ಅವರು ನಡೆದ ಮಾರ್ಗದಿಂದ ಹಿಂಬರುವುದಿಲ್ಲ.[21] ಕೆಳಮುಖವಾಗಿ ಹರಿಯುತ್ತಿರುವ ನೀರನ್ನು ಬದಲಿಸಲಾಗದಿರುವಂತೆಯೇ ಸ್ಥಿರವಾದ ಮನಸ್ಸುಳ್ಳವರನ್ನು ಬದಲಿಸಲಾಗುವುದಿಲ್ಲ :- ಕ ಈಪ್ಸಿತಾರ್ಥ ಸ್ಥಿರನಿಶ್ಚಯಂ ಮನಃಪಯಶ್ಚ ನಿಮ್ನಾಭಿ ಮುಖಂ ಪ್ರತೀಪಯೇತ್[22]. ಅಂಥವರಿಗೆ ವಯಕ್ತಿಕವಾದ ಸುಖವಾಗಲೀ, ದುಃಖವಾಗಲೀ ಎಂದೂ ಬಾಧಿಸುವುದಿಲ್ಲ. ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನಚ ಸುಖಂ[23]. ಅಂತಹವರು ಏನನ್ನೇ ಪ್ರಾರಂಭಿಸಿದರೂ ಅದನ್ನು ನಿಲ್ಲಿಸದೆ ಕೊನೆ ಮುಟ್ಟಿಸುತ್ತಾರೆ. ಪುರಾಣಗಳಲ್ಲಿ ನಿರೂಪಿಸಿರುವ ಶ್ರೇಷ್ಠ ನಿದರ್ಶನವೆಂದರೆ ಹರಿಶ್ಚಂದ್ರನದು. ಅವನು ಸ್ಮಶಾನದಲ್ಲಿ ತೆರಿಗೆ ವಸೂಲಿ ಮಾಡಬೇಕಿತ್ತು. ಬರಿಗಯ್ಯಲ್ಲಿದ್ದ ತನ್ನ ಹೆಂಡತಿಯನ್ನೂ ಬಿಡದೆ ಮಗನ ದಹನಕ್ಕಾಗಿ ಅವಳ ಸೀರೆಯ ಒಂದು ಭಾಗವನ್ನೇ ವಸೂಲಿ ಮಾಡಿದ ಮಹಾತ್ಮ ಹರಿಶ್ಚಂದ್ರ ಮೇವಾಡದ ದೊರೆಯಾದ ರಾಣಾ ಪ್ರತಾಪನು ತನ್ನ ಸ್ವಾತಂತ್ರ್ಯವನ್ನು ಅಕ್ಬರನಿಗೆ ಒಪ್ಪಿಸದೆ ತನ್ನ ಪರಿವಾರದವರೊಂದಿಗೆ ಆಹಾರವಿಲ್ಲದೆ ಕಾಡಿನಿಂದ ಕಾಡಿಗೆ ಅಲೆದಾಡಿದನು. ಅವನು ಹುಲ್ಲನ್ನೇ ತಿಂದರೂ ತನ್ನ ಪ್ರತಿಷ್ಠೆಯನ್ನು ಬಿಡಲಿಲ್ಲ. ಅಂತಹವರೇ ಧೀರರು ಮತ್ತು ಚರಿತ್ರೆಯಲ್ಲಿ ತಮ್ಮ ಚಿರಸ್ಥಾನವನ್ನು ಪಡೆದವರು.

ಕೇವಲ ಮಹತ್ಕಾರ್ಯಗಳಲ್ಲೆ ಅಲ್ಲದೆ ದಿನನಿತ್ಯದ ದೈನಂದಿನಕಾರ್ಯಗಳಲ್ಲೂ ಸಹ ಧೈರ್ಯಗೆಡದೆ ನಾವು ನಮ್ಮ ಕೃತ್ಯಗಳನ್ನು ಸಾಗಿಸಬೇಕು. ಒಂದು ಚಿಕ್ಕದಾದ ನಡೆದ ಘಟನೆಯೂ ಇದಕ್ಕೆ ಸಾಕ್ಷಿಯಾಗಬಲ್ಲದು. ನಮ್ಮ ಬೆಳಗಿನ ಆತುರದ ಉಪಹಾರವನ್ನೇ ಇಲ್ಲಿ ನಿದರ್ಶನವಾಗಿ ಸ್ವೀಕರಿಸಬಹುದು. ನೀವು ಕಛೇರಿಗೆ ಹೋಗಲು ಸಿದ್ಧವಾಗಿರುವ ಸೂಟಿನ ಮೇಲೆ ನಿಮ್ಮ ಮಗಳು ಕಾಫಿಯನ್ನು ಚೆಲ್ಲಬಹುದು. ನೀವು ಅವಳನ್ನಟ್ಟಿದಾಗ ಅವಳು ಅಳಲಾರಂಭಿಸುವಳು. ಆನಂತರ ನೀವು ಮೇಜಿನ ತುದಿಯಲ್ಲಿ ಕಾಫಿಯನ್ನಿಟ್ಟಿದ್ದ ನಿಮ್ಮ ಹೆಂಡತಿಯನ್ನು ಬಯ್ಯುತ್ತೀರಿ. ಆಗ ಇಬ್ಬರ ನಡುವೆ ಜಗಳವಾಗುತ್ತದೆ. ನೀವು ಬೇರೆ ಸೂಟನ್ನು ಧರಿಸಲು ಎದ್ದುನಿಲ್ಲುವಿರಿ. ಆಗ ಅಳುತ್ತಿರುವ ನಿಮ್ಮ ಮಗಳು ಇನ್ನೂ ಶಾಲೆಗೆ ಹೋಗಲು ಸಿದ್ಧವಾಗಿಲ್ಲ. ಅವಳ ವಾಹನ ತಪ್ಪುತ್ತದೆ. ನೀವು ಅವಳನ್ನು ಶಾಲೆಗೆ ಬಿಡಲು ತ್ವರಿತಗೊಳ್ಳುವಿರಿ. ನೀವು ವೇಗವಾಗಿ ವಾಹನ ಚಲಿಸಿ ಅದಕ್ಕೆ ದಂಡತೆತ್ತಬೇಕಾಗುತ್ತದೆ. ನೀವು ಕಛೇರಿಗೆ ತಲುಪಿದ ನಂತರ ನಿಮ್ಮ ಕೈಪೆಟ್ಟಿಗೆ ಮರೆತಿರುವುದು ಅರಿವಾಗುತ್ತದೆ. ಈ ಎಲ್ಲಾ ಅಚಾತುರ್ಯಗಳಿಗೂ ನೀವೇ ಕಾರಣರು.

ನೀವು ಈ ರೀತಿ ಪ್ರತಿಕ್ರಿಯಿಸಿರಬಹುದಾಗಿತ್ತು. ನೀವು ನಿಮ್ಮ ಮಗಳಿಗೆ ಹೇಳಬಹುದಿತ್ತು. ಇರಲಿ ಮುಂದೆ ನೀನು ಜಾಗ್ರತವಾಗಿರು. ನಾವು ಹೊರಡುವ ವೇಳೆಗೆ ನೀನು ನಿನ್ನ ಉಪಹಾರ ಮುಗಿಸಿದ್ದರೆ, ನಾನು ನಿನ್ನನ್ನು ಶಾಲಾವಾಹನದವರೆಗೆ ಬಿಡುತ್ತೇನೆ. ನೀವು ನಿಮ್ಮ ಲಘುಪೆಟ್ಟಿಗೆ ತೆಗೆದುಕೊಂಡು ನಿಮ್ಮ ಕಛೇರಿಗೆ ಸಕಾಲಕ್ಕೆ ಹೋಗಬಹುದು.

ನೀವು ಮಾನಸಿಕವಾದ ನೆಮ್ಮದಿಯನ್ನು ಇಟ್ಟುಕೊಂಡಿದ್ದರೆ ಇಂತಹ ಅಚಾತುರ್ಯದಿಂದ ಪಾರಾಗಬಹುದಿತ್ತು.

ಧೈರ್ಯದಿಂದ ಅನೇಕ ವಿಷಮ ಪರಿಸ್ಥಿತಿಗಳಿಂದ ಪಾರಾಗಬಹುದು. ಆಗ ದುಃಖ ಹಾಗೂ ಜಿಗುಪ್ಸೆಗೆ ಎಡೆಯಿಡದೆ ಎಲ್ಲ ಕಷ್ಟಗಳಿಂದಲೂ ಪಾರಾಗಬಹುದು. ಒಂದು ಸುಂದರವಾದ ಕಥೆ ಇಲ್ಲಿ ಸ್ಮರಣೀಯವಾದುದು. ಒಂದು ಮಗು ಗಟ್ಟಿಯಾಗಿ ಅಳುತ್ತಿತ್ತು. ಅದರ ತಂದೆ ಅವರ ಗಮನ ಬೇರೆಡೆ ಸೆಳೆಯಲು ಪ್ರಯತ್ನಿಸಿ ವಿಫಲನಾದ. ಈ ಕಿತ್ತುಹೋದ ಪಾದರಕ್ಷೆ ಹಾಕಿಕೊಳ್ಳಲು ನನಗೆ ಇಷ್ಟವಿಲ್ಲ ಎಂದು ಮಗು ಗಟ್ಟಿಯಾಗಿ ಕಿರುಚಿತು. ನನ್ನ ಸಹಪಾಠಿಗಳೆಲ್ಲರೂ ಹೊಸ ಪಾದರಕ್ಷೆ ಧರಿಸುವರೆಂದು ಮಗು ಮುಗ್ಧವಾಗಿ ನುಡಿಯಿತು.

ತಂದೆಯು ಕಡಿಮೆ ಆದಾಯವುಳ್ಳವನಾಗಿದ್ದು ಬಡವನಾಗಿದ್ದ. ತನ್ನ ಮಗು ಸಂತೋಷವಾಗಿರಲೆಂದು ಮಗಳಿಗೆ ಮುಂದಿನ ತಿಂಗಳು ಹೊಸ ಪಾದರಕ್ಷೆ ಕೊಡಿಸುವುದಾಗಿ ಹೇಳಿದ. ಆದರೆ ಮಗು ಹಠ ಮಾಡಿದಾಗ ಅವನು ಕಿತ್ತುಹೋದ ಪಾದರಕ್ಷೆಗಳನ್ನು ಹೊಲಿಸುವುದಾಗಿ ಹೇಳಿದ. ಅದರಿಂದ ಆ ಮಗುವು ಸಂತೋಷಗೊಂಡಿತು. ಏಕೆಂದರೆ ಆ ಪಾದರಕ್ಷೆ ಸರಿಪಡಿಸಲಾಗುವುದಿಲ್ಲವೆಂದು ಚರ್ಮಕಾರ ಹೇಳಿದ್ದ. ತಂದೆ ಹಾಗೂ ಮಗಳು ಚರ್ಮಕಾರನ ಪ್ರದೇಶಕ್ಕೆ ಬಂದರು. ನೀನು ಬಹಳವಾಗಿ ಆಟವಾಡುವೆಯಾ? ಎಂದು ಪ್ರಶ್ನಿಸಿದ ಚರ್ಮಕಾರ. ಅದಕ್ಕೆ ಆ ಮಗುವು ಬದಲಾಗಿ ಹೇಳಿತು – ಹೌದು ನಾನು ಬಹಳವಾಗಿ ಆಟವಾಡುವೆ. ನೀನು ಈ ಪಾದರಕ್ಷೆಯನ್ನು ಹೊಲಿಯಲು ಸಾಧ್ಯವೇ ಇಲ್ಲವೇ ಎಂಬುದನ್ನು ಹೇಳು. ಆಗ ಆ ಚರ್ಮಕಾರನು ಆ ಪಾದರಕ್ಷೆ ನೋಡಿ ಅದನ್ನು ಬೇಗ ಸರಿಪಡಿಸಬಹುದೆಂದನು.

ಮಗುವಿಗೆ ಬಹಳವಾಗಿ ಕೋಪಬಂದಿತು. ಚರ್ಮಕಾರನು ತನ್ನ ಹೊಸ ಪಾದರಕ್ಷೆ ಖರೀದಿಗೆ ಅಡ್ಡಬಂದನೆಂದು ಆ ಮಗುವು ಭಾವಿಸಿತು. ಈಗ ತನ್ನ ತಂದೆಗೆ ಹೊಸ ಪಾದರಕ್ಷೆಗೆ ಹಠಮಾಡಲು ಸಾಧ್ಯವಿಲ್ಲವೆಂದು ಆ ಮಗುವಿಗೆ ಅನಿಸಿತು. ಮಗುವು ಕಿರುಚಿತು – ''ನೀನು ಇಷ್ಟು ಕಾಲ ನನ್ನ ಪಾದರಕ್ಷೆ ದಿಟ್ಟಿಸಿ ನೋಡುತ್ತಿರುವುದರಿಂದ ಅದರಲ್ಲೇನು ಬೆಲೆಬಾಳುವ ಒಡವೆಯಿದೆಯೇ? ಎಲೈ ಮಗುವೇ, ಹಾಗೇನೂ ಅಲ್ಲ. ನಾನು ನನ್ನ ಎರಡೂ ಕಾಲುಗಳನ್ನು ಕಳೆದುಕೊಳ್ಳುವುದಕ್ಕೆ ಮುಂಚೆ ಬಹಳ ಆಟವಾಡುತ್ತಿದ್ದೆ. ನಾನು ಅಪಘಾತದಲ್ಲಿ ಎರಡೂ ಕಾಲುಗಳನ್ನು ಕಳೆದುಕೊಂಡೆ. ಆದರೆ ನಾನು ಅದರಿಂದ ಧೃತಿಗೆಡಲಿಲ್ಲ. ನಾನು ನಿನ್ನಂತಹ ಪುಟ್ಟ ಮಕ್ಕಳನ್ನು ನೋಡಿ ಸಂತಸಗೊಳ್ಳುವೆ. ಏಕೆಂದರೆ ನನಗೆ ಕಣ್ಣನ್ನು ಕೊಟ್ಟಿರುವ ಭಗವಂತನಿಗೆ ನಾನು ಕೃತಜ್ಞ.

ಅದರಿಂದ ಆ ಮಗುವು ಸ್ತಬ್ಧವಾಯಿತು. ಆ ಮಗುವು ಅವನ ಚಮತ್ಕಾರವನ್ನು ದಿಟ್ಟಿಸಿ ನೋಡಿತು ಮತ್ತು ಯೋಚಿಸಿತು ಎಷ್ಟು ದಿಟ್ಟತನದವ ಈ ಚಮ್ಮಾರ ತನ್ನ ಎರಡೂ ಕಾಲುಗಳಿಲ್ಲದಿದ್ದರೂ ಸಹ ಭಗವಂತನಿಗೆ ಕೃತಜ್ಞತೆ ಸಮರ್ಪಿಸುತ್ತಿರುವನು ಎಂದು. ಅವನು

ಅಷ್ಟರಲ್ಲಿಯೇ ನಗುತ್ತಾ ತನ್ನ ಜೀವನವನ್ನು ಸಂತಸದಿಂದಿಟ್ಟುಕೊಂಡಿದ್ದ. ಅಂದಿನಿಂದ ಆ ಮಗುವು ತನ್ನ ಜೀವನದಲ್ಲಿ ಒಂದು ಪಾಠವನ್ನು ಕಲಿತು ಮುಂದೆಂದೂ ಹರಿದುಹೋದ ಪಾದರಕ್ಷೆಗಳಿಗಾಗಿ ಅಳಲಿಲ್ಲ.

ಯಾರಾದರೂ ತಮ್ಮ ಮನಸ್ಸಿನ ಸಮತೋಲವನ್ನು ಇಟ್ಟುಕೊಳ್ಳುವುದಾದರೆ, ನಮ್ಮ ಹಣಕಾಸಿನ ಸ್ಥಿತಿಗೆ ಹೆಚ್ಚು ತಲೆಕೆಡಿಸಿಕೊಳ್ಳದಿದ್ದರೆ, ಅವರು ತಮ್ಮ ಪರಿಸ್ಥಿತಿಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು. ಮಾನಸಿಕ ಸಮತೋಲನದಿಂದ ಮನಸ್ಸಿನ ಸ್ಪಷ್ಟತೆಯನ್ನು ಕಳೆದುಕೊಳ್ಳುವುದಿಲ್ಲ. ತೊಂದರೆಗಳನ್ನು ಪರಿಹರಿಸಿಕೊಳ್ಳಲು ಯಾವುದಾದರೂ ಉಪಾಯವನ್ನು ಹುಡುಕಬಹುದು. ಕಂದಕದ ಕೊನೆಯಲ್ಲಿ ಬೆಳಕು ಇದ್ದೇ ಇರುತ್ತದೆ. ಆದರೆ ನಮಗೆ ಆ ಕಂದಕದ ಕೊನೆ ಮುಟ್ಟುವವರೆಗೆ ತಾಳ್ಮೆಯಿರಬೇಕು. ಇಲ್ಲದಿದ್ದರೆ ಮಧ್ಯದಲ್ಲೇ ನಾವು ಅಳಿದು ಹೋಗುತ್ತೇವೆ. ಆದ್ದರಿಂದ ತಾಳ್ಮೆ, ದೃಢನಿಷ್ಠೆ ಮತ್ತು ಸಂಕಲ್ಪವೇ ಧೈರ್ಯವನ್ನು ಸೂಚಿಸುತ್ತದೆ.

---

## ಆಕರ ಗ್ರಂಥಗಳು

1) ಶಾಂತಿಪರ್ವನ್.162.19 2) ಅದೇ.86.9 3) ಕುಮಾರಸಂಭವ.1.59 4) ಅದೇ 5) 8.90 6) 6.92 7) ರಾಮಾಯಣ.2.18.41 8) ಅದೇ.2.19.33 9) 1.31 10) ನೀತಿಶತಕ.27 11) ಪಂಚತಂತ್ರ.ಮಿತ್ರಲಾಭ.216 12) ಅದೇ 13) ಕುಮಾರಸಂಭವ. 1.59 14) ಪಂಚತಂತ್ರ.ಮಿತ್ರಸಂಪ್ರಾಪ್ತಿ.7 15) ಹಿತೋಪದೇಶ.1.32 16)ಅದೇ.2.69 17) ಸುಭಾಷಿತಾವಳಿ.2.27 18) ನೀತಿಶತಕ.81 19) ಅದೇ. 20) ಅದೇ.107 21) ಅದೇ.84 22) ಕುಮಾರಸಂಭವ.5.5 23) ನೀತಿಶತಕ.82.

# 9. ಔಚಿತ್ಯ

ಜೀವನದಲ್ಲಿ ಸಮತೋಲನವನ್ನು ಕಾಪಾಡುವುದು ಅಗತ್ಯ. ಮಾನವನ ಎಲ್ಲ ಕ್ರಿಯೆಗಳೂ ಔಚಿತ್ಯದ ಹಿನ್ನಲೆಯಲ್ಲೇ ನಡೆಯಬೇಕು. ಔಚಿತ್ಯದಿಂದ ಮಾನವ ಸಂಕಟ ಮುಕ್ತಜೀವನ ಸಾಗಿಸಬಹುದು.

ಔಚಿತ್ಯವು ಉಚಿತ ಎಂಬ ಮೂಲರೂಪದಿಂದ ಬಂದಿದ್ದು ಯೋಗ್ಯವಾದುದು, ಸರಿಯಾದುದು, ಒಪ್ಪುವಂತಹದು ಎಂಬರ್ಥದಲ್ಲಿದೆ. ಆಗ ವ್ಯಕ್ತಿಗೆ ಸಂದರ್ಭಕ್ಕೆ ಯುಕ್ತವಾದುದು ಯಾವುದು ಎಂದು ಗಮನಿಸಬೇಕಾಗುತ್ತದೆ. ನಮ್ಮ ಧಾರ್ಮಿಕ ಗ್ರಂಥಗಳು. ನಮ್ಮ ಗುರುಹಿರಿಯರು, ಹಿರಿಯರು ಈ ದಿಸೆಯಲ್ಲಿ ಸನ್ಮಾರ್ಗದರ್ಶನ ಮಾಡಬಲ್ಲರು ತಮ್ಮ ಅನುಭವಯುಕ್ತ ನುಡಿಗಳಿಂದ.

ಔಚಿತ್ಯವು ಸಂದರ್ಭಕ್ಕನುಗುಣವಾಗಿ ಬದಲಾಗಬಹುದು. ಒಂದು ಸಂದರ್ಭಕ್ಕೆ ಉಚಿತವಾದುದು ಮತ್ತೊಂದು ಸಂದರ್ಭಕ್ಕೆ ಉಚಿತವಾಗಿರುವುದಿಲ್ಲ.

ಔಚಿತ್ಯಕ್ಕೆ ಬೇಕಾಗಿರುವುದೇ ಗೊಂದಿಲವಿಲ್ಲದ, ವಿವೇಕದಿಂದ ಕೂಡಿದ ಮನಸ್ಸಿನಿಂದ ಹಿರಿಯರ ಹಾಗೂ ಒಳಿತನ್ನು ಬಯಸುವವರ ಮಾತನ್ನು ಕೇಳುವುದು. ಅದು ಸಂದರ್ಭವನ್ನು ಅಳೆಯುವ, ಸರಿಯಾದ ನಿರ್ಧಾರ ಕೈಗೊಳ್ಳುವುದು ಬಹಳ ವಿಷಯಗಳಿರುವಾಗ. ಅದಕ್ಕೆ ಸಾಮಾಜಿಕ ಹಾಗೂ ಧಾರ್ಮಿಕ ಕಟ್ಟುಪಾಡುಗಳನ್ನು ಅರಿತಿರುವುದು ಅದನ್ನು ಮೀರಿದರೆ ಉಂಟಾಗಬಹುದಾದಂತಹ ತೊಂದತೆಗಳ ಬಗ್ಗೆಯೂ ಗಮನವಿರಬೇಕು.

ನಿರ್ಧಾರಗಳನ್ನು ಕೈಗೊಳ್ಳುವ ಮುನ್ನ ಕೆಲವು ಸಂಭಾವನೆಗಳನ್ನು ಗಮನಿಸಬೇಕಾಗುತ್ತದೆ.

ಔಚಿತ್ಯವನ್ನು ಗಮನಿಸುವಾಗ ಅನೌಚಿತ್ಯದ ಬಗ್ಗೆಯೂ ಸಹ ಗಮನವಿರಬೇಕು. ನಿಷೇಧಗಳು ಸಕಾರಗಳ ಕಡೆ ಗಮನವನ್ನು ಉಂಟುಮಾಡುತ್ತದೆ.

ಔಚಿತ್ಯವು ದೈಹಿಕ, ಮಾನಸಿಕ, ಬೌದ್ಧಿಕ, ಧಾರ್ಮಿಕ, ವಾಚಿಕ ಎಂದು ಭಿನ್ನಭಿನ್ನ ಅಂಶಗಳನ್ನು ಒಳಗೊಂಡಿರುತ್ತದೆ.

ಮೊಟ್ಟಮೊದಲಿಗೆ ದೈಹಿಕಾಂಶ. ಗೀತೆಯು ಆರೋಗ್ಯಕರವಾದ ದೇಹವನ್ನು ಬೆಂಬಲಿಸುತ್ತದೆ.

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವ ಬೋಧಸ್ಯ ಯೋಗೋಭವತಿದುಃ ಖಹಾ ॥[1]

ಯಾರು ಯುಕ್ತವಾದ ಆಹಾರ-ವಿಹಾರ ಮಾಡುತ್ತಾರೋ, ಕರ್ಮದಲ್ಲಿ ಯಥಾ ಯೋಗ್ಯವಾದ ಚೇಷ್ಟೆ ಮಾಡುವವನಿಗೆ, ಯಥಾಯೇಗ್ಯವಾಗಿ ಮಲಗಿ ನಿದ್ರಿಸುವವನಿಗೆ ಎಚ್ಚರಿಕೆಯಾಗಿರುವವನಿಗೆ ದುಃಖವನ್ನು ನಾಶ ಪಡಿಸುವ ಯೋಗ್ಯತೆ ಸಿದ್ಧವಾಗುವುದು.

ಒಂದು ಹಳೆಯ ಅಭ್ಯಾಸದಂತೆ ನಿರೂಪಿತವಾಗಿರುವುದೇನೆಂದರೆ ಹಿತಮಿತವಾದ ಆಹಾರ ತೆಗೆದುಕೊಳ್ಳುವವರು ರೋಗಮುಕ್ತರಾಗಿ ಎಲ್ಲ ಬಾಧೆಗಳಿಂದಲೂ ಸಹ ಪಾರಾಗುತ್ತಾರೆಂದು. ಒಂದು ಬಾರಿ ದೈವವೈದ್ಯನಾದ ಧನ್ವಂತರಿಯು ಕಾಡಿನಲ್ಲಿ ಹೋಗುತ್ತಿದ್ದನು. ಅವನು ಯಾರೆಂದು ತಿಳಿದಿದ್ದ ಒಂದು ಪಕ್ಷಿ ಚಿಲಿಪಿಲಿಗುಟ್ಟಿತು ಕೋರುಕ್ ಕೋರುಕ್ ಕೋರುಕ್. ಅದು ಪಕ್ಷಿಯ ಧ್ವನಿಯೊಡನೆ ಕ - ಅರಕ್ ಎಂದೂ ಉಚ್ಚರಿಸುತ್ತಿತ್ತು. ಯಾರು ರೋಗಮುಕ್ತರೋ ಅವರು ಎಂದು. ಅದಕ್ಕೆ ಧನ್ವಂತರಿಯು ನಕ್ಕು ಆ ಪಕ್ಷಿಯ ಜಾಣ್ಮೆಯನ್ನು ಮೆಚ್ಚಿ ಅದಕ್ಕೆ ಪ್ರತ್ಯುತ್ತರಿಸಿದ್ದ ಹಿತಭುಕ್, ಮಿತಭುಕ್, ಋತಭುಕ್ ಸೋರುಕ್ ಸೋರುಕ್ ಸೋರುಕ್. ಯಾರು ಕಡಿಮೆ ಪ್ರಮಾಣದಲ್ಲಿ ಹಿತವಾದ ಅನ್ನವನ್ನು ತಿನ್ನುವರೋ ಅವರು ಎಲ್ಲಾ ರೋಗಗಳಿಂದ ಮುಕ್ತರಾಗಿರುವರು, ರೋಗಮುಕ್ತರಾಗಿರುವರು. ದೈಹಿಕ ಒಳಿತಿಗೆ ಮೂರು ರೀತಿಯಾದ ಔಚಿತ್ಯವಿರುತ್ತದೆ. 1)ಆಹಾರ ಕಡಿಮೆ ಪ್ರಮಾಣದಲ್ಲಿರಬೇಕು 2)ಅದು ಹಿತಕರವಾಗಿರಬೇಕು 3)ಅದನ್ನು ಋಜು ಮಾರ್ಗದಿಂದ ಗಳಿಸಿರಬೇಕು.

ಯಾರು ಕಡಿಮೆ ಪ್ರಮಾಣದಲ್ಲಿ ತಿನ್ನುವರೋ ಅವರು ಹೆಚ್ಚು ತಿನ್ನುವರೆಂಬ ಮಾತಿದೆ. ಯೋ ಮಿತಂ ಭುಂಕ್ತೇ ಸ ಬಹು ಭುಂಕ್ತೇ. ಅದರಿಂದ ಅವನಿಗೆ ಧೀರ್ಘಾಯುಸ್ಸಿದೆ ಮತ್ತು ಅವನು ಬಹಳ ತಿನ್ನುವವನಿಗಿಂತ ಹೆಚ್ಚು ತಿನ್ನಲು ಸಹಾಯಕವಾಗುತ್ತದೆ. ಹೇಗೆಂದರೆ ಬಹಳ ತಿನ್ನುವವ ಬೇಗ ಸಾಯುತ್ತಾನೆ ಆದರೆ ಕಡಿಮೆ ತಿನ್ನುವವ ಬಹಳ ಕಾಲ ಬದುಕಿ ಹೆಚ್ಚು ತಿನ್ನುವಂತಾಗುತ್ತಾನೆ.

ಆಯುರ್ವೇದವು ಯಾವ ಕಾಲದಲ್ಲಿ ಯಾವ ರೀತಿಯ ಆಹಾರ ಸೇವಿಸಬೇಕೆಂಬುದನ್ನು ತಿಳಿಸುತ್ತದೆ. ಯಾರು ಬೆಳಿಗ್ಗೆ ಹಣ್ಣನ್ನು ತಿಂದು ಬಾಳೆ ಹಾಗೂ ಸೌತೇಕಾಯನ್ನು ವರ್ಜಿಸುವರೋ ಅವರು ಬಹಳ ಕಾಲ ಬದುಕುವರು :- ಪ್ರಾತಃ ಫಲಾನಿ ಭೋಜ್ಯಾನಿ ಕದಲೀಂ ಕರ್ಕತೀಂ ವಿನಾ. ಬೆಳಿಗ್ಗೆ ಮೊಸರನ್ನು ತಿನ್ನಬಹುದು ಆದರೆ ರಾತ್ರಿಯಲ್ಲಿ - ನನಕ್ತಂದಧಿ ಭುಂಜೀತ, ಆಹಾರವು ಸಾತ್ವಿಕ, ರಾಜಸಿಕ ಹಾಗೂ ತಾಮಸಿಕ ಎಂದು ವಿಭಜಿತವಾಗಿದೆ. ಅದರಂತೆಯೇ ಪೇಯವೂ ಸಹ. ನೀರನ್ನು ಕಾಲಕಾಲಕ್ಕೆ ಸ್ವಲ್ಪವಾಗಿ ಸೇವಿಸಬೇಕು - ಮುಹುರ್ ಮುಹುರ್ ವಾರಿ ಪಿಬೇತ್ ಅಭೂರಿ[2] ಊಟದ ಮಧ್ಯೆ ಅಮೃತ, ಊಟದ ಕೊನೆಗೆ ವಿಷ.

ಮಧ್ಯೇತತ್ ಅಮೃತೋಪಮಂ । ಭೋಜನಾಂತೇ ವಿಷಂ ವಾರಿ ।

ಔಚಿತ್ಯದಂತೆ ಸಂತೋಷವಾಗಿ ಆಹಾರ ಸೇವಿಸಬೇಕು. ಆದೇಶವೆಂದರೆ ಪ್ರಸನ್ನ ಮುಖೋSನ್ನಾನಿ ಕಳವಳದ ಸಮಯದಲ್ಲಿ, ಕ್ಷೋಭೆಗೊಂಡಲ್ಲಿ ಊಟ ಮಾಡಿದರೆ ಅದು ಒಳಿತಿಗಿಂತಲೂ ಹಾನಿಯನ್ನೇ ಉಂಟುಮಾಡುತ್ತದೆ. ಊಟಮಾಡುವಾಗ ಆ ಅನ್ನವನ್ನು ಬಯ್ಯಬಾರದು. ಅದರಲ್ಲಿ ತಪ್ಪನ್ನು ಕಂಡುಹಿಡಿಯಬಾರದು. ಏಕೆಂದರೆ ಅದು ದೇಹದಲ್ಲಿ ಕೆಲವು ದ್ರವಗಳನ್ನು ಉತ್ಪತ್ತಿ ಮಾಡಿ ತೊಂದರೆ ಮಾಡುತ್ತದೆ : ಅನ್ನಂನ ನಿಂದ್ಯಾತ್. ಮತ್ತೂ ಸಹ ಸಜ್ಜನರೊಂದಿಗೆ ಶುಚಿಯಾದ ಪ್ರದೇಶದಲ್ಲಿ ಭುಂಜಿಸಬೇಕು. ಹಾಗೆಯೇ ಕಾಲಾತಿಪಾತವಾಗಿ ಊಟಮಾಡಬಾರದು - ಭೋಜನವೇಲಾತಿಕ್ರಮೇ

ಚಿಕಿತ್ಸಾ ದೋಷಮುದಾಹರಂತಿ[5]. ಊಟದ ಸರಿಯಾದ ಸಮಯವನ್ನು ಮೀರುವುದನ್ನು ವೈದ್ಯರು ನಿಷೇಧಿಸಿದ್ದಾರೆ. (ಅತಿ ಹೆಚ್ಚಾದ ಕಾರ್ಯಭಾರದಿಂದ ಹಗಲಿನ ಊಟ ಬಹಳ ತಡವಾಗಿ ಮಾಡುವುದು ಅಥವಾ ಮಧ್ಯರಾತ್ರಿಯ ನಂತರ ರಾತ್ರಿ ಊಟ ಮಾಡುವುದು ಅಥವಾ ಕೆಲವು ಹಿಡಿಗಳನ್ನು ಮಾತ್ರ ನುಂಗುವುದು, ಅತವಾ ಅನಾರೋಗ್ಯಕರವಾದ ಊಟ ಮಾಡುವುದು, ಅಥವಾ ಉಪಹಾರ, ಊಟವನ್ನು ಒಗ್ಗೂಡಿಸುವುದು) ನಿಯಮವೆಂದರೆ ಶತಂ ವಿಹಾಯಭೋಕ್ತವ್ಯಂ[6]. ನೂರು ಕಾರ್ಯಗಳನ್ನು ಬದಿಗಿಟ್ಟು ಊಟ ಮಾಡಬೇಕು. ಊಟದಂತೆಯೇ ಸ್ನಾನವೂ ಸಹ. ಇದು ಮತ್ತೂ ಸಹ ಮುಖ್ಯವಾದುದು. ಯಾವುದೇ ಕಾರಣಕ್ಕೂ ಅದನ್ನು ಕಡೆಗಾಣಿಸಬಾರದು ಅಥವಾ ವಿಲಂಬಿಸಬಾರದು – ಸಾವಿರ ಕೆಲಸಗಳನ್ನು ಪಕ್ಕಕ್ಕಿಟ್ಟು ಮೊದಲು ಸ್ನಾನ ಮಾಡಬೇಕು :– ಸಹಸ್ರಂ ಸ್ನಾನಮಾಚರೇತ್.[7]

ಮಾತಿನ ಔಚಿತ್ಯಕ್ಕೆ ಬಂದರೆ ಅತ್ಯಂತ ಮುಖ್ಯವಾದ ಅಂಶವೆಂದರೆ ಮನುಸ್ಮೃತಿ ಪ್ರತಿಪಾದಿಸುವಂತೆ ಪ್ರಯೋಗಿಸಲ್ಪಡುವ ಪದಗಳ ಔಚಿತ್ಯ :–

ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯಪೂತಂ ವದೇದ್ ವಾಕ್ಯಂ ಮನಃ ಪೂತಂ ಸಮಾಚರೇತ್ ॥ [8]

ದಿಟ್ಟಿಸಿ ನೋಡಿ ಸ್ವಚ್ಛವಾದ ನೆಲದಲ್ಲಿ ಹೆಜ್ಜೆಯಿಡಬೇಕು ; ಬಟ್ಟೆಯಿಂದ ಸೋಸಿದ ನೀರನ್ನೇ ಕುಡಿಯಬೇಕು. ಸತ್ಯವಾದ ಮಾತನ್ನೇ ನುಡಿಯಬೇಕು. ಮನಸ್ಸಿಗೆ ಒಪ್ಪಿದ ಪವಿತ್ರವಾದ ಕಾರ್ಯವನ್ನು ಮಾಡಬೇಕು.

ಮತ್ತೆ ಅದೇ ಸ್ಮೃತಿ ಪ್ರತಿಪಾದಿಸಿರುವಂತೆ ಕಟುವಾದ ನುಡಿಯನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕು, ಯಾರನ್ನೂ ಅವಮಾನಗೊಳಿಸಬಾರದು. ಶ್ರುತಿಯು ಜೇನುತುಪ್ಪ ಸವರಿದಂತೆ ಮಾತನಾಡಬೇಕೆಂದು ಹೇಳುತ್ತದೆ. ಮಧುಮಯೀಂ ವಾಚಂ[9]. ಭೇರೆಯವರಿಗೆ ಅವಮಾನವಾಗುವಂತಹ ಮಾತನ್ನಾಡಬಾರದು ಏಕೆಂದರೆ ಶತ್ರುತ್ವಕ್ಕೆ ಅದೇ ಆದಿಕಾರಣವಾಗುತ್ತದೆ. ಸಾ ಯೋನಿಃ ಸರ್ವ ವೈರಾಣಾಮ್[10].

ಮಾನಸಿಕೌಚಿತ್ಯವು ಮಾನಸಿಕವಾಗಿ ಯಾರಿಗೂ ಕೆಟ್ಟದ್ದನ್ನು ಬಯಸದೇ ಇರುವುದೇ ಆಗಿದೆ. ಬೇರೆಯವರಿಗೆ ತೊಂದರೆಯಾಗುವಂತಹ ಕುತಂತ್ರದಿಂದ ದೂರವಿರಬೇಕು.

ಧರ್ಮಾಮೃತವು ಔಚಿತ್ಯವು ಕೋಟಿಗಟ್ಟಲೆ ಸದ್ಗುಣಗಳಿಗಿಂತಲೂ ಮಿಗಿಲಾದುದೆಂದು ನಿರೂಪಿಸುತ್ತದೆ :– ಗುಣಕೋಟ್ಯಾ ತುಲಾಕೋಟೀಂ ಯದೇಕಮಪಿ ಟೀಕತೇ[11]. ಅದಕ್ಕೆ ಕಾರಣವೆಂದರೆ ಅದೇ ಅತಿ ಮುಖ್ಯವಾದ ಗುಣ. ಮಿಕ್ಕೆಲ್ಲವೂ ಅದರ ಕವಲುಗಳು. ಅದನ್ನು ಅಳವಡಿಸಿಕೊಳ್ಳುವುದರಿಂದ ಮುಂದೆ ತಲೆ ಎತ್ತಬಹುದಾದಂತಹ ಅನೇಕ ತಪ್ಪುಗಳು ನಿವಾರಣೆಯಾಗಬಹುದು ಅಥವಾ ಅದನ್ನು ಅಳವಡಿಸಿಕೊಳ್ಳದಿದ್ದರೆ ಅಮಾಯಕವಾದ ಕೆಲಸಗಳಿಗೆ ಅಡ್ಡಿಯಾಗಬಹುದು ಆಗ ಅವನು ಕುಡಿಯುವುದರಲ್ಲೋ, ಜೂಜಿನಲ್ಲೋ, ಸ್ತ್ರೀಸಂಗದಲ್ಲೋ, ಬೇಟೆಯಲ್ಲೋ, ಹಾಡಿನಲ್ಲೋ, ವಾದ್ಯನುಡಿಸುವುದರಲ್ಲೋ

ತೊಡಗಿಸಿಕೊಳ್ಳಬಹುದು. ಅವರಲ್ಲಿ ಅತಿಯಾದ ಆಸಕ್ತಿ ಹಾನಿಕರವೆಂದು ಮಹಾಭಾರತ ನಿರೂಪಿಸುತ್ತದೆ :-

ಪಾನಂ ಅಕ್ಷಸ್ತಥಾನಾರ್ಯೋ ಮೃಗಯಾ ಗೀತ ವಾದಿತಮ್ ।
ಏತಾನಿ ಯುಕ್ತ್ಯಾಸೇವೇತ ಪ್ರಸಂಗೋಽಹ್ಯತ್ರ ದೋಷವಾನ್ ॥[12]

ಹಾಗೆಯೇ ಏನನ್ನಾದರೂ ಅಪೇಕ್ಷಿಸುವುದು ತಪ್ಪಲ್ಲ ಆದರೆ ಹೇಗಾದರೂ ಅದನ್ನು ಪಡೆಯಬೇಕೆನ್ನುವುದು ತಪ್ಪು:-

ಔಚಿತ್ಯಂ ಗಣಯತಿ ಕೋ ವಿಶೇಷಕಾಮಃ

ಔಚಿತ್ಯಕ್ಕೆ ತಕ್ಕ ನಿರೂಪಣೆ ನೀಡುವುದು ಕಷ್ಟ. ನಮ್ಮ ಆರ್ಷೇಯ ಪರಂಪರೆಯನ್ನು ಮೆಲುಕು ಹಾಕುವುದರಿಂದ ಉಪಯೋಗವಾಗುವುದಿಲ್ಲ. ರಾಮಾಯಣದ ಪ್ರಕಾರ ಒಬ್ಬರ ಮಿತಿಯನ್ನು ಮೀರದಿರುವುದೇ ಔಚಿತ್ಯ. ಸರ್ವತ್ರಾತಿಕೃತಂ ಭದ್ರೇ ವ್ಯಸನಾಯೋಪಕಲ್ಪತೇ[13]. ಎಲ್ಲಾದರೂ ಯಾವುದಾದರೂ ಅತಿಯಾಗಿ ಮಾಡಿದರೆ ಅದು ನಾಶವಾಗುತ್ತದೆ. ವಿನತೆಯು ಸೀತೆಗೆ ಹೇಳುವ ಪ್ರಸಂಗವೆಂದರೆ ಎಲೈ ಸೀತೆ, ನೀನು ರಾವಣನಿಗೆ ಶರಣಾಗು ಅದಿಲ್ಲದಿದ್ದರೆ ರಾಕ್ಷಸ ಕಾವಲುಗಾರರೇ ನಿನ್ನನ್ನು ತಿಂದು ಮುಗಿಸುವರು ಎಂದು.

ಅಲಂಕಾರಿಕರಲ್ಲಿ ಔಚಿತ್ಯ ಎನ್ನುವುದು ಸಾಹಿತ್ಯದ ಸಿದ್ಧಾಂತವಾಗುತ್ತದೆ. ಕ್ಷೇಮೇಂದ್ರ ಔಚಿತ್ಯ ವಿಚಾರ ಚರ್ಚಾ ಎಂಬ ಶೀರ್ಷಿಕೆಯಲ್ಲಿ ಒಂದು ಗ್ರಂಥವನ್ನೇ ನಿರ್ಮಿಸಿದ್ದಾನೆ. ಅಲ್ಲಿ ಅವನು ರಸ, ಅಲಂಕಾರ, ನಾಯಕ-ನಾಯಿಕಾ ಭಾವಗಳಲ್ಲಿ ಯಾವುದು ಔಚಿತ್ಯವೆಂದು ನಿರ್ಮಿಸಿದ್ದಾನೆ.

ಔಚಿತ್ಯಕ್ಕೆ ನಿಷೇಧವಾಗಿ ಬಳಸುವಂತಹ ಪದವೆಂದರೆ ಅನೌಚಿತ್ಯ. ಅದನ್ನು ಸರಳವಾಗಿ ವ್ಯಾಖ್ಯಾನಿಸಬೇಕಾದರೆ - ''ಯಾವುದಾದರೂ ಒಂದು ದೇಶ ಅಥವಾ ಕಾಲಕ್ಕೆ ಮಾತ್ರವೇ ಸರಿಹೊಂದುವಂತಹದು''13. ಯಾವುದು ರೂಢಿಯಲ್ಲಿರುವ ಸಂಪ್ರದಾಯಕ್ಕೆ ಹೊಂದಿಕೊಳ್ಳುವುದೋ, ಒಂದು ಪ್ರದೇಶಕ್ಕೆ ಸೀಮಿತವಾಗಿರುವ ಸಾಮಾಜಿಕ ಕಟ್ಟುಪಾಡುಗಳಿಗೆ ಯಾವುದು ಹೊಂದಾಣಿಕೆಯಾಗುವುದೋ (ಬೇರೊಂದು ಪ್ರದೇಶದಲ್ಲಿ ಯಾವುದು ಹೊಂದಾಣಿಕೆಯಾಗುವುದಿಲ್ಲವೋ) ಅದು ಉಚಿತ ಅಥವಾ ಸರಿಯಾದುದು. ಅದಿಲ್ಲವಾದುದು ಅನುಚಿತ, ಅಸಂಗತ, ಅನೌಚಿತ್ಯ. ಉಚಿತವೆಂದರೆ ಸರಿಯಾದುದೆಂದಾದರೆ ಔಚಿತ್ಯವು ಉಚಿತತೆಯು.

---


ಆಕರಗಳು

1) 1.8.90.ಮನುಸ್ಮೃತಿ.6.92 2) 10.20.ವೈದ್ಯಕೀಯ ಸುಭಾಷಿತ ಸಂಗ್ರಹಃ - ಕ್ಷೇಮಕುತೂಹಲದಲ್ಲಿ ಉದ್ಧೃತ. (ವೃದ್ಧಾಚಾರ್ಯರ ಸಂಪಾದನೆ.ಘಾಣೇಕರ್.ಗೋವಿಂದ ಭಾಸ್ಕರ. ಚೌಖಂಬಾ ಸಂಸ್ಕೃತ ಸೀರಿಜ್ ಆಫೀಸ್.ವಾರಣಾಸಿ 6) ವೈದ್ಯಕೀಯ ಸುಭಾಷಿತ ಮಾತು) 3) ಅದೇ.10.19.ಪು.67 4) ತೈತ್ತಿರೀಯೋಪನಿಷತ್.3.6. 5) ಜನಪ್ರಿಯನುಡಿ 6) ವೈದ್ಯಕೀಯ ಸುಭಾಷಿತ ಸಂಗ್ರಹಃ.10.20.ಪು.233 7) ಅದೇ 8)6.46 9) ಅಥರ್ವವೇದ.16.2.2. 10) ಉತ್ತರರಾಮಚರಿತ.5.30. 11) 6.2.5 12) ಶಾಂತಿ ಪರ್ವನ್.140.26. 13) ರಾಮಾಯಣ 5.24.21.

# 10. ಔದಾರ್ಯ

ಔದಾರ್ಯ ಎಂಬ ಪದವು ''ಉದಾರ'' ಎಂಬ ಪದದಿಂದ ಬಂದಿದ್ದು ಉದಾರ ಅಭಿಪ್ರಯಾವುಳ್ಳವನು. ಘನತೆಯುಳ್ಳ ಎಂಬರ್ಥ ಕೊಡುತ್ತದೆ. ಸನ್ಮಾರ್ಗ ಎಂಬ ಅರ್ಥದಲ್ಲಿ ನ್ಯಾಯಕಂದಲಿ ಅಭಿಪ್ರಾಯ ಪಡುತ್ತದೆ. ಸತತಂ ಸನ್ಮಾರ್ಗವರ್ತಿನೀ ಬುದ್ಧಿರೌದಾರ್ಯಂ. ಈ ಪದಕ್ಕೆ ವಿಶಾಲವಾದ ದೃಷಿಕೋಣವಿದೆ. ಯಾರು ಔದಾರ್ಯದಿಂದ ನಡೆಯುವರೊ ಅವರು ನಿಜಕ್ಕೂ ಉದಾರಿಗಳು. ಇವರು ನನ್ನವರು ಅವರು ಬೇರೆಯವರು ಎಂದು ಭಾವಿಸುವುದು ಹೇಯವಾದುದು. ಉದಾರಿಗಳಿಗೆ ಸಮಸ್ತ ಭೂಮಿಯೇ ಒಂದು ಕುಟುಂಬ :-

ಅಯಂ ನಿಜಃ ಪರೋವೇತ್ತಿಗಣನಾ ಲಘುಚೇತಸಾಂ ।
ಉದಾರಚರಿತಾನಾಂತು ವಸುದೈವ ಕುಟುಂಬಕಮ್ ।।[1]

ತನ್ನವರಿಗೆ ಒಳ್ಳೆಯದಾಗಿರುವುದರಲ್ಲಿ ಯಾವ ವಿಶೇಷವೂ ಇಲ್ಲ. ಅದು ಹಾಗೆಯೇ ಇರಬೇಕು. ತನ್ನ ಶತ್ರುಗಳಿಗೂ ಒಳ್ಳೆಯವರಾಗಿರುವವರು ನಿಜಕ್ಕೂ ಒಳ್ಳೆಯವರು. ಈ ಒಳ್ಳೆಯ ಗುಣವನ್ನು ನಾವು ರಾಮನು ರಾವಣನನ್ನು ಕೊಂದಾಗ ಅಂತ್ಯೇಷ್ಟಿ ಮಾಡುವಾಗ ವಿಭೀಷಣನಿಗೆ ಮಾಡುವಂತೆ ಹೇಳುವನು. ಯಾರು ತನ್ನ ಹೆಂಡತಿಯನ್ನು ಅಪಹರಿಸಿ, ಸಮಸ್ತ ತೊಂದರೆಗಳಿಗೆ ಕಾರಣವಾಗಿದ್ದನೋ ಯಾವುದು ಅತ್ಯಂತ ಕಠಿಣವಾದ ಯುದ್ಧವಾಗಿತ್ತೋ ಅದು ವಿಭೀಷಣನನೇ ಹೇಳುವಂತೆ :-

ಮರಣಾಂತಾನಿ ವೈರಾಣಿ ನಿರ್ವೃತ್ತಿಂನಃ ಪ್ರಯೋಜನಂ ।
ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾತವ ।।[2]

ಮರಣದಿಂದ ನಮ್ಮ ವೈರವು ಕೊನೆಗೊಂಡಿದೆ ನಮ್ಮ ಉದ್ದೇಶವು ಈಡೇರಿದೆ. ರಾವಣನು ನನಗೆ ಎಷ್ಟು ಪ್ರಿಯನೊ ನಿನಗೂ ಅಷ್ಟೇ ಪ್ರಿಯನು. ಆದ್ದರಿಂದ ಅವನಿಗೆ ಅಂತ್ಯ ಸಂಸ್ಕಾರವನ್ನು ಮಾಡು.

ಒಂದು ಹಳೆಯ ಸಂಸ್ಕೃತ ಶ್ಲೋಕ ಔದಾರ್ಯವನ್ನು ವರ್ಣಿಸುತ್ತದೆ :-

ಉಪಕಾರಿಣಿಯಃ ಸಾಧುಃ ಸಾಧುತ್ವೇ ತಸ್ಯ ಕೋಗುಣಃ ।
ಅಪಕಾರಿಣಿಯಃ ಸಾಧುಃ ಸ ಸಾಧುಃ ಸದ್ಭಿರುಚ್ಯತೇ ।।[3]

ಯಾರು ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡಿರುವರೋ ಅವರಲ್ಲಿ ಒಳ್ಳೆಯವರಾಗಿ ನಡೆದುಕೊಳ್ಳುವುದರಲ್ಲೇನು. ವಿಶೇಷವಿದೆ? ಯಾರು ತಮಗೆ ಅಪಕಾರ ಮಾಡಿದವರಿಗೂ ಪ್ರತಿಯಾಗಿ ಉಪಕಾರವನ್ನೇ ಎಸಗುವರೋ ಅವರೇ ಒಳ್ಳೆಯವರೆಂದು ತಿಳಿದವರು ಹೇಳುತ್ತಾರೆ.

ಔದಾರ್ಯವಿಲ್ಲದ ಒಳ್ಳೆಯತನದಿಂದೇನು ಪ್ರಯೋಜನ? ಈ ಹಿನ್ನಲೆಯಲ್ಲಿ ಒಂದು ಹಳೆಯ ಕಥೆಯನ್ನು ನೆನಪು ಮಾಡಿಕೊಳ್ಳಬಹುದು. ಒಂದು ಸಲ ಜಗನ್ನಾಥ ತ್ರಿಶೂಲಿ

ಅಬ್ದುಲ್ ರಹೀಮ್ ಖಾನ್ ಖಾನಾನ ಸ್ನೇಹಿತ ಕವಿಯು ಅಕ್ಬರನ ಆಸ್ಥಾನದಲ್ಲಿ ಅತ್ಯುನ್ನತನಾದ ವಕೀರ್ ಸ್ಥಾನವನ್ನಲಂಕರಿಸಿದ್ದವನು ತಾನು ಬರೆದಿದ್ದಂತಹ ಒಂದು ಕವನವನ್ನೋದಿದನು.

ಪ್ರಾಪ್ಯಚಲಾನಧಿಕಾರಾನ್ ಶತ್ರುಷು ಮಿತ್ರೇಷು ಬಂಧು ವರ್ಗೇಷು ।
ನಾಪಕೃತಂ ನೋಪಕೃತಂ ನೋಪಕೃತಂ ಕಿ ಕೃತಂ ತೇನ ॥

ಅತ್ಯುನ್ನತ ಸ್ಥಾನವನ್ನಲಂಕರಿಸಿ ಶತ್ರುಗಳಿಗೆ ತೊಂದರೆ ಮಾಡದೆ, ಮಿತ್ರರಿಗೆ ಸಹಕರಿಸದೆ ಇದ್ದರೆ ಅವನು ಮಾಡಿದ್ದಾದರೂ ಏನು? ಖಾನ್‌ಖಾನಾ ಅದನ್ನು ಕೇಳಿ ಒಂದು ಮಾತ್ರೆಯನ್ನು ಮಾತ್ರ ವ್ಯತ್ಯಾಸ ಮಾಡಿ ಪಠಿಸಿದನು.

ನೋಪಕೃತಂ ನೋಪಕೃತಂ ನೋಪಕೃತಂ ಕಿಂ ಕೃತಂ ತೇನ

ಈ ವಾಕ್ಯದಲ್ಲಿರುವ ಅಲಂಕಾರವೆಂದರೆ ಯಥಾಸಂಖ್ಯಾ. ಆಪಕೃತಂ ಎಂಬ ಪದ ಶತ್ರುಷು ಎಂಬುದರೊಡನೆ, ಉಪಕೃತಂ ಎನ್ನುವುದನ್ನು ಎರಡು ಬಾರಿ ಪ್ರಯೋಗಿಸಿರುವುದು ಮಿತ್ರೇಷು, ಬಂಧು ವರ್ಗೇಷು – ಮಿತ್ರರಲ್ಲಿ, ಸಂಬಂಧಗಳಲ್ಲಿ. ಅಪಕೃತಂ ಎನ್ನುವುದನ್ನು ಉಪಕೃತಂ ಎಂದು ವ್ಯತ್ಯಾಸ ಮಾಡಿದರೆ ಶತ್ರುಗಳಲ್ಲಿ ಖಾನಖಾನಾನ ಔದಾರ್ಯ ವ್ಯಕ್ತವಾಗುತ್ತದೆ. ತ್ರಿಶೂಲಿಗೆ ಅಧಿಕಾರವಿದ್ದದ್ದರಿಂದ ಅವನು ಶತ್ರುಗಳಿಗೂ ಒಳ್ಳೆಯದನ್ನು ಮಾಡಿದಂತಾಯಿತು. ಅದೇ ಔದಾರ್ಯವು.

ಹನುಮಂತನು ಸೀತೆಯನ್ನು ಸಂಧಿಸಿ ಅವಳಿಗೆ ರಾಮನ ವಿಜಯ ರಾವಣನ ಅವನತಿ, ವಿಭೀಷಣನ ರಾಜ್ಯಾಭಿಷೇಕ ತಿಳಿಸಿ ಎಲ್ಲಾ ಕ್ರೂರಿಗಳಾದ ರಾಕ್ಷಸರ ಸಂಹಾರಕ್ಕಾಗಿ ಅನುಮತಿ ಬೇಡಿದಾಗ ಅವರೇ ಅವಳಿಗೆ ಕಷ್ಟಕೊಟ್ಟಿದ್ದರೂ ಸಹ ಸೀತೆ ಅವರಿಗೆ ತೊಂದರೆ ಕೊಡಬಾರದೆಂದೂ ಅವರು ಕೇವಲ ತಮ್ಮ ಪ್ರಭುವಿನ ಆಜ್ಞೆಯನ್ನು ಪಾಲಿಸಿರುವರೆಂದೂ ಹೇಳಿ ತನ್ನ ಔದಾರ್ಯವನ್ನು ಪ್ರಕಟಿಸಿದಳು : ದಾಸೀನಾಂ ರಾವಣಸ್ಯಾಹಂಮರ್ಷಯಾಮಿ'. ತನ್ನ ಎಲ್ಲಾ ಕಷ್ಟಕಾರ್ಪಣ್ಯಗಳಿಗೂ ತನ್ನ ದುರ್ದೈವವನ್ನೇ ಅವಳು ಗುರಿಮಾಡುತ್ತಾಳೆ ಮತ್ತು ಮುಂದುವರೆದು ಹೇಳುತ್ತಾಳೆ – ನಕಶ್ಚಿನ್ನಾಪರಾಧ್ಯತಿ'. ಯಾರು ತಾನೇ ತಪ್ಪನ್ನೇ ಮಾಡುವುದಿಲ್ಲ? ಅಂತಹ ಔದಾರ್ಯವುಳ್ಳವಳಾದ ಸೀತೆಯು ಅವರೊಂದಿಗೆ ಕ್ರೂರವಾಗಿ ವರ್ತಿಸುವುದು ಸರಿಯಿಲ್ಲವೆಂದೂ ಅದು ಪಾಪಕಾರ್ಯದಲ್ಲಿ ಸಂತೋಷಿಸಿದಂತಾಗುವುದೆಂದೂ ಹೇಳುವಳು.

ಲೋಕಹಿಂಸಾವಿಹಾರಾಣಾಂ ಕ್ರೂರಾಣಾಂ ಪಾಪಕರ್ಮಣಾಮ್ ।
ಕುರ್ವತಾಮಪಿ ಪಾಪಾನಿ ನೈವಕಾರ್ಯಂ ಅಶೋಭನಮ್ ॥'

ಮಧ್ಯಕಾಲೀನದ ಅಂತ್ಯದಲ್ಲಿ ರಾಣಾ ಪ್ರತಾಪನ ಖಜಾನೆಯ ಮಂತ್ರಿಯಾದ ಭಾಮಾಶಾ ಇದ್ದನು. ರಾಣಾ ಪ್ರತಾಪನು ಮೊಘಲರೊಡನೆ ಯುದ್ಧವನ್ನು ಸತತವಾಗಿ ಮಾಡಿ ಬೊಕ್ಕಸ ಬರಿದಾಗಿದ್ದಾಗ ಅವನು ತನ್ನ ಪಿತ್ರಾರ್ಜಿತ ಆಸ್ತಿಯನ್ನೆಲ್ಲಾ ನೀಡಿ ಪ್ರತಾಪನು ಯುದ್ಧ ಮುಂದುವರೆಸುವಂತೆ ಮಾಡಿದನು.

ಜಗದೂಶಾ ಎಂಬ ಹಣವಂತ ಉದಾರಿಯ ಜೀವಿತವನ್ನು ಜಗದೂಚರಿತ ಎಂಬ ಹಸ್ತಪ್ರತಿಯಲ್ಲಿರುವ (ಇಂದಿಗೂ) ಗ್ರಂಥ ಸರ್ವಾನಂದಸೂರಿ ಎಂಬ (13-14ನೇ ಶತಮಾನ) ಜೈನಮುನಿಯಿಂದ ರಚಿತವಾದದ್ದು. ಭದ್ರೇಶ್ವರದ ವಾಸಿಯಾದ (ಗುಜರಾತ್) ಅವನು ಒಂದು ಬಾರಿ ನಗರದ ಹೊರಗೆ ಸಂಚರಿಸುತ್ತಿದ್ದನು. ಆಗ ಕುರಿಯ ಕುತ್ತಿಗೆಗೆ ಕಟ್ಟಿದ್ದಂತಹ ಕಲ್ಲು ಅವನ ಕಣ್ಣಿಗೆ ಬಿತ್ತು. ಅದೊಂದು ಬೆಲೆಬಾಳುವ ಕಲ್ಲೆಂದು ಅವನಿಗೆ ಅನಿಸಿತು. ಅವನು ಆ ಕುರಿಯ ಯಜಮಾನನಿಂದ ಆ ಬೆಲೆಬಾಳುವ ಕಲ್ಲನ್ನು ಕೊಂಡು ಅದನ್ನು ಶುದ್ಧಿಗೊಳಿಸಿ 100 ಸಾವಿರ ಬಂಗಾರದ ನಾಣ್ಯಗಳಿಗೆ ಮಾರಿದನು. ಆ ಕಲ್ಲು ಒಂದು ಪ್ರಶಸ್ತವಾದ ವಜ್ರವಾಗಿತ್ತು. ಆ ಹಣದಿಂದ ಅವನು ತನ್ನ ವ್ಯಾಪಾರದ ಆಮದು ರಫ್ತನ್ನು ವಿಸ್ತರಿಸಿದ. ಸ್ವಲ್ಪ ಕಾಲಾನಂತರ ಅವನಿಗೆ ಹೆಚ್ಚಾದ ಹಣ ದೊರೆಯಿತು.

ಆ ಹಣವು ಅವನಲ್ಲಿ ಅಹಂಕಾರವನ್ನು ಮೂಡಿಸಲಿಲ್ಲ. ಅವನ ಅಂತರಿಕ ಒಳ್ಳೆಯತನ ಆ ಹಣದಿಂದ ಧಾರ್ಮಿಕ ಕಾರ್ಯಗಳಿಗೆ ಸಹಕರಿಸಿದನು. ಅವನು ಅನೇಕ ತೀರ್ಥಯಾತ್ರೆಗಳನ್ನು ಆಯೋಜಿಸಿದನು. ಜೈನಮಂದಿರಗಳಲ್ಲಿ ಬಂಗಾರದ ಶಿಖರಗಳನ್ನು ಕಟ್ಟಿಸಿ, ಐದು ಪರಮೇಷ್ಠಿಗಳ ಪೂಜೆಗೆ ಸಹಕರಿಸಿದನು ಮತ್ತು ತನ್ನನ್ನು ಅನೇಕ ಪವಿತ್ರವಾದ ಕಾರ್ಯಗಳಲ್ಲಿ ತೊಡಗಿಸಿಕೊಂಡನು.

ಸಂವತ್ 1312ರಲ್ಲಿ (1255 ಕ್ರಿ.ಶ) ಅವನ ಗುರುವು 3 ವರ್ಷಗಳೊಳಗೆ ಗುಜರಾತಿನಲ್ಲಿ ಭಯಂಕರವಾದ ಕ್ಷಾಮ ಉಂಟಾಗುವುದೆಂದು ಭವಿಷ್ಯ ನುಡಿದನು. ಅದನ್ನು ಎಣಿಸಿ ಅವನು ನೂರಾರು ಗುಡಾಣಗಳನ್ನು ಸ್ಥಾಪಿಸಿ ಅದರಲ್ಲಿ ಧಾನ್ಯಗಳನ್ನು ಶೇಖರಿಸಲಾರಂಭಿಸಿದನು. ಅದರ ಮುಂದಿನ ವರ್ಷವೇ ಗುಜರಾತಿನಲ್ಲಿ ಭಯಂಕರವಾದ ಕ್ಷಾಮವುಂಟಾಯಿತು. ಅದು ವರ್ಣಿಸಲಸಾಧ್ಯವಾದ ದುರಂತವಾಗಿತ್ತು. ಜನರು ಆಹಾರಕ್ಕಾಗಿ ಅಳುತ್ತಿದ್ದರು. ಜನರ ಸ್ಥಿತಿಯನ್ನು ನೋಡಲಾಗದೆ ಅನ್‌ಹಿಲ್‌ವಾಡದ ದೊರೆಯಾದ ವಿಶಾಲದೇವನು ಜನರು ಅನೇಕ ಗುಡಾಣಗಳಷ್ಟು ಧಾನ್ಯ ಶೇಖರಿಸಿರುವುದಾಗಿ ತಿಳಿದು ಅವನಿಂದ ಅದನ್ನು ಕೊಂಡು ಜನರ ತೊಂದರೆ ತಪ್ಪಿಸಲು ಬಯಸಿದನು. ಜನರು ಪ್ರತಿಯಾಗಿ ಹಣವನ್ನು ಸ್ವೀಕರಿಸಲು ನಿರಾಕರಿಸಿದನು. ತನ್ನ 700 ಗುಡಾಣಗಳ ದ್ವಾರವನ್ನು ತೆಗೆಸಿ ಅಲ್ಲಿ ಶೇಖರಿಸಿಟ್ಟಿದ್ದಂತಹ ಧಾನ್ಯಗಳನ್ನು ಹಂಚಿ ಅತ್ಯಂತ ಗೌರವಕ್ಕೆ ಪಾತ್ರನಾದನು. ಬುದ್ಧಿವಂತರ ಮರ್ಯಾದೆ ಕಾಪಾಡಲು ಸ್ವರ್ಣಪಿಂಡವನ್ನು ನಿರ್ಮಾಣ ಮಾಡಿದ. ದೊಡ್ಡ ಲಾಡುಗಳನ್ನು ಮಾಡಿಸಿ ಅದರಲ್ಲಿ ಬಂಗಾರವನ್ನು ಇಟ್ಟು ಬುದ್ಧಿವಂತನ ಮನೆಗೆ ತಲುಪಿಸಿದ.

ಈಚಿನ ದಿನಗಳಲ್ಲಿ ಮಹಾತ್ಮಾಗಾಂಧಿಯವರು ಬ್ರಿಟೀಷರೊಡನೆ ಸೆಣಸಾಡಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ಆದರೆ ಅವರಿಗೆ ಬ್ರಿಟೀಷರ ಬಗ್ಗೆ ಯಾವ ಕೆಟ್ಟ ಭಾವನೆಯೂ ಇರಲಿಲ್ಲ. ಅವರು ಕೇವಲ ಬ್ರಿಟೀಷರ ದಬ್ಬಾಳಿಕೆಯ ವಿರುದ್ಧ ಮಾತ್ರವೇ ಸಿಡಿದಿದ್ದರು. ಅವರ ಮನಸ್ಸಿನಲ್ಲಿ ಆಂಗ್ಲರ ವಿರುದ್ಧ ಯಾವ ಸೇಡಿನ ಮನೋಭಾವನೆಯೂ ಇಲ್ಲದೆ ಪ್ರೀತಿ ಹಾಗೂ ವಿಶ್ವಾಸವಿತ್ತು. ಜವಹರಲಾಲ್ ನೆಹರೂ ಅವರು ಹಾಗೆಯೇ ಇದ್ದು ಆಂಗ್ಲರನ್ನು ಹೊರಹಾಕಿದ್ದರೂ ಸಹ ಬ್ರಿಟೀಷ್ ಕಾಮನ್‌ವೆಲ್ತ್‌ನ ಸದಸ್ಯರಾಗಿದ್ದರು.

ಕಾಳಿದಾಸ ತನ್ನ ಅಭಿಜ್ಞಾನಶಾಕುಂತಲದಲ್ಲಿ ಔದಾರ್ಯಕ್ಕೆ ಒಂದು ಸುಂದರವಾದ ಉದಾಹರಣೆಯನ್ನು ನೀಡುತ್ತಾನೆ. ಆರನೇ ಅಂಕದಲ್ಲಿ ಪ್ರಧಾನ ಮಂತ್ರಿ ದುಷ್ಯಂತನಲ್ಲಿ ಒಂದು ವಿಚಾರವಿಡುತ್ತಾನೆ. ಧನಮಿತ್ರ ಎಂಬ ಹಣವಂತ ವರ್ತಕ ಹಡಗಿನ ದುರಂತದಲ್ಲಿ ಸಾವನ್ನಪ್ಪಿದ್ದಾನೆ. ಅವನಿಗೆ ಸಂತಾನವಿಲ್ಲದ್ದರಿಂದ ಕಾನೂನಿನಂತೆ ಅವನ ಆಸ್ತಿಯನ್ನು ರಾಜನೇ ಮುಟ್ಟುಗೋಲು ಹಾಕಿಕೊಳ್ಳಬೇಕು. ಅದು ಪ್ರಧಾನಮಂತ್ರಿಯ ಅಭಿಪ್ರಾಯ. ಆದರೆ, ರಾಜನ ಅಭಿಪ್ರಾಯವೇ ಬೇರೆ. ಅವನು ವಿಚಾರಿಸಿ ಧನಮಿತ್ರನ ಒಬ್ಬ ಹೆಂಡತಿ ಗರ್ಭಿಣಿಯೆಂದು ತಿಳಿದು ಆಗರ್ಭಸ್ಥ ಶಿಶುವಿಗೆ ಹಣ ಸಿಗಬೇಕೆಂದು ನಿಶ್ಚಯಿಸುತ್ತಾನೆ. ಮತ್ತೂ ಸಹ ಡಂಗುರ ಹೊಡೆಸುತ್ತಾನೆ. ಯಾರಾದರೂ ಮಕ್ಕಳಿಲ್ಲದೆ ಸತ್ತರೆ ಅವರು ತನ್ನನ್ನೇ ಮಗನೆಂದು ದತ್ತು ಸ್ವೀಕರಿಸಬಹುದು.

ಯೇನ ಯೇನ ವಿಯಂಜ್ಯಂತೇ ಪ್ರಜಾಃ ಸ್ನಿಗ್ಧೇನ ಕರ್ಮಣಾ ।
ಸಸ ಪಾಪಾದೃತೇ ತಾಸಾಮ್ ದುಷ್ಯಂತ ಇತಿ ಘುಷ್ಯತಾಮ್ ॥

ಔದಾರ್ಯದಿಂದ ಹೃದಯ ಪರಿವರ್ತನೆಯಾಗುವುದು ಆಶ್ಚರ್ಯವೇನಲ್ಲ. ಅತ್ಯಂತ ಕೆಟ್ಟವರೂ ಸಹ ಅದರಿಂದ ಮಾರ್ಪಾಡಾಗಿ ಒಳ್ಳೆಯವರಾಗಬಹುದು. ಬೌದ್ಧರ ಜಾತಕ ಕಥೆಗಳಲ್ಲಿ ಶೀಲವತ್ ಎಂಬ ಕಾಶೀ ದೊರೆಯ ಕಥೆಯಿದೆ. ಅವನು ಎಷ್ಟು ಒಳ್ಳೆಯವನಾಗಿದ್ದನೆಂದರೆ ತನ್ನ ಶತ್ರುಗಳಿಗೂ ಶಿಕ್ಷೆ ನೀಡುತ್ತಿರಲಿಲ್ಲ. ಅಷ್ಟೇ ಅಲ್ಲ ಅವರಿಗೆ ಬಹುಮಾನ ನೀಡುತ್ತಿದ್ದ. ಒಂದು ಬಾರಿ ಅವನ ಒಬ್ಬ ಮಂತ್ರಿ ರಾಣಿಯರ ಬಗ್ಗೆ ಅಸಭ್ಯವಾಗಿ ನಡೆದುಕೊಂಡ. ಅವನು ಅವನಿಗೆ ಶಿಕ್ಷೆಕೊಟ್ಟು ರಾಜ್ಯದಿಂದ ಹೊರಹಾಕಿದಾಗ ಆ ಮಂತ್ರಿಯು ಗುಟ್ಟಾಗಿ ಪಕ್ಕದ ರಾಜನಾದ ಕೋಸಲನಿಗೆ ಹೇಳಿ ಕಾಶೀಯನ್ನು ಮುತ್ತಿಗೆ ಹಾಕುವಂತೆ ಮಾಡಿದ. ಅವನ ದಂಡನಾಯಕರ ಆದೇಶವನ್ನು ಮೀರಿ ತನ್ನ ಸುಸಜ್ಜಿತ ಸೈನ್ಯವಿದ್ದಾಗ್ಯೂ ಸಹ ಪ್ರತಿಕ್ರಿಯೆ ವ್ಯಕ್ತಪಡಿಸದೆ ಸಾವನ್ನೇ ರಕ್ತಪಾತಕ್ಕೆ ಬದಲಾಗಿ ಬಯಸಿದ. ಮುತ್ತಿಗೆ ಹಾಕಿದ ರಾಜನ ಆಜ್ಞೆಯಂತೆ ಕಾಶೀ ನರೇಶ ಹಾಗೂ ಅವನ ಮಂತ್ರಿಗಳು ನದಿಯ ಮರಳಿನಲ್ಲಿ ಕತ್ತಿನವರೆಗೆ ಹೂತು ಹಾಕಿದರು. ರಾತ್ರಿ ನರಿಗಳು ಹಬ್ಬವನ್ನಾಚರಿಸಲು ಬಂದಾಗ ತನ್ನ ಶಬ್ದದಿಂದ ಅದನ್ನು ರಾಜ ದೂರ ಓಡಿಸಿದನು. ಭಯದಿಂದ ನರಿಗಳು ಓಡಿದಾಗ ಅದರ ಚಲನದಿಂದ ಮರಳು ಸಡಿಲಗೊಂಡು ತಾನು ಮರಳಿನಿಂದ ಆಚೆ ಬಂದು ತನ್ನ ಮಂತ್ರಿಗಳೂ ಆಚೆ ಬರುವಂತೆ ಮಾಡಿದ. ಅಷ್ಟು ಹೊತ್ತಿಗೆ ಕೆಲವರು ಅಲ್ಲಿಗೆ ಬಂದು ಇಬ್ಬರು ಯಕ್ಷರ ನಡುವೆ ಹೂವನ್ನಿರಿಸಿದರು. ಯಕ್ಷರು ಆ ದೇಹವನ್ನು ಸಮನಾಗಿ ಇಬ್ಭಾಗ ಮಾಡಲಾಗದೆ ರಾಜನನ್ನು ಸಂಧಿಸಿದರು. ಯಕ್ಷರು ಅವನನ್ನು ಅರಮನೆಗೆ ಕರೆದೊಯ್ದಾಗ ಕತ್ತಿ ಹಿಡಿದು ಕೊಂಡು ಅವನು ದ್ವಾರಪಾಲಕರನ್ನು ತಪ್ಪಿಸಿ ಒಳಗೆ ಹೋಗಿಬಂದನೆಂದು ವಿಸ್ಮಿತನಾದನು. ಕಾಶೀರಾಜನು ನಡೆದದ್ದನ್ನೆಲ್ಲಾ ವಿವರಿಸಿದನು. ಆಗ ಕೋಸಲ ರಾಜನಿಗೆ ಪಶ್ಚಾತ್ತಾಪವುಂಟಾಯಿತು. ಅಂತಹ ಉದಾರಿಯಾದ ಕಾಶೀ ರಾಜನಿಗೆ ತಾನು ಅಷ್ಟು ಕ್ರೂರವಾಗಿ ನಡೆದುಕೊಂಡಿದ್ದಕ್ಕೆ ಅವನಿಗೆ ಬೇಸರವಾಯಿತು. ಅವನಲ್ಲಿ ಕ್ಷಮಾಪಣೆ ಕೇಳಿ ಅವನ ರಾಜ್ಯವನ್ನು ಅವನಿಗೇ ಹಿಂದಿರುಗಿಸಿದನು.

ಮಹಾಭಾರತ ಔದಾರ್ಯಕ್ಕೆ ಕೆಲವು ಘಟನೆಗಳನ್ನೂ ಪ್ರಸ್ತಾಪಿಸುತ್ತದೆ. ಮೊದಲನೆಯ ಘಟನೆಯೆಂದರೆ ಪಾಂಡವರು ವನವಾಸದಲ್ಲಿದ್ದಾಗ ಹಸ್ತಿನಾಪುರದಲ್ಲಿ ಯುಧಿಷ್ಠಿರ ಪರಾಜಿತನಿಗೆ ಅದರ ಕರಾರಿನಂತೆ ದ್ವೈತವನದ ಹತ್ತಿರ ಕೊಳದ ಬಳಿ ಇದ್ದನು. ಈಗ ದುರ್ಯೋಧನ ಅಧಿಪತಿಯಾಗಿದ್ದರಿಂದ ಕರ್ಣ ಹಾಗೂ ಶಕುನಿ ತಮ್ಮ ವೈಭವವನ್ನು ಪಾಂಡವರಿಗೆ ತೋರಿಸಲು ಬಯಸಿದರು. ಅದರಿಂದ ಅವರಲ್ಲಿ ಹೊಟ್ಟೆಕಿಚ್ಚು ಉಂಟುಮಾಡಿ ಅವರ ಸ್ವಾಭಿಮಾನಕ್ಕೆ ಧಕ್ಕೆ ತರಲು ಪ್ರಯತ್ನಿಸಿದರು. ಗೊಲ್ಲರ ಕೊಟ್ಟಿಗೆಯನ್ನು ನೋಡುವ ನೆಪದಲ್ಲಿ ದುರ್ಯೋಧನ ತನ್ನ ತಮ್ಮಂದಿರು, ಕರ್ಣ, ಶಕುನಿ, ದೊಡ್ಡ ಸೈನ್ಯದೊಂದಿಗೆ ದ್ವೈತವನಕ್ಕೆ ಬಂದ. ಆ ಕೊಳದ ಬಳಿ ತನ್ನ ಸೈನಿಕರು ತಂಗಲು ಆದೇಶಿಸಿದ. ಆದರೆ ಅಷ್ಟು ಹೊತ್ತಿಗೆ ಆಗಲೇ ಗಂಧರ್ವರಿಗೆ ಆಜ್ಞಾಪಿಸಲಾಗಿತ್ತು. ಆಗ ಗಂಧರ್ವರೊಡನೆ ಯುದ್ಧವಾಗಿ ಗಂಧರ್ವರ ರಾಜನಾದ ಚಿತ್ರರಥ ದುರ್ಯೋಧನಾದಿಗಳನ್ನು ಸೋಲಿಸಿದ. ಹತ್ತಿರವೇ ಇದ್ದ ಯುಧಿಷ್ಠಿರ ಈ ಸುದ್ದಿ ತಿಳಿದು ತನ್ನ ತಮ್ಮಂದಿರಿಗೆ ತಿಳಿಸಿ ಭೀಮನು ನಿರಾಕರಿಸಿದರೂ ಸಹ ದುರ್ಯೋಧನ ಹಾಗೂ ಅವನ ಸೈನ್ಯವನ್ನು ರಕ್ಷಿಸುವಂತೆ ಹೇಳಿದ. ಅವನ ಇಂಗಿತವೆಂದರೆ ಒಂದೇ ಮನೆತನದವರಲ್ಲಿ ಭಿನ್ನಾಭಿಪ್ರಾಯವಿರಬಹುದು. ಆದರೆ, ಅದರಿಂದ ಹೊರಗಿನವರು ಅನುಕೂಲ ಪಡೆಯಬಾರದೆಂದು.

ಭವಂತಿ ಬೇಧಾಃ ಜ್ಞಾತೀನಾಂ ಕಲಹಾಶ್ಚ ವೃಕೋದರ ।
ಪ್ರಸಕ್ತಾನಿ ಚ ವೈರಾಣಿ ಕುಲಧರ್ಮೋ ನ ನಶ್ಯತಿ ॥[8]

ಹೊರಗಿನವರು ಸಂಸಾರವನ್ನು ಹಾಳುಮಾಡಲು ಬಂದಾಗ, ವಿವೇಕಿಗಳು ಅದನ್ನು ಸಹಿಸುವುದಿಲ್ಲ. ಅವನ ಅಪ್ಪಣೆಯಂತೆ ಪಾಂಡವರು ಗಂಧರ್ವರೊಡನೆ ಹೋರಾಡಿದರು. ದುರ್ಯೋಧನ ಹಾಗೂ ಅವನ ಸೈನ್ಯವನ್ನು ರಕ್ಷಿಸಿದರು. ಅದು ಯುಧಿಷ್ಠಿರನ ಔದಾರ್ಯವಾಗಿತ್ತು. ಅವನ ಜಾಗದಲ್ಲಿ ಮತ್ತಾರಾದರೂ ಇದ್ದಿದ್ದರೆ ಜ್ಞಾತಿಯಾಗಲೀ, ಅಲ್ಲದಿರಲಿ ತನ್ನ ಶತ್ರುವಾದ ಕೌರವರಿಗೆ ಸಹಕರಿಸುತ್ತಿರಲಿಲ್ಲ.

ದ್ರೌಪದಿಯು ಕುಟೀರದಲ್ಲಿ ಒಬ್ಬಂಟಿಯಾಗಿದ್ದಾಗ ಎಲ್ಲ ಪಾಂಡವರೂ ಬೇಟೆಯಾಡಲು ತೆರಳಿದ್ದಾಗ ಜಯದ್ರಥನು ಅವಳನ್ನು ಅಪಹರಿಸಿದಾಗಲೂ ಸಹ ಯುಧಿಷ್ಠಿರ ತನ್ನ ಔದಾರ್ಯವನ್ನು ಮೆರೆದು ಭೀಮಾರ್ಜುನರಿಗೆ ಜಯದ್ರಥನನ್ನು ಬಿಡುಗಡೆ ಮಾಡುವಂತೆ ಹೇಳುತ್ತಾನೆ. ಬೇಟೆಯಿಂದ ಮರಳಿ ಬಂದ ನಡೆದ ಘಟನೆಯನ್ನೂ ಅಳುತ್ತಿರುವ ದ್ರೌಪದಿಯನ್ನೂ ಕಂಡು ಜಯದ್ರಥನನ್ನು ಸದೆಬಡೆದು ಭೀಮ ಯುಧಿಷ್ಠಿರನ ಮುಂದೆ ನಿಲ್ಲಿಸಿದಾಗ ಯುಧಿಷ್ಠಿರ ಜಯದ್ರಥನನ್ನು ಕ್ಷಮಿಸುತ್ತಾನೆ. ಅನಂತರ ಜಯದ್ರಥನು ಶಿವನಿಂದ ವರ ಪಡೆದು ತಪಗೈದು ಅವನನ್ನು ಸಂತೋಷಪಡಿಸಿ ಪಾಂಡವರ ಮೇಲೆ ಜಯ ಅರ್ಜುನನಿಲ್ಲದ ದಿನ ಮಾತ್ರ ಸಾಧ್ಯವಾಗುವುದೆಂದು ನುಡಿ.

ಪಂಚತಂತ್ರವು ಔದಾರ್ಯಕ್ಕೆ ಒಳ್ಳೆಯ ನಿದರ್ಶನ ನೀಡುತ್ತದೆ. ಕಥೆಯಂತೆ ಒಬ್ಬ ಬೇಟೆಯಾಡುವವನು ಕಾಡಿನಲ್ಲಿ ಒಂದು ಪಂಜರ, ಪಾಶ ಹಾಗೂ ಕೋಲನ್ನು ಹಿಡಿದು

ಅಲೆದಾಡುತ್ತಿದ್ದ. ಒಂದು ದಿನ ಒಂದು ಹೆಣ್ಣು ಪಾರಿವಾಳ ಹಿಡಿದು ಅದನ್ನು ತನ್ನ ಪಂಜರದಲ್ಲಿ ಹಾಕಿದ. ಅಷ್ಟು ಹೊತ್ತಿಗೆ ಆಕಾಶದಲ್ಲಿ ಮೋಡಗಳು ಬಂದು ಧಾರಾಕಾರವಾಗಿ ಮಳೆಯಾಯಿತು. ಬಿರುಗಾಳಿಯೊಂದಿಗೆ, ಆಕಾಶವು ನಿರ್ಮಲವಾದಾಗ ಬೇಡರವನು ಒಂದು ಮರದ ಕೆಳಗೆ ನಿಂತು ಅಲ್ಲಿ ಯಾರೇ ಇದ್ದರೂ ತನಗೆ ಆಶ್ರಯ ನೀಡುವಂತೆ ಬೇಡಿದ. ಏಕೆಂದರೆ ಅವನು ಚಳಿಯಿಂದ ಹಾಗೂ ಹಸಿವಿನಿಂದ ಬಳಲಿದ್ದ. ಅದೇ ಮರದ ತುದಿಯಲ್ಲಿ ಆ ಹೆಣ್ಣು ಪಾರಿವಾಳದ ಗಂಡನಾದ ಗಂಡು ಪಾರಿವಾಳ ಚಿಂತಾಕ್ರಾಂತವಾಗಿ ತನ್ನ ಮಡದಿ ಇನ್ನೂ ಬರಲಿಲ್ಲವೆಂದು ಕಳವಳಗೊಂಡಿತ್ತು. ಪಂಜರದಲ್ಲಿದ್ದ ಹೆಣ್ಣು ಪಾರಿವಾಳ ತಾನು ತನ್ನ ಮರದ ಕೆಳಗೇ ಇರುವೆನೆಂದು ಸುಮ್ಮನಿದ್ದಿತು. ಅದು ತನ್ನ ಗಂಡನಿಗೆ ಆ ಬೇಡರವನನ್ನು ನೋಡಿಕೊಳ್ಳುವಂತೆಯೂ ಅದೇ ಧರ್ಮವೆಂದೂ ಹೇಳಿತು. ಆ ಬೇಡರವನಿಗೆ ಭೀತಿಯುಂಟುಮಾಡಲು ಆ ಗಂಡು ಪಾರಿವಾಳ ಹಾರಿಹೋಗಿ ಎಲ್ಲಿಂದಲೋ ಬೋನನ್ನು ತಂದಿತು. ಆಗ ಬೇಡರವನು ಅದನ್ನು ಎಲೆಗಳ ಮೇಲಿಟ್ಟು ಬೆಂಕಿ ಹಚ್ಚಿದ. ಅವನಿಗೆ ಊಟ ನೀಡಲು ತಾನೂ ಅದೇ ಬೆಂಕಿಗೆ ಹಾರಿತು. ಗಂಡು ಪಾರಿವಾಳವನ್ನು ಕಳೆದುಕೊಂಡ ಹೆಣ್ಣು ಪಾರಿವಾಳ ತನ್ನ ಜೀವನದಲ್ಲಿ ಬೆಲೆಯಿಲ್ಲದೆ ತಾನೂ ಅದೇ ಬೆಂಕಿಗೆ ಹಾರಿತು. ಅದು ಆ ಬೇಡನಿಗೆ ಬಹಳ ನೋವಾಯಿತು. ಇದೆಲ್ಲದರಿಂದಲೂ ಪ್ರಾಯಶ್ಚಿತ್ತಗೊಂಡವನಾಗಿ ಆ ಬೇಡನು ಕಾಡಿನ ಕಾಳ್ಗಿಚ್ಚಿನಲ್ಲಿ ಬಿದ್ದು ತನ್ನ ಪ್ರಾಣವನ್ನೂ ಸಮರ್ಪಿಸಿದ.

ಕಾಲಿಯಾ ಅಥವಾ ಜಗನ್ನಾಥ ಎಂಬುವವನು ಆರ್ಯ ಸಮಾಜದ ಸಂಸ್ಥಾಪಕರಾದ ಸ್ವಾಮಿ ದಯಾನಂದ ಸರಸ್ವತಿಯವರಿಗೆ ವಿಷಕೊಟ್ಟನು. ಅವನು ಹಾಲಿನೊಂದಿಗೆ ವಿಷ ಬೆರೆಸಿ 1883ನೆಯ ಸೆಪ್ಟೆಂಬರ್ 29ನೇ ದಿನ ಕೊಟ್ಟ. ಅದರಿಂದ ದಯಾನಂದ ಸರಸ್ವತಿಗಳ ಪ್ರಾಣ ಹೋಯಿತು. ಆಗ ಸ್ವಾಮಿಯು ಅವನ ಕೃತ್ಯ ತಿಳಿದು ಅವನು ಶಿಕ್ಷೆಯಿಂದ ಪಾರಾಗಲು ನೇಪಾಳಕ್ಕೆ ಹೋಗಲು ಹಣವನ್ನು ನೀಡಿದರು.

ಇಂದಿನ ಪ್ರತ್ಯಕ್ಷ ಸಮಾಜದಲ್ಲಿ ಕುಷ್ಠರೋಗಿಗಳ ನಿವಾರಣೆಗಾಗಿ ಕೆಲಸ ಮಾಡುತ್ತಿದ್ದಂತಹ ಆಸ್ಟ್ರೇಲಿಯಾ ದೇಶದ ಕ್ರಿಶ್ಚಿಯನ್ ಪ್ರವಾದಿ ಅಬ್ರಹ್ಯಾಂ ಪ್ಯೂಯರ್ಟ್ ಸ್ಟೇನ್ಸ್ ಅವನ ಇಬ್ಬರು ಗಂಡು ಮಕ್ಕಳೊಂದಿಗೆ ದಹಿಸಲ್ಪಟ್ಟರು. ಅವನ ಮನೆಯ ಬಳಿಯೇ ಇದ್ದ ವಾಹನದಲ್ಲಿ ಕೆಲವು ದುಷ್ಕರ್ಮಿಗಳಿಂದ ಅವನ ಹೆಂಡತಿಯಾದ ಗ್ಲಾಡೀ ಸ್ಟೇನ್ಸ್ ಅತ್ಯಂತ ದುಃಖಿತಳಾಗಿದ್ದರೂ ಸಹ ಯಾವ ಕೋಪವನ್ನೂ ತೋರಿಸಿಕೊಳ್ಳದೆಯೇ ಸಾರ್ವಜನಿಕವಾಗಿ ಆ ದುಷ್ಕರ್ಮಿಗಳನ್ನು ಕ್ಷಮಿಸಿದಳು. ಇದು ಕ್ರಿಶ್ಚಿಯನ್ ಧರ್ಮಕ್ಕನುಗುಣವಾಗಿಯೇ ಇತ್ತು – ಎಲೈ ದೇವರೇ ಅವರನ್ನು ಕ್ಷಮಿಸು. ಏಕೆಂದರೆ ಅವರು ಏನು ಮಾಡುತ್ತಿರುವರೆಂಬ ಬಗ್ಗೆ ಅವರಿಗೆ ಅರಿವೆಯೇ ಇಲ್ಲ.

ಪ್ರಕೃತಿಯ ಮಾತೆಯು ಮಾನವರಲ್ಲಿ ಅನೇಕ ಒಳ್ಳೆಯ ಗುಣಗಳನ್ನು ನೀಡಿರುವಂತೆಯೇ ಅವರಲ್ಲಿ ಕೆಟ್ಟ ಗುಣಗಳನ್ನು ಇಟ್ಟಿದ್ದಾಳೆ ಅಹಂಕಾರ, ಮಮಕಾರಗಳು. ಈ ಎರಡೂ ಸಹ ಮಾನವನ ದೃಷ್ಟಿಯನ್ನು ಸಂಕುಚಿತಗೊಳಿಸುತ್ತದೆ. ''ಇದು ನನ್ನದು, ಇದು

ನನ್ನದಲ್ಲ'' ಎಂಬುದೇ ಈ ಎಲ್ಲಾ ಜಗಳಗಳಿಗೂ, ವೈಮನಸ್ಯಗಳಿಗೂ ಕಾರಣವಾಗಿರುತ್ತದೆ. ಯಾವಾಗ ಇದು ನಮ್ಮದು ಎಂದು ಪರಿಗಣಿಸುವೆವೋ ಆಗ ಅದರ ಬಗ್ಗೆ ನಮಗೆ ಮಮಕಾರವುಂಟಾಗುತ್ತದೆ. ಬೇರೆಯವರದರ ಬಗ್ಗೆ ಮಮಕಾರವಿರುವುದಿಲ್ಲ ಅವರ ಬಗ್ಗೆ ತಾತ್ಸಾರ ಅಥವಾ ಜಿಗುಪ್ಸೆಯಿರಬಹುದು. ಪಾಂಡವ ಕೌರವರ ಜಗಳವೇ ಧೃತರಾಷ್ಟ್ರ ಸಂಜಯರ ಸಂವಾದವಾಗಿದ್ದು ಗೀತೆಯ ಪ್ರಾರಂಭಕ್ಕೆ ಕಾರಣವಾಗಿದೆ - ಮಾಮಕಾಃ ಪಾಂಡನಾಶ್ಚೈವ ಕಿಮಕುರ್ವತ ಸಂಜಯ. ಆ ಮುದುಕನು ಪಾಂಡವರೂ ತನ್ನವರೇ ಎನ್ನುವುದನ್ನು ಮರೆತು ಅವರೂ ತನ್ನವರೇ ಎಂದರಿಯಲಿಲ್ಲ.

ಮಮಕಾರತ್ಯಾಗವೇ ಔದಾರ್ಯವು. ಅದನ್ನು ನೀಲಕಂಠದೀಕ್ಷಿತ ಸುಂದರವಾಗಿ ನಿರೂಪಿಸಿದ್ದಾನೆ :-

ತ್ಯಕ್ತವ್ಯೋ ಮಮಕಾರಃ ತ್ಯಕ್ತುಂ ಯದಿಶಕ್ಯತೇ ಸೋಽಯಂ ।
ಕರ್ತವ್ಯೋ ಮಮಕಾರಃ ಕಿಂತು ಸ ಸರ್ವತ್ರ ಕರ್ತವ್ಯಃ ॥ [9]

ಮಮಕಾರವನ್ನು ಬಿಡಲು ಸಾಧ್ಯವಾದರೆ ಬಿಡು. ಎಲ್ಲರಲ್ಲೂ ಮಮಕಾರವನ್ನು ಇಡು. ಇದೇ ವಿಷಯವನ್ನೇ ಆಚಾರ್ಯ ಶಂಕರರೂ ನಿರೂಪಿಸುತ್ತಾರೆ.

ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣುಃ
ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ ।
ಭವಸಮಚಿತ್ತಃ ಸರ್ವತ್ರತ್ವಂ
ವಾಂಛಸ್ಯಚಿರಾದ್ ಯದಿ ವಿಷ್ಣುತ್ವಂ ॥[10]

ಒಬ್ಬನೇ ವಿಷ್ಣು ನಿನ್ನಲ್ಲಿ, ನನ್ನಲ್ಲಿ, ಎಲ್ಲರಲ್ಲೂ ಇರುವವನು. ನೀನು ವಿನಾಕಾರಣ ನನ್ನಲ್ಲಿ ಕೋಪಗೊಂಡಿರುವೆ. ಎಲ್ಲರಲ್ಲೂ ಒಂದೇ ಭಾವನೆ ಇಡು. ನೀನು ಹೀಗಿದ್ದರೆ ಕೂಡಲೇ ವಿಷ್ಣುವಾಗುವೆ.

ಶಂಕರರು ಮಮಕಾರಕ್ಕೆ ಸುಂದರವಾದ ಉದಾಹರಣೆ ನೀಡುತ್ತಾರೆ. ಬಹಳ ಮಂದಿಯಿರುವ ಗುಂಪಿನಲ್ಲಿ ಯಾರಾದರೂ ಮಗನ ಅಥವಾ ಸ್ನೇಹಿತನ ಸಾವನ್ನು ಪ್ರಸ್ತಾಪಿಸಿದರೆ, ಯಾರ ಮಗ ಅಥವಾ ಸ್ನೇಹಿತ ಸತ್ತಿದ್ದಾರೋ ಅವರು ಮಾತ್ರವೇ ದುಃಖಿತರಾಗುತ್ತಾರೆ. ಮಿಕ್ಕವರಿಗೆ ಅಷ್ಟಾಗಿ ದುಃಖವಾಗುವುದಿಲ್ಲ ಏಕೆಂದರೆ ಅವರಿಗೆ ಸತ್ತವರಲ್ಲಿ ಮಮಕಾರವಿರುವುದಿಲ್ಲ. ಅದೇ ಅವರಿಗಾಗಿದ್ದರೆ, ಆದರೂ ಸಹ ಅದೇ ದುಃಖವನ್ನು ಅನುಭವಿಸುತ್ತಿದ್ದರು. ಮಮಕಾರವನ್ನು ಬೆಳೆಸುವುದು ಕೇವಲ ಮಾತಿನಲ್ಲಿ ಮಾತ್ರ ಸೀಮಿತವಾಗಿರುವುದಿಲ್ಲ. ಅದು ಪ್ರಕೃತಿಯ ವಿಕೋಪಗಳಾದಂತಹ ಪ್ರವಾಹ, ಭೂಕಂಪ, ರೈಲು ಅಥವಾ ವಿಮಾನದ ಅಪಘಾತಗಳು, ಪ್ರವಾಹದ ನದಿಯಲ್ಲಿ ಸಿಲುಕುವುದು ಅಥವಾ ಉರಿಯುತ್ತಿರುವ ಮನೆಯಲ್ಲಿ ಸಿಲುಕಿಕೊಳ್ಳುವುದು ಅಂತಹ ಸಂದರ್ಭಗಳಲ್ಲಿ

ಸಂಪೂರ್ಣವಾಗಿ ಪರಿಚಯವಿಲ್ಲದವರೂ ಸಹ ಪ್ರಾಣಹಾನಿಯಿಂದ ಕಾಪಾಡುತ್ತಾರೆ. ತಮ್ಮ ಜೀವವನ್ನೇ ಮುಡುಪಾಗಿಟ್ಟು ಸಹ ಅಂತಹ ಸಂದರ್ಭದಲ್ಲಿ ಮುಳುಗುತ್ತಿರುವ ವ್ಯಕ್ತಿ ಅಥವಾ ಬೆಂಕಿಯ ಅನಾಹುತಕ್ಕೆ ಸಿಲುಕಿದ ವ್ಯಕ್ತಿ ಮಮಕಾರಕ್ಕೆ ಕಾರಣವಾಗುತ್ತಾನೆ. ಅವರು ತಮ್ಮವರೇ ಎಂದೂ ಆದರಿಂದ ಅವರನ್ನು ರಕ್ಷಿಸಬೇಕೆಂದೂ ಅವರಿಗೆ ಅನಿಸುತ್ತದೆ.

---

ಆಕರಗಳು

1) ಪಂಚತಂತ್ರ.5.37 2) ರಾಮಾಯಣ.6.111.100-1 3) ಪಂಚತಂತ್ರ ಮಿತ್ರಬೇಧ-270 4) ರಾಮಾಯಣ.6.113.39 5) ಅದೇ.6.113.43 6) ಅದೇ.6.113.44 7) 6.23 8) ವನಪರ್ವ.243.2 9) ಪಂಚತಂತ್ರ. ಕಾಕೋಲೂಕೀಯಂ.133-182 10) 11.1.1. 11) ಭಜಗೋವಿಂದಸ್ತೋತ್ರ.24ನೇ ಶ್ಲೋಕ.

# 11. ಕೃತಜ್ಞತಾ

ಜ್ಞಾನ ಎಂಬ ಧಾತುವಿನಿಂದ ಕೃತ, ಕೃತಂಜಾನಾತಿ ಇತಿ ಕೃತಜ್ಞಃ. ಯಾರು ಒಳ್ಳೆಯ ಕೆಲಸವನ್ನು ನನಗೆ ಮಾಡಿದವರನ್ನು ಸ್ಮರಿಸುವರೋ ಅವರು ಕೃತಜ್ಞರು. ತಲ್ ಎಂಬ ಪ್ರತ್ಯಯವನ್ನು ಸೇರಿಸಿದಾಗ ಅದು ನಾಮಪದವಾಗುತ್ತದೆ. ತನಗಾದ ಸಹಾಯವನ್ನು ಸ್ಮರಿಸಿಕೊಳ್ಳುವುದೇ ಕೃತಜ್ಞತೆ.

ಸಾಮಾನ್ಯವಾಗಿ ತಮಗಾದ ಒಳ್ಳೆಯದನ್ನು ಮರೆಯುವುದೇ ಮಾನವರ ಸ್ವಭಾವ. ಯಾರು ತಮಗೆ ಒಳಿತನ್ನು ಮಾಡಿದರೋ ಅವರನ್ನು ದೂರಮಾಡಿ ಕಡೆಗಾಣಿಸುವುದೇ ಸ್ವಭಾವ. ಅದೇ ಮಾನವನ ದೌರ್ಬಲ್ಯ. ಮಹಾಭಾರತ ಅಂತಹ ಆರು ಜನರನ್ನು ಹೆಸರಿಸುತ್ತದೆ. ಷಡೇತೇಹ್ಯವಮನ್ಯಂತೇ ಜನಂ ಪೂರ್ವೋಪಕಾರಿಣಮ್[1]. ಅವರಲ್ಲಿ ಒಬ್ಬರು ತಾವು ಸಹಾಯ ಪಡೆದ ಮೇಲೆ ಸಹಾಯ ಮಾಡಿದವರನ್ನು ಮರೆಯುವವರು ಕೃತಾರ್ಥಶ್ಚಾ ಪ್ರಯೋಜಕಮ್[2]. ಸಾಮಾನ್ಯವಾದ ಈ ರೀತಿನೀತಿಗಳಿಗೆ ವಿರುದ್ಧವಾಗಿರುವವರೇ ಅತ್ಯಂತ ಅಪರೂಪ. ಆದ್ದರಿಂದ ಭಾರತೀಯ ಚಿಂತಕರು ಅವರನ್ನು ಮನಸಾರೇ ಹೊಗಳಿದ್ದಾರೆ. ಅವರೇ ಧನ್ಯರು – ಕ್ರತಿನೋ ಮನುಷ್ಯಾಃ ಅವರು ಎಂದೂ ಸಹ ನಮಗಾದ ಒಳ್ಳೆಯದನ್ನು ಸ್ಮರಿಸಿಕೊಳ್ಳುತ್ತಾರೆ. ಅವರನ್ನು ಯಾವುದೂ ಸಹ ಸರಿಗಟ್ಟಲಾರದು. ಚಂದ್ರನಾಗಲೀ, ಕುಬೇರನಾಗಲೀ, ಸೂರ್ಯನಾಗಲೀ, ಇಂದ್ರನಾಗಲೀ :–

ಕೃತಂ ಪರೇಣಾ ತ್ಯುಪಕಾರಯೋಗಂ ಸ್ಮರಂತಿ ನಿತ್ಯಮ್ ।
ತೇಷಾಂನ ತುಲ್ಯೋ ಭುವನೇಶಶಂಕೋ ನವಾಕುಬೇರೋ ನರವಿರ್ನಶಕ್ರಃ ॥[3]

ಇದೇ ಅಭಿಪ್ರಾಯವನ್ನೇ ಚಾಣಕ್ಯ ಎರಡು ಕಡೆ ಪ್ರತಿಧ್ವನಿಸುತ್ತಾನೆ. ಮೊದಲನೆಯದಾಗಿ ಒಳ್ಳೆಯವರು ತಮಗೆ ಮಾಡಿದ ಸಣ್ಣ ಸಹಾಯವನ್ನು (ಸಾಸಿವೆಕಾಳಿನಷ್ಟು) ನೆನೆಯುತ್ತಾರೆ ಮತ್ತು ಅದಕ್ಕೆ ಪರ್ವತದಂತೆ ಭಾವಿಸುತ್ತಾರೆ – ತಿಲಮಾತ್ರಮಪ್ಯುಪಕಾರಂ ಶೈಲ ಮಾತ್ರಂ ಮನ್ಯತೇ ಸಾಧುಃ ಇನ್ನೊಂದೆಡೆ ಅವರೇ ಹೇಳುವಂತೆ ಒಬ್ಬ ಒಳ್ಳೆಯವನಿಗೆ ತಾನು ಪಡೆದ ಸಹಾಯವನ್ನು ತೀರಿಸುವವರೆಗೆ ನಿದ್ದೆಬರುವುದಿಲ್ಲ – ಸ್ವಲ್ಪ ಮಪ್ಯುಪಕಾರ ಕೃತೇ ಪ್ರತ್ಯುಪಕಾರಂ ಕರ್ತುಂ ಆರ್ಯೋನ ಸ್ವಪಿತಿ[4].

ರಾಮಾಯಣದಲ್ಲಿ ಕೃತಜ್ಞತೆಗೆ ಉಲ್ಲೇಖವಿದೆ. ರಾವಣನ ವಿರುದ್ಧ ಯುದ್ಧಕ್ಕೆ ಮಳೆಗಾಲ ಮುಗಿಯುವವರೆಗೆ ಕಾಯುವುದು ಅನಂತರ ಶರತ್ಕಾಲದ ಪ್ರಾರಂಭವಾಗುವವರೆಗೂ ಕಾಯುವುದು. ಸುಗ್ರೀವ ತನಗಾದ ಒಳ್ಳೆಯತನಕ್ಕೆ ಪ್ರತ್ಯುಪಕಾರ ಮಾಡುವನೆಂದು ರಾಮನ ಭಾವನೆ. ಧೈರ್ಯಶಾಲಿಗಳು ತಾವು ಪಡೆದ ಸಹಾಯವನ್ನು ತೀರಿಸುತ್ತಾರೆ. ಅದು ಹಾಗಾಗದಿದ್ದಲ್ಲಿ ಒಳ್ಳೆಯವರ ಮನಸ್ಸಿಗೆ ನೋವಾಗಬಹುದು :–

ಉಪಕಾರೇಣ ವೀರಾಸ್ತು ಪ್ರತೀಕಾರೇಣ ಯುಜ್ಯತೇ ।
ಅಕೃತಜ್ಞೋ ಪ್ರತಿಕೃತೀ ಹಂತಿ ಸತ್ವವತಾಂ ಮನಃ॥[5]

ಎರಡನೆಯ ಸಲ ಈ ಸನ್ನಿವೇಶ ಬರುವುದು ಯಾವಾಗೆಂದರೆ ಸುಗ್ರೀವನು ಸೀತಾನ್ವೇಷಣೆಯಲ್ಲಿ ನಿಷ್ಕ್ರಿಯವಾಗಿರುವುದು. ಆಗ ರಾಮನು ಕುಪಿತನಾಗಿ ಲಕ್ಷ್ಮಣನ ಮೂಲಕ ಸುಗ್ರೀವನಿಗೆ ಸಂದೇಶವನ್ನು ಕಳುಹಿಸುತ್ತಾನೆ. ಸ್ನೇಹಿತರಿಂದ ಉಪಕಾರ ಪಡೆದು, ಅವರಿಗೆ ಪ್ರತಿಯಾಗಿ ಉಪಕಾರ ಮಾಡದೆ ಕೃತಘ್ನರಾಗಿರುವವರು ಸಾವಿಗೆ ಪಾತ್ರರಾಗುತ್ತಾರೆ:-

ಪೂರ್ವಂ ಕೃತಾರ್ಥೋ ಮಿತ್ರಾಣಾಂ ನ ತತ್ ಪ್ರತಿಕರೋತಿಯಃ ।
ಕೃತಘ್ನಃ ಸರ್ವಭೂತಾನಾಂ ಸ ವಧ್ಯಃ ಪ್ಲವಗೇಶ್ವರ ॥[6]

ಅನಂತರ ಕೋಪದಿಂದ ಬ್ರಹ್ಮನಿಂದ ಹೊರ ಹೊಮ್ಮಿದ ಶ್ಲೋಕವನ್ನೇ ಅವನು ಪುನರುಚ್ಚರಿಸುತ್ತಾನೆ.

ಗೋಘ್ನೇ ಚೈವ ಸುರಾಪೇಚ ಚಾರೇ ಭಗ್ನವ್ರತೇ ತಥಾ ।
ಸರ್ವಸ್ಯ ನಿಷ್ಕೃತಿಃ ಪ್ರೋಕ್ತಾ ಕೃತಘ್ನೇ ನಾಸ್ತಿ ನಿಷ್ಕೃತಿಃ ॥[7]

ಪುಣ್ಯಾತ್ಮರು ಗೋಹತ್ಯಾ ಪಾತಕಿಯನ್ನೂ, ಮದ್ಯಪಾನ ಮಾಡುವವನನ್ನೂ, ಕಳ್ಳನನ್ನೂ, ಪ್ರತಿಜ್ಞಾಭಂಗ ಮಾಡಿದವನನ್ನೂ ಕ್ಷಮಿಸುತ್ತಾರೆ. ಆದರೆ ಕೃತಘ್ನರನ್ನು ಕ್ಷಮಿಸುವುದಿಲ್ಲ. ಅವನಿಗೆ ಕ್ಷಮೆಯೆಂಬುದೇ ಇಲ್ಲ.

ಲಕ್ಷ್ಮಣನು ಸರಿಯಾಗಿಯೇ ಶ್ಲೋಕವನ್ನು "ಸರ್ವಲೋಕನಮಸ್ಕೃತಾ" ಎಂದು ವರ್ಣಿಸುತ್ತಾನೆ. ಸಂಸ್ಕೃತ ಬಲ್ಲವರಲ್ಲಿ ಈ ಪದ ಮನೆಮಾತಾಗಿದೆ. ಮಹಾಭಾರತದಲ್ಲಿ ಅದೇ ರೀತಿ ಅದು ಪುನರುಕ್ತವಾಗಿದೆ. ಮೂರನೆಯ ಪಾದದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆ. – "ಸರ್ವಸ್ಯ ನಿಷ್ಕೃತಿಃ ಪ್ರೋಕ್ತಾ" ಎಂಬುದು "ನಿಷ್ಕೃತಿಃ ವಿಹಿತಾ ರಾಜನ್" ಎಂದು ವ್ಯತ್ಯಸ್ತಗೊಳಿಸಲಾಗಿದೆ. ನಾಲ್ಕನೇ ಪಾದದಲ್ಲಿ "ಕೃತಘ್ನೇ ನಾಸ್ತಿ ನಿಷ್ಕೃತಿಃ" ಮಿಕ್ಕ ಮೂರು ಪಾದಗಳೊಂದಿಗೆ ಬರುತ್ತದೆ. ಪ್ರಾಯಶಃ ಅದಕ್ಕೆ ಮಿಕ್ಕೆಲ್ಲದ್ದಕ್ಕಿಂತಲೂ ಹೆಚ್ಚಿನ ತೂಕವಿದೆ.

ರಾಮಾಯಣದ ಸಂದರ್ಭದಲ್ಲಿ ಹೇಳುವುದಾದರೆ ರಾವಣನ ಅನೇಕ ತಪ್ಪುಗಳ ಮಧ್ಯವೂ ಇದಿತ್ತು. ಶುಕಸಾರಣರೆಂಬ ಇಬ್ಬರು ದೂತರು ರಾಮನ ಶಕ್ತಿಯನ್ನು ಅಳೆಯಲು ಕಳುಹಿಸಿದಾಗ ಅವರು ಬಂದು ರಾಮನನ್ನು ಹೊಗಳಿದಾಗ ಅವರನ್ನು ಕೊಲ್ಲುವ ಬುದ್ಧಿಯುಂಟಾದರೂ ತನ್ನನ್ನು ತಾನು ತಡೆದುಕೊಡು ಅವರು ಹಿಂದೆ ಮಾಡಿದ ಸಹಾಯವನ್ನು ಸ್ಮರಿಸಿದ.

ಹನ್ಯಾಂ ಅಹಂ .......... ಪಾಪೌ ಶತ್ರುಪಕ್ಷ ಪ್ರಶಂಸಿಣೌ ।
ಯದಿ ಪೂರ್ವೋಪಕಾರೈರ್ಮೇಕ್ರೋಧೋ ನಮೃದುತಾಂ ವ್ರಜೇತ್ ॥[8]

ರಾಮಾಯಣದಿಂದ ಮಹಾಭಾರತಕ್ಕೆ ' ಬರುವುದಾದರೆ ಇಲ್ಲಿ ಕೃತಘ್ನರಿಗೆ ನೀಡುವ ಶಿಕ್ಷೆ ಹಿರಿದಾದುದು. ಒಳ್ಳೆಯದನ್ನು ಸ್ಮರಿಸಿಕೊಳ್ಳದಿರುವುದು ಬ್ರಾಹ್ಮಣನನ್ನು ಕೊಂದಷ್ಟೇ ಪಾಪವು. ಕೃತಘ್ನರಿಗೆ ಒಳ್ಳೆಯ ಹೆಸರಿಲ್ಲ. ಒಳ್ಳೆಯ ಮರ್ಯಾದೆಯಿಲ್ಲ, ಸುಖವೂ ಇಲ್ಲ.

ಕುತಃ ಕೃತಘ್ನಸ್ಯಯಶಃ ಕುತಃ ಸ್ಥಾನಂ ಕುತಃ ಸುಖಂ. ಮಾಂಸಾಹಾರಿಗಳಾದ ಪ್ರಾಣಿಗಳೂ ಸಹ ಕೃತಘ್ನರಾಗಿರುವುದಿಲ್ಲ :- ಕ್ರವ್ಯಾದಾಅಪಿರಾಜೇಂದ್ರ ಕೃತಘ್ನಂ ನೋಪಭುಂಜತೇ[10], ಕೃತಘ್ನರೂ, ದ್ರೋಹಮಾಡುವವರೂ ನರಕವನ್ನೈದುವವರು - ಕೃತಘ್ನಾ ನರಕಂ ಯಾಂತಿ ಯೇತು ವಿಶ್ವಾಸ ಘಾತಿನಃ. ಅವರು ನರಕಕ್ಕೆ ಹೋಗುವುದು ಮಾತ್ರವಲ್ಲ ಅಲ್ಲೇ ಅನಾದಿಕಾಲದವರೆಗೂ ಇರುತ್ತಾರೆ - ಕೃತಘ್ನಾನಾಂ ಗತಿಸ್ತಾತ ನರಕಂ ಶಾಶ್ವತೀಃ ಸಮಾಃ. ಆದ್ದರಿಂದ ಉಪದೇಶವೆಂದರೆ. ಅವರೊಂದಿಗೆ ಯಾವ ವಿಧವಾದ ಸಂಬಂಧವನ್ನೂ ಇಟ್ಟುಕ್ಕೊಳ್ಳಬಾರದು. ಆದ್ದರಿಂದ ಬೇರೆಯವರ ಕೆಲಸ ಮಾಡುವಾಗ ನಾವು ಸ್ವಲ್ಪ ಕೆಲಸವನ್ನು ಬಿಡಬೇಕು.

ನಾನರ್ಥಿಕೋರ್ಥ ಸಂಬಂಧಂ ಕೃತಘ್ನೇನ ಸಮಾಚರೇತ್
ಅರ್ಥೀತು ಶಕ್ಯತೇ ಭೋಕ್ತುಂ ಕೃತಕಾರ್ಯೋಽವಮನ್ಯತೇ ।
ತಸ್ಮಾತ್ ಸರ್ವಾಣಿ ಕಾರ್ಯಾಣಿ ಸಾವಶೇಷಾತ್ ಕಾರಯೇತ್ ॥ [11]

ಆದ್ದರಿಂದ ವಿವೇಕಿಗಳು ಪಾಪಿಗಳನ್ನೂ, ನಾಚಿಕೆಯಿಲ್ಲದವರನ್ನೂ ಬಿಡಬೇಕು. ಪರಿತ್ಯಾಜ್ಯೋ ಬುಧೈಃ ಪಾಪಾಃ ಕೃತಘ್ನೋ ನಿರಪತ್ರಪಃ

ಪದ್ಮಪುರಾಣ ಸರಿಯಾಗಿಯೇ ಹೇಳುವಂತೆ ಯಾರು ಸಂತೋಷವನ್ನು ಹೊಂದಿರುವವರೋ ಅವರು ಕೃತಜ್ಞರಾಗಿರಬೇಕು. ಅದು ಅವನಿಗೇ ಒಳಿತನ್ನುಂಟು ಮಾಡುತ್ತದೆ. ಯಾರಿಗೆ ತನ್ನ ಇಷ್ಟವೇ ಗೊತ್ತಿಲ್ಲವೋ ಅವರ ಜೀವನ ಪ್ರಾಣಿಜೀವನವೇ ಸರಿ :-

ಭವಿತವ್ಯಂ ಕೃತಜ್ಞೇನ ಜನೇನ ಸುಖಮೀಯುಷಾ ।
ವೇತ್ತಿ ಸ್ವಾರ್ಥಂ ನಯಸ್ತಸ್ಯ ಜೀವಿತಂ ಪಶುನಾ ಸಮಮ್ ॥[12]

ಕೇವಲ ಮನುಷ್ಯರೊಂದಿಗೆ ಮಾತ್ರವೇ ಕೃತಜ್ಞತೆ ಹೋಗುವುದಿಲ್ಲ. ಪ್ರಾಣಿಗಳಿಗೂ - ಕ್ರೂರ ಪ್ರಾಣಿಗಳಿಗೂ ಅದಿದೆ. ಸಿಂಹದ ಬಗ್ಗೆ ಒಂದು ಕಥೆಯಿದೆ. ಅದರ ಕಾಲಿಗೆ ಮುಳ್ಳುಚುಚ್ಚಿತ್ತು. ಅದು ನೋವಿನಿಂದ ನರಳುತ್ತಿತ್ತು. ಒಬ್ಬ ಅರಣ್ಯವಾಸಿ ಅದನ್ನು ನೋಡಿ ಅದರ ಮುಳ್ಳನ್ನು ತೆಗೆದ. ಆಗ ಆ ಸಿಂಹವು ಅವನ ಮೇಲೆ ಎರಗಿತು. ಆ ಸಿಂಹಕ್ಕೆ ಕೆಲವು ದಿನಗಳಿಂದ ಆಹಾರವನ್ನು ನೀಡಿರಲಿಲ್ಲ. ಪರಿಣಾಮವಾಗಿ ಅದು ಬಹಳವಾಗಿ ಹಸಿದಿತ್ತು. ಆಗ ಸಿಂಹವು ಆ ಅರಣ್ಯವಾಸಿಯನ್ನು ನೋಡಿತು. ಅವನೇ ತನ್ನ ಮುಳ್ಳನ್ನು ತೆಗೆದವನೆಂದು ಕಂಡು ಹಿಡಿಯಿತು, ಕೊಲ್ಲುವುದಿರಲಿ, ಅವನನ್ನು ಮುಟ್ಟಲೂ ಇಲ್ಲ. ಅದು ಆ ಕ್ರೂರ ಪ್ರಾಣಿಯಾದ ಸಿಂಹ ಮಾಡಿದ ಕೃತಜ್ಞತೆ.

ಜುಲೈ 21, 2010ರ ಹಿಂದೂಸ್ತಾನ್ ಟೈಮ್ಸ್‌ನ ಇನ್ನರ್ ವಾಯ್ಸ್ ಎಂಬ ಅಂಕಣದಲ್ಲಿ ಊರ್ವಶೀಗೋಯಲ್ ಬಹಳ ಕುತೂಹಲಕರಿಯಾದ ವಿಷಯ ಬರೆದಿದ್ದ. ಅದನ್ನು ಇಲ್ಲಿ ನೀಡಲಾಗಿದೆ - ನಾನು ಆಗ ತಾನೇ ನಿವೃತ್ತನಾಗಿದ್ದೆ. ನಾನು ಕಟ್ಟಿದ ಮನೆ ನನಗೆ ದೊಡ್ಡದಾಗಿತ್ತು. ಆದ್ದರಿಂದ ಅದರ ಒಂದು ಕೊಠಡಿಯನ್ನು ನಾನು ಸಂತೋಷ್ ಸಿಂಗ್ ಎಂಬುವವನಿಗೆ ಬಾಡಿಗೆಗೆ ಕೊಟ್ಟೆ. ಅವನು ಯಂತ್ರಕರ್ಮಿಯಾಗಿದ್ದ, ನಾನು ಅವನನ್ನು

ಮೊದಲ ಬಾರಿ ಕಂಡಾಗಲೇ ಅವನ ವ್ಯಕ್ತಿತ್ವ ವೈಶಿಷ್ಟ್ಯವನ್ನು ಕಂಡಿದ್ದೆ. ಅವನು ಶಾಂತಿ ಹಾಗೂ ಸಂತೋಷದ ಮೂರ್ತಿಯಾಗಿದ್ದ.

''ಸಂತೋಷ್ ಜೀ, ನಾನು ಹತ್ತು ಘಂಟೆಗೆ ಮುಖ್ಯದ್ವಾರವನ್ನು ಮುಚ್ಚುವುದರಿಂದ ನೀನು ಅಷ್ಟರೊಳಗೆ ಹಿಂದಿರುಗಿರಬೇಕು''. ನಾನು ನನ್ನ ಅಧಿಕಾರಾವಧಿಯ ಕಂಠದಲ್ಲಿ ನುಡಿದೆ. ಅದು ಬಹಳ ಒಳ್ಳೆಯದು. ಅದು ನನ್ನನ್ನು ನಿಯಮಬದ್ಧವನ್ನಾಗಿಸುತ್ತದೆ ಎಂದು ಅವನು ನಗುತ್ತಾ ಹೇಳಿದನು.

ಸ್ವಲ್ಪ ದಿನಗಳ ನಂತರ ಅವನು ರಾತ್ರಿಯುದ್ದಕ್ಕೂ ಮೊಗಸಾಲೆಯ ದೀಪ ಉರಿಸುತ್ತಿದ್ದನು. ನಾನು ಅವನಿಗೆ ಅದನ್ನು ತಿಳಿಸಿದಾಗ ಅವನು ಹೇಳಿದ - ನಾನು ಹಾಗೆ ಮಾಡುವುದಕ್ಕೆ ಕಾರಣವೆಂದರೆ ನಮ್ಮ ರಸ್ತೆಯಲ್ಲಿ ನಡೆದು ಹೋಗುವವರಿಗೆ ದಾರಿತೋರಲಿ ಎಂದು. ನಾನು ಅದರ ವೆಚ್ಚ ಭರಸುತ್ತೇನೆ. ನೀವೇನೂ ಚಿಂತಿಸದಿರಿ.

ಒಂದು ಸಂಜೆ ಒಬ್ಬ ಸ್ನೇಹಿತ ನನ್ನನ್ನು ಕಾಣಲು ಬಂದ. ಸ್ವಲ್ಪ ಮಾತುಕತೆಯಾದ ಬಳಿಕ ಅವನು ಹೇಳಿದನು - ನೀನು ವಸೂಲಿ ಮಾಡುತ್ತಿರುವ ಬಾಡಿಗೆ ಬಹಳ ಕಡಿಮೆ. ನೀನು ನಿನ್ನ ಅಂತಸ್ತಿಗೆ ಸರಿಯಾದ ಬಾಡಿಗೆಯವರನ್ನಿಡಬೇಕಿತ್ತು. ನಾನು ನನ್ನ ಮಗ ಅಮೇರಿಕಾದಿಂದ ಬರುವನೆಂದೂ ಅವನಿಗೆ ಆ ಕೋಣೆ ಬೇಕೆಂದೂ ಕತೆಕಟ್ಟಿ ಹೇಳಿದೆ.

ಇದು ನಿಜಕ್ಕೂ ಸುಸಂಗತಿ, ನೀವು ಅದೃಷ್ಟಶಾಲಿಗಳು. ಯುವಕರು ವಿದೇಶಕ್ಕೆ ಹೋಗುವುದನ್ನು ನಾನು ಕಂಡಿರುವೆ. ಆದರೆ ಹಿಂದಿರುಗಿ ಬರುವವರು ಬಹಳ ಕಡಿಮೆ. ನಾನು ಈ ತಿಂಗಳೊಳಗೆ ಈ ಕೋಣೆಯನ್ನು ಬಿಟ್ಟುಕೊಡುವೆ.

ಆ ತಿಂಗಳು ಕೊನೆಯ ದಿನಾಂಕ ಅವನು ತನ್ನ ಮಾತನ್ನು ಉಳಿಸಿಕೊಂಡ. ಅವನು ಮನೆ ಬಿಡುತ್ತಿದ್ದಾಗ ಮೂಲೆಯಲ್ಲಿ ಒಂದು ಚಿಕ್ಕ ಡಬ್ಬಿಯನ್ನು ಕಂಡೆ. ಅದರಲ್ಲಿ ನನ್ನ ಬಂಗಾರದ ಸರವಿತ್ತು. ಅದು ಬಹಳ ಕಾಲದಿಂದ ಗೋಚರವಾಗಿರಲಿಲ್ಲ. ಸ್ವಲ್ಪ ತಡೆದು ನಾನು ಹೇಳಿದೆ - ಸಂತೋಷ್‌ಜೀ ಅದು ಬಂಗಾರದ್ದೆಂದು ನಿನಗೆ ತಿಳಿದಿರಲಿಲ್ಲವೇ? ಅದಕ್ಕೆ ಅವನು ನಕ್ಕು ಹೇಳಿದ - ನಾನು ಬೆಪ್ಪನಿರಬಹುದು ಆದರೆ ಕಲ್ಲಿಗೂ ಬಂಗಾರಕ್ಕೂ ವ್ಯತ್ಯಾಸಗೊತ್ತಿಲ್ಲದಷ್ಟು ಮೂರ್ಖ ನಾನಲ್ಲ. ನಾನು ಅವನಲ್ಲಿ ಸಂಶಯಾತ್ಮಕವಾಗಿ ಹಾಗೂ ಮರ್ಯಾದೆಯಿಂದ ನೋಡಲಾರಂಭಿಸಿದೆ.

ಅವನ ಕುದುರೆ ಬಂಡಿ ಹೋಗುತ್ತಿದ್ದಾಗ ನಾನು ನನ್ನನ್ನು ಬಹಳ ನಿಕೃಷ್ಟವಾಗಿ ಅವನನ್ನು ಉತ್ಕೃಷ್ಟವಾಗಿ ನೋಡಲಾರಂಭಿಸಿದೆ. ಅನಕ್ಷರಸ್ಥ ನನಗೆ ಪಾಠ ಕಲಿಸಿದ್ದ. ಯಾವ ದೂರೂ ಇಲ್ಲ ಕೇವಲ ಗೌರವ ಉಳಿದಿತ್ತು.

ಇನ್ನೊಂದು ಘಟನೆಯನ್ನೂ ಇಲ್ಲಿ ನಮೂದಿಸಬೇಕಾಗುತ್ತದೆ. ಸರದಿಯ ಸಾಲು ಅತ್ಯಂತ ಉದ್ದವಾಗಿತ್ತು. ಪ್ರತಿಯೊಬ್ಬರೂ ಆತಂಕದಿಂದಿದ್ದರು. ಅವರು ಒಬ್ಬರನ್ನೊಬ್ಬರು ತಳ್ಳುತ್ತಿದ್ದರು ಗೊಂದಲವಿತ್ತು.

ಆ ಸರದಿಯಲ್ಲಿ ನಿಂತಿದ್ದ ಒಬ್ಬ ಅತ್ಯಂತ ಆತಂಕದಿಂದ ಪದೇಪದೇ ತನ್ನ ಕೈಗಡಿಯಾರ ನೋಡುತ್ತಿದ್ದ. ಅವನು ಸುಂದರವಾದ ವೇಷವನ್ನು ಧರಿಸಿದ್ದ, ಬಿಸಿಲಿನ ಬೇಗೆಯಿಂದ ಬೆವರುತ್ತಿದ್ದ.

ನೀನು ಮೊದಲ ಬಾರಿ ಅರ್ಜಿಹಾಕಿದ್ದೀಯಾ ಎಂದು ಒಬ್ಬ ಮುದುಕ ನಕ್ಕ. ಅದಕ್ಕೆ ಅವನು ಗಮನಹರಿಸಲಿಲ್ಲ. ಅವನು ಮತ್ತೊಂದು ದಿಕ್ಕನ್ನು ನೋಡಲಾರಂಭಿಸಿದ, ಮುದುಕನ ಮಾತಿಗೆ ಕಿವಿಗೊಡದೆ.

ಅನಂತರ ಒಬ್ಬ ಚಿಕ್ಕ ಹುಡುಗ ದಿಟ್ಟಿಸಿ ನೋಡುತ್ತಿದ್ದುದನ್ನು ನೋಡಿದೆ. ಅವನನ್ನೂ ಅವನು ಗಮನಿಸಲಿಲ್ಲ.

ಅವನ ಮುಂದೆ ಬೆರಳೆಣಿಕೆಯಷ್ಟು ಮಂದಿ ಇದ್ದರು. ಅವನು ತನ್ನ ಕರವಸ್ತ್ರವನ್ನು ಹೊರಗೆ ತೆಗೆದು ಬೆವರನ್ನು ಒರೆಸಿಕೊಳ್ಳಲು ನೋಡಿದಾಗ ಚಿಕ್ಕ ಹುಡುಗ ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡ. ಆ ಹುಡುಗ ಜನಸಂದಣಿಯಿಂದ ಹೊರಗಿದ್ದರೂ ಸಹ ಈ ಮನುಷ್ಯನನ್ನೇ ದಿಟ್ಟಿಸಿ ನೋಡುತ್ತಿದ್ದ. ಏನೋ ಹೇಳುವಂತೆ ಅವನು ನೋಡುತ್ತಿದ್ದ. ಆದರೆ ಅವನ ಕುತೂಹಲಭರಿತ ಕಣ್ಣುಗಳು ಇವನಿಗೆ ಆತಂಕವನ್ನುಂಟುಮಾಡಿತು. ಕೂಡಲೇ ಇವನ ಸರದಿ ಬಂದಾಗ ಇವನು ತನ್ನ ಕಾಗದ ಪತ್ರಗಳನ್ನು ಸಮರ್ಪಿಸಿದ. ಐನೂರು ರೂಗಳನ್ನು ಕಿಟಕಿಯಲ್ಲಿದ್ದವನಿಗೆ ನೀಡಿದ. ಅವನು ಸರಿಯಾದ ಮೊತ್ತದ ಹಣವನ್ನು ನೀಡಬೇಕಿತ್ತು ಆದರೆ, ಅವನ ಬಳಿ ಸರಿಯಾದ ಮೊತ್ತವಿರಲಿಲ್ಲ. ಸರದಿಯಲ್ಲಿದ್ದವರು ತಮಗೆ ತಡವಾಗುತ್ತಿದೆಯೆಂದು ಗೊಣಗುತ್ತಿದ್ದರು.

ಅವನು ಅದರಿಂದ ಬೇಸರಗೊಂಡವನಾಗಿ ಏನು ಮಾಡಲೂ ತೋಚದವನಾಗಿದ್ದನು.

ಆಗ ಅದೇ ಹುಡುಗ ಇವರ ಪರವಾಗಿ ಹಣ ಪಾವತಿಸುತ್ತಿರುವುನ್ನು ಕಂಡ ಇವನು ಕೇಳುವುದಕ್ಕಿಂತ ಮುಂಚೆ ಆ ಹುಡುಗನೇ ಹೇಳಿದ – ನೀವು ಚಕಿತರಾಗಬೇಕಿಲ್ಲ. ಒಂದು ವರ್ಷದ ಹಿಂದೆ ನೀವು ಔಷಧಿಯ ಅಂಗಡಿಯಲ್ಲಿ ನೀಡಿದ ಹಣವನ್ನು ನಾನು ಹಿಂದಿರುಗಿಸುತ್ತಿರುವೆನಷ್ಟೆ. ಆಗ ನನ್ನ ಬಳಿ ಹಣವಿರಲಿಲ್ಲ. ನನ್ನ ತಾಯಿಗೆ ತುರ್ತಾಗಿ ಔಷಧಿ ಗಳು ಬೇಕಿತ್ತು.

ಆಗ ಇಬ್ಬರೂ ಒಬ್ಬರನ್ನೊಬ್ಬರು ನೋಡತೊಡಗಿದರು. ಅವರಿಬ್ಬರೂ ನಕ್ಕು ತಮ್ಮ ತಮ್ಮ ದಾರಿ ಹಿಡಿದರು.

ಕೆಲವು ಬಾರಿ ಸಮರ್ಪಣಾಭಾವ ಹಾಗೂ ಬದ್ಧತೆಯಿದ್ದರೂ ಸಹ ಕೆಲಸದಲ್ಲಿ ತಪ್ಪಾಗಬಹುದು. ಆಗ ಭಗವಂತ ನಮಗೆ ಒಳಿತನ್ನು ಮಾಡಿದನೆಂದು ತಿಳಿಯಬೇಕು. ಅದಕ್ಕೆ ಪೂರಕವಾಗಿ ಒಂದು ಕಥೆಯಿದೆ. ಅದು 1998. ಈ ಗ್ರಂಥ ಬರೆಯುತ್ತಿರುವವನು ಮೌರೀಶಿಯಸ್‌ನಲ್ಲಿ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದನು. ಆ ಹೊತ್ತಿಗೆ ಸರಿಯಾಗಿ ಸುಪ್ರಸಿದ್ಧನಾದ ಅಮಿತಾಬ್ ಬಚ್ಚನ್ ಚಿತ್ರ ನಿರ್ಮಾಣಕ್ಕಾಗಿ ಅಲ್ಲಿ ಬಂದಿದ್ದ.

ಸಮ್ಮೇಳನದ ಅಧಿಕಾರಿಗಳು ಅವನನ್ನು ಆಮಂತ್ರಿಸಲು ನಿಶ್ಚಯಿಸಿದರು. ಅದಕ್ಕೆ ನಾನು ಸಮ್ಮತಿಸಿದೆ. ತನ್ನ ಭಾಷಣದಲ್ಲಿ ತನ್ನ ಜೀವನದಲ್ಲಿ ನಡೆದ ಒಂದು ಘಟನೆಯನ್ನು ಅವನು ಉದ್ಧರಿಸಿದ. ತನ್ನ ತಂದೆ ಸುಪ್ರಸಿದ್ಧ ಹಿಂದೀ ಕವಿ ಹರಿವಂಶರಾಬಚ್ಚನ್‌ರ ಮಾತನ್ನು ಉದ್ಧರಿಸಿದ – ಯದಿ ಅಪನೇ ಮನ್ ಕೀ ಹೋತೋ ಅಚ್ಛಾ, ಯಾ ಅಪನೀ ಮನ್‌ಕೀ ನಭೀ ಹೋತೋ ಔರ್‌ಭೀ ಅಚ್ಛಾ – ನಾವು ಅಂದುಕೊಂಡಂತೆ ಏನಾದರೂ ನಡೆದರೆ ಒಳ್ಳೆಯದು. ಅಂದುಕೊಂಡ ಹಾಗೆ ಆಗದಿದ್ದರೆ ಮತ್ತೂ ಒಳ್ಳೆಯದು. ಒಂದು ದಿನ ತನ್ನ ಕುತೂಹಲತೆಯನ್ನು ತಡೆದುಕೊಳ್ಳಲಾರದೆ ನನ್ನ ತಂದೆಯನ್ನು ಕೇಳಿದ – ತಂದೆ ನಿಮ್ಮ ಹೇಳಿಕೆಯ ಪೂರ್ವಾರ್ಧವನ್ನೇನೋ ನಾನು ಅರ್ಥಮಾಡಿಕೊಳ್ಳಬಲ್ಲೆ ಆದರೆ ಉತ್ತರಾರ್ಧ ನನಗೆ ತಿಳಿಯುತ್ತಿಲ್ಲ. ಅದಕ್ಕೆ ತಂದೆ ಉತ್ತರಿಸಿದ – ಹಾಗಿದ್ದರೆ ಅದು ದೇವರ ಆಸೆ. ದೇವರು ಯಾರಿಗೂ ತೊಂದರೆ ಕೊಡುವುದಿಲ್ಲ. ಈ ಮಾತು ಚಿಕ್ಕವನಾಗಿದ್ದಾಗ ಓದಿದ ಒಂದು ಕಥೆಯನ್ನು ನೆನಪಿಗೆ ತಂದುಕೊಡುತ್ತದೆ. ಆ ಕಥೆ ಹೀಗಿದೆ :-

ಒಂದು ದಿನ ಒಬ್ಬ ಹುಡುಗ ಭಗವಂತ ಸ್ವರ್ಗದಲ್ಲಿ ಎಲ್ಲರಿಗೂ ಸೇಬನ್ನು ನೀಡುತ್ತಿದ್ದಂತೆ ಕಂಡ. ಅವನು ಅತ್ಯಂತ ಕುತೂಹಲತೆಯಿಂದ ಸ್ವರ್ಗಕ್ಕೆ ಹೋದ. ಅಲ್ಲಿದ್ದ ಸುದೀರ್ಘ ಸರಣಿಯಲ್ಲಿ ನಿಂತ. ಅವನ ಸರದಿ ಬಂದಾಗ ಎರಡು ಕೈಗಳಿಂದಲೂ ಆ ಉಡುಗೊರೆ ಸ್ವೀಕರಿಸಲು ಕೈಚಾಚಿದ. ಭಗವಂತ ಕೊಟ್ಟ ದೊಡ್ಡ ಸೇಬನ್ನು ಆ ಚಿಕ್ಕ ಕೈಗಳು ಹಿಡಿಯಲಾರದಾದವು. ಅದು ಕೆಳಗೆ ಜಾರಿ ಕೊಚ್ಚೆಗೆ ಬಿತ್ತು. ಅದಕ್ಕೆ ಆ ಮಗುವಿಗೆ ನಿರಾಸೆಯಾಯಿತು. ಆಗ ದೇವರ ಸಚಿವರು ಅವನಿಗೆ ಹೇಳಿದರು. ಮತ್ತೊಮ್ಮೆ ಅವನು ಸರದಿಯಲ್ಲಿ ಬಂದು ಸೇಬನ್ನು ಸ್ವೀಕರಿಸಬೇಕೆಂದು. ಬರಿಗೈಯ್ಯಲ್ಲಿ ಹಿಂದಿರುಗಲು ಇಷ್ಟವಿಲ್ಲದೆ ಆ ಮಗು ಮತ್ತೆ ಸರದಿಯಲ್ಲಿ ನಿಂತಿತು.

ಈ ಬಾರಿ ಸರದಿಯ ಸಾಲು ಹಿಂದಿಗಿಂತಲೂ ಉದ್ದವಾಗಿತ್ತು. ಆಗ ಅಲ್ಲಿದ್ದವರು ಸೇಬನ್ನು ಹಿಂದಿರುಗಿಸುತ್ತಿದ್ದುದನ್ನು ನೋಡಿದ. ಆಗ ತನಗೆ ಏಕೆ ಆ ಸೇಬು ದೊರೆಯಲಿಲ್ಲವೆಂದು ಯೋಚಿಸತೊಡಗಿದ.

ಅವನ ಸರದಿ ಬಂದಾಗ ಭಗವಂತ ಅವನಿಗೆ ಸೇಬನ್ನು ನೀಡಿ ಹೇಳಿದ – ನಿನಗೆ ಹಿಂದೆ ಕೊಟ್ಟಿದ್ದ ಸೇಬು ಕೊಳೆತಿತ್ತು. ಆದ್ದರಿಂದ ನಾನೇ ನಿನ್ನ ಕೈಯಿಂದ ಅದು ಜಾರಿಬೀಳುವಂತೆ ಮಾಡಿದೆ. ನಾನು ಜಿಗುಪ್ಸಿತನಾಗಿ ನಿನಗೆ ಒಳ್ಳೆಯ ಸೇಬನ್ನೇ ಕೊಡಲು ಬಯಸಿದೆ. ನೀನು ಸರದಿಯಲ್ಲಿ ನಿಂತಿದ್ದಾಗ ಆ ಸೇಬು ತೋಟದಲ್ಲಿ ಇನ್ನೂ ಬೆಳೆಯುತ್ತಿತ್ತು. ಈಗ ನಾನು ನಿನಗೆ ಕೊಟ್ಟಿರುವುದು ಅತ್ಯಂತ ಶ್ರೇಷ್ಠವಾದ ಸೇಬು. ಅದರಿಂದ ಸಂತುಷ್ಟಗೊಂಡ ಆ ಮಗು ಭಗವಂತನಿಗೆ ಕೃತಜ್ಞತೆ ಸಲ್ಲಿಸಿ ಭೂಮಿಗೆ ಹಿಂದಿರುಗಿತು.

ಅತ್ಯಂತ ಅನಪೇಕ್ಷಿತ ಹಾಗೂ ಅಪ್ರಿಯವಾದ ಸಂದರ್ಭಗಳಲ್ಲೂ ಕೆಲವು ಒಳ್ಳೆಯದು ಹುದುಗಿರಬಹುದು. ಮಾನವ ತನ್ನ ಸಂಕುಚಿತ ಬುದ್ಧಿಯಿಂದ ಅದನ್ನು ಅರ್ಥಮಾಡಿಕೊಳ್ಳದಿರಬಹುದು. ಒಳ್ಳೆಯದು ಸ್ವಲ್ಪಕಾಲದ ನಂತರ ಹೊರಬಂದು ಅವನನ್ನು

ದಾರುಣ ಸನ್ನಿವೇಶಗಳಿಂದ ಪಾರು ಮಾಡಬಹುದು. ಆಗ ಅವನು ಭಗವಂತನಿಗೆ ಮೊರೆ ಹೋಗುವನು ಮತ್ತು ಕೃತಜ್ಞನಾಗಿರುವನು.

ಅದೆಲ್ಲದಕ್ಕೂ ಅವನಿಗೆ ಕಾರಣವಿದೆ. ಖುರಾನ್ ಹೇಳುವಂತೆ – ಆ ಭಗವಂತನೇ ಈ ಭೂಮಿಯನ್ನು ಜೀವಿಗಳಿಗಾಗಿ ವಿಸ್ತರಿಸಿದ್ದಾನೆ. ಹೀಗಿರುವಾಗ ಭಗವಂತನ ಯಾವ ಸಹಾಯವನ್ನು ತಾನೇ ನೀನು ಅಲ್ಲಗೆಳೆಯುವೆ? ಅವನು ನಮಗೆ ಎಲ್ಲವನ್ನೂ ನೀಡಿದ್ದಾನೆ ಯುಕ್ತಾಯುಕ್ತವಾದ ವಿವೇಕದೊಂದಿಗೆ.

ನಮಗೆಲ್ಲರಿಗೂ ಸಂತೋಷದಿಂದ ಕೂಡಿದ ಸಮಾಧಾನಕರವಾದ ಜೀವನ ಸಾಗಿಸಬೇಕೆಂದು ಇಚ್ಛೆಯಿದೆ. ರೋಂಡಾಬೈರ್ನ್ ತನ್ನ ಕೃತಿಯಾದ "ದಿ ಮ್ಯಾಜಿಕ್"ನಲ್ಲಿ ತಿಳಿಸಿರುವಂತೆ ಮೊದಲನೆಯ ಹಂತವೆಂದರೆ ನಮ್ಮಲ್ಲಿರುವ ನಕಾರಾತ್ಮಕವಾದ ಭಾವನೆಗಳನ್ನು ತೆಗೆದುಹಾಕಿ ನಮಗೆ ದೊರೆತಿರುವ ಜೀವನಕ್ಕೆ ಧನ್ಯತಾಭಾವವನ್ನರ್ಪಿಸುವುದು. ಅವಳ ಪ್ರಕಾರ ನಾವು ದಿನನಿತ್ಯ ಹತ್ತು ವಿಷಯಗಳನ್ನಾದರೂ ನೋಡಬೇಕು ಸಂತಸದಿಂದ ಹಾಗೂ ಕೃತಕೃತ್ಯತೆಯಿಂದಿರಲು.

ಸಾಮಾನ್ಯವಾಗಿ ಕೃತಜ್ಞತಾ ಭಾವವಿಲ್ಲದಿರುವಾಗಲೇ ನಕಾರಾತ್ಮಕ ಆಲೋಚನೆಗಳು ಜಾಗೃತವಾಗುತ್ತದೆ. ಅದು ನಮ್ಮ ಜೀವನದಲ್ಲಿ ನಡೆಯುವ ಇಂದ್ರಜಾಲದ ಮೇಲೆ ಪರಿಣಾಮವೆಸಗುತ್ತದೆ. ನಾವು ವಿಷಯಗಳನ್ನು ಸ್ವೀಕರಿಸುತ್ತೇವೆ. ಅದರಿಂದಲೇ ನಕಾರಾತ್ಮಕ ಭಾವನೆಗಳು ತಲೆದೋರುತ್ತದೆ. ಯಾವಾಗಲೂ ಇನ್ನೊಂದರ ಮೇಲೆ ಆಕ್ಷೇಪಿಸುತ್ತಿದ್ದರೆ ಅವರು ಧನ್ಯತಾಭಾವದಿಂದಿರಲು ಹೇಗೆ ಸಾಧ್ಯ? ಧನ್ಯತಾಭಾವವಿರುವಾಗ ಸಕಾರಾತ್ಮಕವಾದ ಭಾವನೆಯಿರುವುದರಿಂದ ನಾವು ಸಂತಸದಿಂದಿರುವಾಗ ನಕಾರಾತ್ಮಕವಾದ ಭಾವನೆಗಳು ದೂರವೇ ಉಳಿಯುತ್ತದೆ.

ಬುದ್ಧ ಹೇಳಿದ್ದ – ನಾವು ಏಳೋಣ, ಧನ್ಯತಾಭಾವದಿಂದಿರೋಣ ..... ನಾವು ಅನಾರೋಗ್ಯ ಹೊಂದಿದೆವು ಆದರೆ ಸಾಯಲಿಲ್ಲ. ಕೆಲವರು ಯಾವಾಗಲೂ ತಮಗೆ ಬಡಿಸಿದ ಅನ್ನದ ಬಗ್ಗೆ ಗೊಣಗುತ್ತಿರುವರು. ಅವರಿಗೆ ಬೇಕಾದ ತರಕಾರಿ ಇಲ್ಲ ಅಥವಾ ಅವರಿಗೆ ಬೇಕಾದ ಪ್ರಮಾಣದಲ್ಲಿ ಬೇಯಿಸಿಲ್ಲ ಅಥವಾ ಅವರಿಗೆ ಬೇಕಾದ ಹಾಗೆ ಬಡಿಸಿಲ್ಲ. ಅದರ ಸಾಮಾಗ್ರಿಗಳ ಬಗ್ಗೆಯು ಅವರು ತಪ್ಪು ಕಂಡುಹಿಡಿಯುತ್ತಾರೆ. ಅಂತಹವರನ್ನೇ ಮನಸ್ಸಿನಲ್ಲಿಟ್ಟುಕೊಂಡು ನಮ್ಮ ಆರ್ಷೇಯ ಗ್ರಂಥಗಳು ಹೇಳಿವೆ – ಅನ್ನಂ ನ ನಿಂದ್ಯಾತ್ – ಅನ್ನವನ್ನು ಬಯ್ಯಬಾರದು – ಅನ್ನಂ ಬಹುಕುರ್ವೀತ – ಅನ್ನಕ್ಕೆ ಮರ್ಯಾದೆಕೊಡಿ. ಅನೇಕರು ಊಟವಿಲ್ಲದಿರುವಾಗ ನಮಗೆ ಊಟವಿದೆಯೆಂದು ತೃಪ್ತಿಯಿರಬೇಕು. ಕೇವಲ ಆಧ್ಯಾತ್ಮ ದೃಷ್ಟಿಕೋನದಿಂದ ಮಾತ್ರವಲ್ಲದೆ, ವೈಜ್ಞಾನಿಕ ದೃಷ್ಟಿಯಿಂದಲೂ ನಾವು ಕೃತಜ್ಞರಾಗಿರಬೇಕು. ನಾವು ನಮ್ಮ ಆಶೀರ್ವಾದವನ್ನು ಎಣಿಸಿದಾಗ ನಮ್ಮ ಮನಸ್ಸು ಗುರುತರ ಸ್ಥಿತಿಯನ್ನು ಹೊಂದುತ್ತದೆ ಮತ್ತು ಸಕಾರಾತ್ಮಕವಾಗುತ್ತದೆ. ಆಗ ನಾವು ನಮ್ಮನ್ನು ಕೇಂದ್ರೀಕರಿಸಿಕೊಂಡು ನಾವು ಎಷ್ಟು ಧನ್ಯರೆಂದು ಭಾವಿಸಲಾರಂಭಿಸುತ್ತೇವೆ.

ಧನ್ಯತಾಭಾವದಿಂದ ಜೀವನ ಸಾಗಿಸಿದರೆ ಈ ಬಾಳು ಎಷ್ಟು ಸುಂದರ ಸಾರ್ಥಕ ಎಂದು ನಮಗೇ ಮನವರಿಕೆಯಾಗುತ್ತದೆ. ಈ ಸನ್ನಿವೇಶ ನಿಮ್ಮನ್ನು ಧನ್ಯತಾಭಾವದತ್ತ ಕರೆದೊಯ್ಯದಿದ್ದರೆ ಆಗ ಯಾವ ಸಂದರ್ಭದಲ್ಲಿ ಯಾವ ಸಮಯದಲ್ಲಿ ಅರಿತುಕೊಳ್ಳಬೇಕಾದದ್ದು ವಿವೇಕವೆಂಬ ಮುತ್ತೇ.

''ನೀವು ಎಲ್ಲದರ ಬಗ್ಗೆಯೂ ನಿಕೃಷ್ಟತೆಯಿಂದ ಕೂಡಿದ್ದರೆ ನಿಮಗೆ ಬೇಕಾದ ವಸ್ತುಗಳು ಸಿಗಲಿಲ್ಲವೆಂದು ನಿಮಗೆ ಬೇಕಾದ ಎಲ್ಲಾ ವಸ್ತುಗಳನ್ನೂ ನಿಮಗೆ ದೊರೆಯದರ ಬಗ್ಗೆಯೂ ಯೋಚಿಸಿ.

ಒಳ್ಳೆಯದನ್ನು ಯಾರಿಂದಲಾದರೂ ಪಡೆದಿದ್ದರೆ ಅದನ್ನು ಹಿಂದಿರುಗಿಸಬೇಕೆಂಬುದೇ ಧರ್ಮ - ಕೃತೇ ಚ ಪ್ರತಿಕರ್ತವ್ಯಮೇಷ ಧರ್ಮಃ ಸನಾತನಃ. ಈ ನಿಯಮವನ್ನು ಯಾವಾಗಲೂ ಪಾಲಿಸಬೇಕು. ಒಳ್ಳೆಯದನ್ನು ಹಿಂದಿರುಗಿಸುವ ಪರಿಸ್ಥಿತಿಯಲ್ಲಿಲ್ಲದಿದ್ದರೂ ಸಹ ಒಂದು ಮಾತಿನಿಂದ ಧನ್ಯತಾಭಾವವನ್ನು ಹೇಳುವುದು ಸಾಕು. ಅದನ್ನೂ ತಿಳಿಸದೆ ಸ್ವಾರ್ಥಿಗಳಾದರೆ ಅವರಿಗೆ ಅತ್ಯಂತ ನೋವುಂಟು ಮಾಡಿದಂತೆ. ಆಗ ಇವನ ಬಗ್ಗೆ ಅವನಿಗೆ ಯಾವ ಒಳ್ಳೆಯ ಭಾವನೆಯೂ ಉಳಿಯುವುದಿಲ್ಲ. ಧನ್ಯತಾಭಾವದಿಂದ ಎರಡನ್ನು ಪಡೆದಂತಾಗುತ್ತದೆ. ಮೊದಲನೆಯದು ಅವನ ಸಂತೋಷ. ಎರಡನೆಯದು ಮತ್ತೂ ಹೆಚ್ಚು ಸಹಾಯ ಮಾಡುವಂತೆ ಪ್ರೇರೇಪಣೆ. ತನ್ನ ಮಾನಸಿಕವಾದ ಸಾಲದಿಂದ ಮುಕ್ತನಾಗಲು ಅವನು ನೀಡುವ ಸತ್ಸಂದೇಶವೇ ಆಗಿರಬಹುದು. ಅದರಿಂದ ದಾರುಣ ಸ್ಥಿತಿಯಿಂದ ಪಾರಾಗಲು ಸಾಧ್ಯವಾಗುತ್ತದೆ.

ಈ ವಿಷಯದಲ್ಲಿ ಈ ಕೃತಿಯ ಕರ್ತೃ ತನ್ನ ವಯಕ್ತಿಕ ದಿನಚರಿ ಪುಸ್ತಕದಿಂದ ಕೆಲವು ಸಾಲುಗಳನ್ನು ಉದ್ಧರಿಸಲು ಇಷ್ಟಪಡುತ್ತಾನೆ. 1969ರಲ್ಲಿ ವಾರಣಾಸಿಯ ಪ್ರಾಚ್ಯವಿದ್ಯಾ ಸಂಶೋಧನಾಲಯದ ವಿಭಾಗದಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಹುದ್ದೆಗೆ ಅರ್ಜಿ ಸಲ್ಲಿಸಿದ್ದಾಗ ಆ ಸ್ಥಾನ ಲಭಿಸಿತ್ತು. ಆಗ ಅವರ ಸ್ಥಾನ ದಿಲ್ಲೀ ವಿಶ್ವವಿದ್ಯಾಲಯದಲ್ಲಿ ಪ್ರವಾಚಕರದಾಗಿತ್ತು. ಆದರೆ ಪ್ರಾಧ್ಯಾಪಕ ಹುದ್ದೆಯೂ ರಿಕ್ತವಾಗಿತ್ತು. ದಿಲ್ಲಿಯಲ್ಲಿ ಮುಂದುವರಿಯಬೇಕೆಂದೂ ವಾರಣಾಸಿಗೆ ಹೋಗುವುದು ಬೇಡವೆಂದೂ ಇದ್ದರೆ ದಿಲ್ಲಿಯಲ್ಲಿ ಸಮಯವಾಗುತ್ತಿತ್ತು. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಿಂದ ಸ್ವಲ್ಪ ಸಮಯ ಬೇಡಿದರು. ಆ ಹುದ್ದೆಯ ಅವಕಾಶ ಬಿಡಲು ಇಷ್ಟವಿರಲಿಲ್ಲ. ಆರು ತಿಂಗಳೊಳಗಾಗಿ ಸೇರಿಕೊಳ್ಳುವಂತೆ ವಿಶ್ವವಿದ್ಯಾಲಯ ಸಮ್ಮತಿಸಿತು. ಅಷ್ಟು ಹೊತ್ತಿಗೆ ದಿಲ್ಲಿ ವಿಶ್ವವಿದ್ಯಾನಿಲಯದ ಸಂದರ್ಶನದ ಮಾತೇ ಇರಲಿಲ್ಲ. ಮತ್ತು ಕಾಲಾವಕಾಶ ನೀಡಬೇಕೆಂದು ಕೇಳಿದಾಗ ಅದಕ್ಕೂ ಬನಾರಸ್ ವಿಶ್ವ ವಿದ್ಯಾಲಯ ಸಮ್ಮತಿಸಿತು. ಒಂದು ದಿನ ತಂದೆಯವರು ತಾನು ಬನಾರಸ್‌ಗೆ ಬರುವುದಿಲ್ಲವೆಂದು ಬರೆ ಎಂದರು. ಅವರ ಪ್ರಕಾರ ವಿಶ್ವವಿದ್ಯಾನಿಲಯವನ್ನು ಕಾಯಿಸುವುದು ಅನಿಶ್ಚಿತವಾಗಿ ಯುಕ್ತವಲ್ಲದ್ದಾಗಿತ್ತು. ಅದರಂತೆಯೇ ತಾನು ಆ ಹುದ್ದೆಗೆ ಬರುವುದಿಲ್ಲವೆಂದೂ ಬರೆದು ಹಾಕಿದರು. ವಿಶ್ವವಿದ್ಯಾಲಯ ಕೆಲಸ ಮುಗಿಸಿ ಇನ್ನೇನು ಆ ಕಾಗದವನ್ನು ಅಂಚೆಯಲ್ಲಿ ಕಳಿಸಬೇಕಿತ್ತು. ಆಗ ಅವರು ತಮ್ಮ

ಕೊಠಡಿಯಲ್ಲಿ ಕುಳಿತಿದ್ದಾಗ ಬೌದ್ಧ ದರ್ಶನದ ಪ್ರಾಧ್ಯಾಪಕರಾದ ವಿ.ಜಿನಾನಂದರು ಬಂದು ಮತ್ತೆ ಕಾಲಾವಕಾಶ ಕೇಳುವಂತೆ ಹೇಳಿದರು. ಆಗ ಆ ಪತ್ರಹರಿದುಹಾಕಿ ಮತ್ತೂ ಸಹ ಸಮಯನೀಡಬೇಕೆಂದು ಕೇಳಿದರು. ಅದಕ್ಕೂ ಬನಾರಸ್ ವಿಶ್ವವಿದ್ಯಾನಿಲಯದ ಒಪ್ಪಿಗೆ ನೀಡಿತು. ಆಗ ದಿಲ್ಲಿ ವಿಶ್ವವಿದ್ಯಾನಿಲಯದ ಸಂದರ್ಶನವಾಗಿ ಅವರು ಅದರಲ್ಲಿ ನಿಯುಕ್ತರಾದರು. ಜಿನಾನಂದರ ಮಾತು ಅವರಿಗೆ ಮಾನಸಿಕವಾಗಿ ಬೆಂಬಲ ನೀಡಿತು. ದಿಲ್ಲಿ ವಿಶ್ವವಿದ್ಯಾನಿಲಯದ ಸಂರ್ದನಕ್ಕೆ ಬಂದಾಗ ನಾವು ಆ ಹುದ್ದೆಗೆ ನಿಯುಕ್ತರಾಗದಿದ್ದರೂ ತಮ್ಮ ಪ್ರಾಧ್ಯಾಪಕ ಪಟ್ಟ ತಮ್ಮದಾಗಿದೆಯೆಂಬ ಭರವಸೆಯಿತ್ತು. ಒಂದು ವೇಳೆ ನಾನು ಬನಾರಸ್ ವಿಶ್ವವಿದ್ಯಾನಿಲಯದ ಹುದ್ದೆಯನ್ನು ತ್ಯಜಿಸಿ ದಿಲ್ಲಿಯಲ್ಲೂ ಸ್ಥಾನ ಸಿಗದಿದ್ದರೆ ಏನಾಗುತ್ತಿತ್ತು? ನಾನು ಎಂದೆಂದೂ ಪ್ರೊ.ಜಿನಾನಂದರಿಗೆ ಕೃತಜ್ಞನಾಗಿರುವೆ.

ಡಾ.ಸೀತಾರಾಮ ಶಾಸ್ತ್ರೀ ಈ ಗ್ರಂಥಕರ್ತರ ಮಿತ್ರ ಹೇಳಿರುವ ತಮ್ಮ ತಂದೆ ಹೇಳುತ್ತಿದ್ದಂತೆ ಯಾರಾದರೂ ತಮ್ಮ ಗುರಿಮುಟ್ಟಲು ಸರಿಯಾದ ಮಾರ್ಗ ತೋರಿಸಿದರೆ ಅವರಿಂದ ಮಾರ್ಗದರ್ಶನ ಸ್ವೀಕರಿಸಿದವರು ಕೃತಜ್ಞರಾಗಿರಬೇಕು ಎಂದು.

ಭಾರತೀಯ ಪರಂಪರೆ ಕೇವಲ ಕೃತಜ್ಞತಾಭಾವದಿಂದ ನಿಲ್ಲುವುದಿಲ್ಲ ಅಥವಾ ಕೈಲಾದ ಮಟ್ಟಕ್ಕೆ ಆ ಕೃತಜ್ಞತೆಯನ್ನು ಹಿಂದಿರುಗಿಸುವುದೂ ಅಲ್ಲ. ಅದನ್ನು ಅನೇಕ ಪಟ್ಟು ಹಿಂದಿರುಗಿಸಬೇಕು. ಮಹಾಭಾರತ ನಿರೂಪಿಸುವಂತೆ – ಯಾವಚ್ಚ ಕುರ್ಯಾದ್ ಅನ್ಯೋಽಸ್ಯ ಕುರ್ಯಾದ್ ಅಭಯಾದಿಕಂ ತತಃ, ಕೃತಂ ಶತಗುಣಂ ಕುರ್ಯಾತ್, ಇಚ್ಛಂತಿ ಬಹುಲಂಸಂತಃ ಪ್ರತಿಕರ್ತುಂ ಮಹತ್ ಪ್ರಿಯಂ [13]. ಯಾರಾದರೂ ಒಂದು ಮರದ ಕೆಳಗೆ ತಣ್ಣನೆಯ ನೆರಳನ್ನು ಪಡೆದಿದ್ದರೆ ಅದರ ಒಂದು ಎಲೆಯನ್ನೂ ಸಹ ಪ್ರಯತ್ನ ಪುರ್ವಕವಾಗಿ ಕೀಳಬಾರದು ಹಿಂದೆ ಅದರಿಂದ ಪಡೆದ ನೆರಳಿನ ನೆರವನ್ನು ಸ್ಮರಿಸಿಕೊಂಡು ಎಂದು ಹೇಳುತ್ತದೆ.

ಯಸ್ಯಚಾದ್ರ್ರಸ್ಯ ವೃಕ್ಷಸ್ಯ ಶೀತಚ್ಛಾಯಾಂಸಮಾಶ್ರಯೇತ್ ।
ಸ ಸತ್ಯ ಪರ್ಣಂ ದ್ರುಹ್ಯೇತ ಪೂರ್ವವೃತ್ತ ಮನುಸ್ಮರನ್ ॥ [14]

ಆಕರಗ್ರಂಥಗಳು

1) ಉದ್ಯೋಗಪರ್ವನ್.33.87 2) ಅದೇ.22.88. 3) ಪದ್ಮಪುರಾಣ.39.118 4) ಚಾಣಕ್ಯಸೂತ್ರಾಣಿ-401 5) ರಾಮಾಯಣ.4.27.45 6) ಅದೇ.4.34.10 7) ಅದೇ.4.34.12 8) 6.29.13 9) ಶಾಂತಿಪರ್ವನ್.173.20 10) ಅದೇ.172.24 11) ಅದೇ.140.20 12) ಪದ್ಮಪುರಾಣ.53.103. 13) ಉದ್ಯೋಗಪರ್ವನ್.60.7. 14) ವಿರಾಟಪರ್ವನ್.16.19.

# 12. ಅಕ್ರೋಧ-ಕೋಪಗೊಳ್ಳದಿರುವುದು

ಕೋಪವನ್ನು ''ವಿಕ್ಷಿಪ್ತಚಿತ್ತತಾ'' ಎಂದು ನಿರೂಪಿಸಲಾಗಿದೆ. ಮಾನಸಿಕ ಗೊಂದಲ. ಪತಂಜಲಿ ತನ್ನ ಮಹಾಭಾಷ್ಯದಲ್ಲಿ ಅದರ ವಿವರಣೆ ಈ ರೀತಿ ನೀಡುತ್ತಾನೆ - ಕಣ್ಣು ಕೆಂಪಾಗುವುದು, ಕೋಪವು ಅಂತರಿಕ ಸಂಗತಿ. ಕೋಪ ಅಂತರೋ ಧರ್ಮಃ ಕ್ರೋಧಃ ಚಕ್ಷುರಾಗಾದಿನಾಪರಿದೃಶ್ಯೋ ಬಾಹ್ಯಃ. ಅನಂತರ ಹೊರಗಿನ ನೋಟಕ್ಕೆ ಪರ್ಯಾಯ ಪದಗಳಂತಿರುವ ವರ್ಣನೆ ನೀಡುತ್ತಾನೆ. ನಹ್ಯಕುಪಿತಃ ಕ್ರುಧ್ಯತಿ. ಕೋಪವಿಲ್ಲದೆ ಕ್ರೋಧವುಂಟಾಗುವುದಿಲ್ಲ. ಕ್ರೋಧವು ಕ್ಷಣಿಕ, ಕೋಪವು ನಿರಂತರ. ಅದೇ ಅವೆರಡನ್ನೂ ಬೇರ್ಪಡಿಸುವುದು.

ಕ್ರೋಧ-ಮಾನಸಿಕ ಗೊಂದಲವೇ ಎಲ್ಲಾ ಕಷ್ಟಗಳಿಗೂ ಆದಿಕಾರಣ. ಧಾರ್ಮಿಕ ಗ್ರಂಥಗಳು ಒಂದಾದರ ಮೇಲೊಂದು ಅದರ ನಿಗ್ರಹಕ್ಕೆ ಒತ್ತು ನೀಡಿದೆ. ಅದರ ಮೊದಲ ಪರಿಣಾಮವೆಂದರೆ ಯುಕ್ತಾಯುಕ್ತ ವಿವೇಚನೆ ನಷ್ಟವಾಗುತ್ತದೆ. ಅದರ ಪ್ರಭಾವಕ್ಕೆ ಒಳಗಾಗಿ ತಮ್ಮಷ್ಟಕ್ಕೆ ತಾವೇ ನಂತರ ಜುಗುಪ್ಸೆಗೊಳಗಾಗುವಂತೆ ಮಾಡುತ್ತದೆ. ಅದನ್ನು ಸರಿಯಾಗಿಯೇ ನಿರೂಪಿಸಲಾಗಿದೆ.

ಕ್ರುದ್ಧಃ ಪಾಪಂನ ಕುರ್ಯಾತ್ ಕ್ರುದ್ಧೋ ಹನ್ಯಾದ್ ಗುರೂನಪಿ
ಕ್ರುದ್ಧಃ ಪರುಷಯಾನಾಚಾ ನರಃ ಸಾಧೂನಧಿಕ್ಷಿಪೇತ್
ವಾಚ್ಯಾವಾಚ್ಯಂ ಪ್ರಕುಪಿತೋ ನ ವಿಜಾನಾತಿ ಕರ್ಹಿಚಿತ್
ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ಕ್ವಚಿತ್ ॥[1]

ಯಾವ ಪಾಪವನ್ನು ತಾನೇ ಕೋಪಿಷ್ಠನು ಮಾಡುವುದಿಲ್ಲ? ಅವನು ಹಿರಿಯರನ್ನೂ ಕೊಲ್ಲಬಹುದು, ಸತ್ಪುರುಷರನ್ನೂ ಕೆಟ್ಟ ಮಾತುಗಳಿಂದ ಸಂಬೋಧಿಸಬಹುದು.

ಕೋಪದಿಂದ ಕೂಡಿದ ಮಾನವ ಯಾವುದು ನುಡಿಯಬೇಕು ಯಾವುದು ನುಡಿಯಬಾರದೆಂದೂ ತಿಳಿಯುವುದಿಲ್ಲ. ಅವನು ಎಂತಹ ನೀಚಕಾರ್ಯವನ್ನಾದರೂ ಮಾಡಬಹುದು. ಅವನು ಯಾರ ಮಾತನ್ನೂ ಕೇಳುವುದಿಲ್ಲ.

ಕೋಪಾಕ್ರಾಂತವಾದ ಮನಸ್ಸುಳ್ಳವರು ಏನು ಮಾಡಬೇಕು ಏನು ಮಾಡಬಾರದೆಂಬುದನ್ನೂ ಅರಿಯುವುದಿಲ್ಲ - ನಹಿ ಕೋಪ ಕಲುಷಿತ ಮತಿಃ ಕರ್ತವ್ಯಂ ಅಕರ್ತವ್ಯಂ ವಾ ವಿಮೃಶತಿ[2]. ಬಬೂಲಾಮರವು ಬೆಂಕಿಗೀಡಾದಂತೆ ಅವನು ವರ್ತಿಸುತ್ತಾನೆ - ಜ್ವಲದ್ ಬಬೂಲಾವದ್‌ಭಾತಿ ಕಾಯಃ ಪ್ರಾಯೋ ಟೀಕೋಪಿನಃ[3]. ಕೋಪವು ಮಾನಸಿಕವಾಗಿ ದುಃಖ ಉಂಟುಮಾಡುತ್ತದೆ. ಅದು ವಿಶ್ವವನ್ನೇ ನಾಶ ಮಾಡುತ್ತದೆ. ಅದು ಧರ್ಮವನ್ನು ಬುಡಮೇಲು ಮಾಡುತ್ತದೆ. ಆದ್ದರಿಂದ ಅದನ್ನು ತಡೆಯಬೇಕು.

ಕ್ರೋಧಮೂಲೋ ಮನಸ್ತಾಪಃ ಕ್ರೋಧಃ ಸಂಸಾರ ಸಾಧನಂ ।
ಧರ್ಮಕ್ಷಯಕರಃ ಕ್ರೋಧಃ ತಸ್ಮಾತ್‌ತಂ ಪರಿವರ್ಜಯೇತ್ ॥[4]

ಕೋಪವು ದೇಹ, ಮನಸ್ಸು ಎರಡಕ್ಕೂ ತೊಂದರೆಯುಂಟುಮಾಡುತ್ತದೆ. ಅದೇ ವೈಮನಸ್ಯಕ್ಕೆ ಕಾರಣ, ಅದೇ ಇಳಿಮುಖಕ್ಕೆ ಮೆಟ್ಟಲು. ಅದೇ ಶಾಂತಿಗೆ ಅಡಚಣೆ.

ತತ್ರೋಪತಾಪಕಃ ಕ್ರೋಧಃ ಕ್ರೋಧೋ ವೈರಸ್ಯ ಕಾರಣಮ್ ।
ದುರ್ಗತೇಃ ವರ್ತನೀ ಕ್ರೋಧಃ ಕ್ರೋಧಃಶಮಸುಖಾರ್ಗಲಾ ॥[5]

ಕೋಪವು ಯಾರ ಮೇಲೆ ಮಾಡಲ್ಪಟ್ಟಿರುವುದೋ ಅವರನ್ನು ನಾಶಮಾಡಬಹುದು ಯಾರಿಗೆ ಅವರ ಮೇಲೆ ಹಿಡಿತವಿಲ್ಲವೋ ಅವರನ್ನೂ ಸಹ ಕೋಪ ನಾಶ ಮಾಡುತ್ತದೆ :- ಆತ್ಮಾನಮೇವ ನಾಶಯತಿ ಅನಾತ್ಮವತಾಂ ಕೋಪಃ.

ಕೇವಲ ವಿವೇಕ ಮಾತ್ರ ಕೋಪವನ್ನು ಹಿಡಿತದಲ್ಲಿಟ್ಟುಕೊಳ್ಳಬಹುದು. ಒಂದು ವೇಳೆ ಅವನು ಕೋಪಕ್ಕೆ ವಶವಾದರೆ, ನಮ್ಮ ಹಿಡಿತದಲ್ಲಿಲ್ಲದ ಕುದುರೆ ಮನಬಂದಂತೆ ಓಡುವಂತೆ ಅವನು ಯಾವಾಗಬೇಕಾದರೂ ಕುದುರೆಯಿಂದ ಕೆಳಗೆ ಬೀಳಬಹುದು.

ಬುದ್ಧಿವಲ್ಗಂತಮುತ್ಸೃಜ್ಯ ಕ್ರೋಧದುರ್ವಾಜಿಗೋಹಿಯಃ ।
ಅಧಾವತೇ ಪತನಂ ಯಸ್ಯ ಸುಲಭಂ ಸ್ಯಾತ್ ಪದೇ ಪದೇ ॥[7]

ಮೋಕ್ಷಕ್ಕೆ ಕಾರಣವಾದ ತಪಸ್ಸನ್ನು ಅಭ್ಯಾಸ ಮಾಡುತ್ತಿರಬಹುದು. ಒಂದು ವೇಳೆ ಅವನು ಕೋಪಕ್ಕೆ ತುತ್ತಾದರೆ ಒಂದು ನಿಮಿಷದಲ್ಲಿ ಅವನ ತಪಸ್ಸು ಭಂಗವಾಗುತ್ತದೆ. ಆದರಿಂದ ಅವನ ಉದ್ದಿಷ್ಟ ಫಲ ದೊರೆಯುವುದಿಲ್ಲ ಅದು ಚತುರ್ವಿಧ ಪುರುಷಾರ್ಥಗಳಿಗೆ ವೈರಿಯಾಗಿದ್ದು ತನ್ನನ್ನೂ ಬೇರೆಯವರನ್ನೂ ನಾಶಮಾಡುತ್ತದೆ.

ಮೋಕ್ಷಸಾಧನಮಪ್ಯೇಷ ತಪೋ ದೂಷಯತಿ ಕ್ಷಣಾತ್ ।
ಚತುರ್ವರ್ಗರಿಪುಃ ಕ್ರೋಧಃ ಕ್ರೋಧಃ ಸ್ವಪರತಿನಾಶಕಃ ॥ [8]

ಕೋಪವನ್ನು ನಿಯಂತ್ರಿಸುವುದು ಅತ್ಯಂತ ಕಷ್ಟಕರವಾದುದು. ಚೈತನ್ಯ ಚಂದ್ರೋದಯ ಅದನ್ನು ಸುಂದರವಾಗಿ ನಿರೂಪಿಸುತ್ತದೆ. ಯಾರು ಕಠಿಣದಲ್ಲಿ ಕಠೋರವಾದ ತಪಗೈದು ತಮ್ಮ ಆಸೆಗಳನ್ನು ನಿಯಂತ್ರಿಸಿ, ತಮ್ಮ ಇಂದ್ರಿಯಗಳ ಮೇಲೆ ಹತೋಟಿಯಿರುವವರಾಗಿ, ಮನಸ್ಸನ್ನು ಸಮಾಧಾನವಾಗಿಟ್ಟುಕೊಂಡು, ಧ್ಯಾನಮಾಡುತ್ತಾ, ಅಂತರ್ಯಾಮಿಯನ್ನು ನೆನೆಯುತ್ತಾ ಎಲ್ಲಾ ಲೌಕಿಕ ಸಂಪತ್ತನ್ನೂ ಉಳ್ಳವರಾಗಿ, ಆಹಾರದ ಬಗ್ಗೆ ನಿರಾಸಕ್ತರಾಗಿದ್ದು ಮನ್ಮಥನನ್ನು ಗೆದ್ದು ಇದ್ದವರೋ ಕೋಪವನ್ನು ಗೆಲ್ಲಲಿಲ್ಲವೆಂದ ಮೇಲೆ ಸಾಮಾನ್ಯರ ಪಾಡೇನು ।

ಉಗ್ರೈರುಗ್ರೈಃ ತಪೋಭಿಃ ಶಮದಮನಿಯಮೈರ್ಧಾರಣಧ್ಯಾನಯೋಗೈಃ
ಯುಕ್ತಶ್ಚಾಪರ ಮೇಪ್ಸ್ಯ ತ್ರಿಭುವನವಿಭವೇ ಭರ್ದಿತಾನ್ನಾವ ಬೋಧಃ ।
ಕಂದರ್ಪಾದೀನಮಿತ್ರಾನಪಿ ಸಹಜತಯಾ ದುರ್ಜಯಾನೇವಜಿತ್ವಾ
ಯೋನ ಸ್ವಪ್ನಾನಿಪೇಯುಃ ಕಥಯ ಕಥಮಸೌ ಕೇನಕೋಪೋ ವಿಜೇಯಃ ॥[9]

ಕೋಪ ಎಂಬುದು ಕಾಮ ಎಂಬ ಕ್ರೂರಗ್ರಹದ ಕಾರ್ಯ. ಅದು ಮದ್ಯದಂತೆ ಮತ್ತೇರಿಸುವುದು. ಅದು ಧೈರ್ಯವನ್ನು ಕೆಡಿಸುವುದು. ಮನಸ್ಸನ್ನು ಹಾಳು ಮಾಡುವುದು.

ಮಾನವರಿಗೆ ತನ್ನ ತನವೇ ಹಾಳಾಗುತ್ತದೆ. ದೇಹದ ಹತೋಟಿ ತಪ್ಪುತ್ತದೆ. ಕೋಪ ಧರ್ಮವನ್ನು ನಾಶ ಮಾಡುತ್ತದೆ. ಅದರ ದಾಸನಾಗಿ ಆಡಬಾರದ ಮಾತನ್ನಾಡುತ್ತಾನೆ (ಆದರ್ಶಚರಿತ) ಕೋಪದಿಂದ ಮನಸ್ಸು ಯಾವುದು ಮಾಡಬೇಕು, ಯಾವುದನ್ನು ಮಾಡಬಾರದು ಎಂಬ ವಿವೇಕ ನಾಶವಾಗುತ್ತದೆ – ನಹಿಕೋಪ ಕಲುಷಿತಾ ವಿಮೃಶತಿ ಮತಿಃ ಕರ್ತವ್ಯಂ ಅಕರ್ತವ್ಯಂ ವಾ[10].

ಬೇರೆಯವರಿಂದ ಉತ್ತೇಜಿತರಾದಾಗಲೂ ಕೋಪ ಮಾಡಿಕೊಳ್ಳಬಾರದು. ಯಾರು ಉತ್ತೇಜಿತರಾಗುವುದಿಲ್ಲವೋ ಅವರನ್ನೂ ಅವರಲ್ಲಿರುವ ಸದ್ಗುಣವನ್ನೂ ಈ ಕೋಪ ದೋಚುತ್ತದೆ.

ಅಕೃಷ್ಯಮಾಣೋನಾಕ್ರೋಶೇಃ ಮನ್ಯುರೇವ ತಿತಿಕ್ಷತಃ ।
ಅಕ್ರೋಷ್ಟಾರಂ ನಿರ್ವಹತಿ ಸುಕೃತಂ ಚಾಸ್ಯ ವಿಂದತಿ ॥[11]

ಯಾರು ತಪ್ಪದೆ ಪ್ರತಿತಿಂಗಳೂ ಯಾಗವನ್ನು ಮಾಡುವರೋ ನೂರು ವರ್ಷಗಳವರೆಗೆ ಅವರಿಗಿಂತಲೂ ಯಾರ ಮೇಲೂ ಕೋಪಮಾಡಿಕೊಳ್ಳದವರೇ ಶ್ರೇಷ್ಠ :–

ಯೋ ಯಜೇದ್ ಅಪರಿಶ್ರಾಂತೋ ಮಾಸಿ ಮಾಸಿ ಶತಂ ಸಮಾಃ ।
ನಕ್ರುಧ್ಯಾದ್ ಯಶ್ಚ ಸರ್ವಸ್ಯ ತಯೋರಕ್ರೋಧನೋಽಧಿಕಃ ॥[12]

ಯಾರು ತಮ್ಮ ಕೋಪವನ್ನು ತಡೆಗಟ್ಟಿ ನಮಗೆ ಬೇರೆಯವರಿಂದ ಆಗುವ ಅವಮಾನ ಸಹಿಸಿಕೊಂಡು ಕಷ್ಟಬಂದರೂ ಎದೆಗುಂದಿರುವುದಿಲ್ಲವೋ ಅವರು ನಿಜವಾಗಿಯೂ ಮೋಕ್ಷವನ್ನು ಹೊಂದುತ್ತಾರೆ.

ಯಃ ಸಂಧಾರಯತೇ ಮನ್ಯುಂ ಯೋಽಪಿವಾದಾನ್ ಸ್ತಿತಿಕ್ಷತೇ ।
ಯಶ್ಚತಪ್ತೋನ ತಪತಿ ದೃಢಂಸೋಽರ್ಥಸ್ಯ ಭಾಜನಮ್ ॥[13]

ಯಾರಿಗೆ ಕೋಪವೆಂಬ ಬೆಂಕಿಯು ದಹಿಸಿರುತ್ತದೆಯೋ ಅವರು ಶಾಂತರಾಗಿರಲು ಸಾಧ್ಯವಿಲ್ಲ.

ಕೋಪಾಗ್ನಿದಾಹದಗ್ಧಸ್ಯ ಕ್ವಾಪಿಶಾಂತಿರ್ನವಿದ್ಯತೇ[14]

ಯಾವಾಗ ಬೆಂಕಿಯಂತೆ ಕೋಪವು ಉಂಟಾಗುತ್ತದೆಯೋ ಅದು ತನ್ನ ಆಧಾರವಾದ ಮೂಲವನ್ನೇ ಸುಡುತ್ತದೆ. ಬೇರೆಯದನ್ನು ಸುಡಬಹುದು ಅಥವಾ ಸುಡದೆಯೂ ಇರಬಹುದು.

ಉತ್ಪದ್ಯಮಾನ ಏವ ಪ್ರಥಮಂ ದಹತ್ಯೇವ ಸ್ವಮಾಶ್ರಯಂ ।
ಕ್ರೋಧಃ ಕೃಶಾನುವತ್ಪಶ್ಚಾತ್ ಅನ್ಯಂ ದಹತಿ ವಾನವಾ ॥[15]

ವಿವೇಕ ಕಳೆದುಕೊಂಡಾಗ ಕೋಪದಿಂದ ಕುರುಡಾಗಿರುವೆ, ನಿಜವಾಗಿ ಕುರುಡರು ನಿಜವಾದ ಕುರುಡರಲ್ಲ :-

ಕ್ರೋಧಾಂಧಃ ಪರಮಾಂಧ ಏವ ಹತಧೀರಂಧೋ ದೃಶಾಂಧೋ ಜನಃ [16]

ಇದಕ್ಕಿರುವ ಇನ್ನೊಂದು ಆಯಾಮವನ್ನು ತಿಳಿಯಬೇಕು. ಆಹಾರವನ್ನು ನೀಡುವ ಗಿಡಗಳ ಮೇಲೆ ಬಹಳ ಕಾಲ ನೀರಿನ ಹನಿಗಳಿಲ್ಲದಿರುವಂತೆ ಸ್ವಾಧೀನರಾಗಿರುವವರಿಗೆ ಬಹಳ ಕಾಲ ಕೋಪವಿರುವುದಿಲ್ಲ.

ವಶಿನೋ ಖುಷೋ ಮತಿಷು ನಾಶತೇ ಚಿರಂ ಜಲವಿಪ್ರುಷಷ್ಚ ಸಸ್ಯಸೂಚಿಷು [17]

ಉರಿಯುತ್ತಿರುವ ಬೆಂಕಿಯನ್ನು ನೀರು ಉಪಶಮ ಮಾಡುವಂತೆ ಯಾರು ತಮ್ಮ ವಿವೇಕ ಜ್ಞಾನದಿಂದ ಉಂಟಾಗುತ್ತಿರುವ ಕೋಪವನ್ನು ನಿಗ್ರಹಿಸಬಲ್ಲರೋ ಅವರೇ ಮಹಾತ್ಮರು:-

ಧನ್ಯಾಸ್ತೇ ಪುರುಷ ಶ್ರೇಷ್ಠಾಃ ಯೋ ಬುಧ್ಯಾ ಕೋಪ ಮುತ್ಥಿತಂ
ನಿರುಂಧಂತಿ ಮಹಾತ್ಮಾನೋ ದೀಪ್ತಮಗ್ನಿಮಿವಾಂಭಸಾ II [18]

ಕ್ರೋಧವು ತನ್ನಷ್ಟಕ್ಕೆ ತಾನೇ ಕೆಟ್ಟದ್ದು. ಅದು ಅಷ್ಟೇ ಅಲ್ಲ. ಅದು ಮಿಕ್ಕ ಕೆಲವು ಕೆಟ್ಟ ಗುಣಗಳಿಗೂ ಕಾರಣವು. ಅದು ಎಂಟು ಎಂದು ಮನುಸ್ಮೃತಿ ಬೋಧಿಸುತ್ತದೆ :-

ಪೈಶುನ್ಯಂ ಸಾಹಸಂದ್ರೋಹ ಈರ್ಷಾ ಸೂಯಾರ್ಥದೂಷಣಂ I
ವಾಗ್ದಂಡಜಂ ಪಾರುಷ್ಯಂ ಕ್ರೋಧಜೋಽಪಿಗಣೋಽಷ್ಟಕಃ II [19]

ಚಾಡಿಹೇಳುವುದು, ಮೋಸ ಮಾಡುವುದು, ದ್ರೋಹ ಮಾಡುವುದು, ಹೊಟ್ಟೆಕಿಚ್ಚು ಪಡುವುದು, ಅಸೂಯೆಯಿಂದ ವ್ಯವಹರಿಸುವುದು, ಹಣವನ್ನು ದುರುಪಯೋಗ ಮಾಡುವುದು, ಕರ್ಕಶವಾದ ಬೈಗಳನ್ನಾಡುವುದು ಹಾಗೂ ಹೊಡೆಯುವುದು ಇವು ಎಂಟು ಕೋಪದಿಂದ ಹುಟ್ಟುವ ವ್ಯಸನಗಳು.[20]

ಎಲ್ಲದರ ತಾತ್ಪರ್ಯವೆಂದರೆ, ಅಸಾಧ್ಯವಿಲ್ಲದಿದ್ದರೂ ಕೋಪವನ್ನು ತಡೆಯುವುದು ದುಃಸಾಧ್ಯ. ಯುಧಿಷ್ಠಿರನೂ ತನ್ನ ಗುರುವಿನಿಂದ ಮೊದಲ ಪಾಠದ ರೂಪದಲ್ಲಿ ಕೋಪವನ್ನು ತಡೆಯುವುದನ್ನೇ ಕಲಿತ. ಈ ಪ್ರಸಂಗವನ್ನು ಅರ್ಜುನನೊಡನೆ ಮುಖಾಮುಖಿಯಾದಾಗ ಅವನು ಅನುಭವಿಸಬೇಕಾಯಿತು. ಕರ್ಣನಿಂದ ಅವಮಾನಿತನಾದಾಗ ಧರ್ಮಜನ ಸ್ಥಿತಿಯನ್ನು ವಿಚಾರಿಸಲು ಅರ್ಜುನ ಬಂದಾಗ, ಕರ್ಣನ ಮುಖಕಾಂತಿಯನ್ನು ಕಂಡು ಅವನು ಸಂಸಪ್ತಕರನ್ನು ನಾಶ ಮಾಡಿದಾಗ ಧರ್ಮಜ ಕರ್ಣನನ್ನು ಹೊಗಳಿದ. ಕರ್ಣನ ಸ್ಥಿತಿಯನ್ನು ವಿಚಾರಿಸಲು ಬಂದಿರುವುದಾಗಿ ಧರ್ಮಜ ನುಡಿದಾಗ ಕರ್ಣ ಅವನ ಮೇಲೆ ಹೀಯಾಳಿಕೆ ಮಾತುಗಳನ್ನಾಡಿದಾಗ, ಅವನ ತಲೆಯನ್ನೇ ಕತ್ತರಿಸುವಂತಹ ಕೋಪ ಬಂದಾಗ ಅದನ್ನು ನಿಗ್ರಹಿಸಿದುದು ನಿಜಕ್ಕೂ ಶ್ಲಾಘನೀಯವೇ ಸರಿ.

ಯಾವಾಗಲೂ ಜಪತಪಗಳಲ್ಲಿ ತೊಡಗಿಸಿಕೊಂಡಿರುವಂತಹ ಮುನಿಗಳೂ ಸಹ ಕೋಪವನ್ನು ತಡೆಯುಲು ಅಸಮರ್ಥರಾದರು. ಅವರಲ್ಲಿ ದೂರ್ವಾಸನ ತರಹ ಶೀಘ್ರ ಕೋಪಿಗಳು ತಮ್ಮ ಪ್ರಸಿದ್ಧಿಯನ್ನೂ ಕಳೆದುಕೊಂಡರು. "ದೂರ್ವಾಸಾನಾಮ ಸುಲಭಕೋಪೋ ಮಹರ್ಷಿಃ" ಮತ್ತೋರ್ವ ಮುನಿಯಾದ ಪರಶುರಾಮನಿಗೆ ಕೋಪ ಕ್ಷತ್ರಿಯರನ್ನೇ ಈ ಭೂಮಿಯಲ್ಲಿ ಇಲ್ಲದವನಾಗಿ ಮಾಡುವನೆಂಬುದು ಇಪ್ಪತ್ತೊಂದು ಬಾರಿ ನಡೆಯಿತು. ಅವರ ಬಗ್ಗೆಯೇ ಹಾಗಿರುವಾಗ ಸಾಮಾನ್ಯರ ಬಗ್ಗೆ ಹೇಳುವುದೇನು? ಅದು ಬಹುತೇಕ ಅಸಾಧ್ಯವೇ ಸರಿ. ಇಂತಹ ವಿನಾಶಿಯಾದ ಕೋಪವನ್ನು ಹಿಡಿದಿಟ್ಟುಕೊಳ್ಳುವುದು ಅತ್ಯವಶ್ಯಕ. ಕೋಪವನ್ನು ನಿಗ್ರಹಿಸುವುದು ನಿಜವಾದ ಪರೀಕ್ಷೆ. ಅದನ್ನು ಹೇಗೆ ಪಡೆಯುವುದೆಂಬುದೇ ಅತ್ಯಮೂಲ್ಯ ಪ್ರಶ್ನೆ.

ಒಂದು ಬಾರಿ ಒಬ್ಬ ಬ್ರಾಹ್ಮಣ ಬುದ್ಧನನ್ನು ಕೇಳಿದ – ನೀವು ಯಾವುದನ್ನಾದರೂ ಸಾಯಿಸಲು ಒಪ್ಪುವಿರಾ? ಅದಕ್ಕೆ ಬುದ್ಧ ಪ್ರತಿಕ್ರಿಯಿಸಿದ. ಹೌದು, ಕೋಪವನ್ನು. ಕೋಪವೆಂಬ ಏಕೈಕ ಶತ್ರುವನ್ನು ವಿವೇಕಿಯಾದವನು ಕೊಲ್ಲಬೇಕು. ಈ ಉತ್ತರದಿಂದ ಸಂತಸಗೊಂಡ ಬ್ರಾಹ್ಮಣ ಸಂಘದಲ್ಲಿ ಭಿಕ್ಷುವಾದ. ಯಾವಾಗ ಬ್ರಾಹ್ಮಣ ಸಹೋದರನಿಗೆ ಈ ವಿಷಯ ತಿಳಿಯಿತೋ ಆಗ ಅವನು ಬುದ್ಧನನ್ನು ಶಪಿಸಿದ. ಬುದ್ಧ ನಕ್ಕ. ಅದಕ್ಕೆ ಮತ್ತಷ್ಟು ಕೋಪದಿಂದ ಬ್ರಾಹ್ಮಣ ಕೇಳಿದ – ನೀನು ಏಕೆ ಪ್ರತಿಕ್ರಯಿಸುತ್ತಿಲ್ಲ? ಅದಕ್ಕೆ ಬುದ್ಧ ಹೇಳಿದ – ಯಾರಾದರೂ ಉಡುಗೊರೆ ನಿರಾಕರಿಸಿದರೆ, ಯಾರು ಅದನ್ನು ನೀಡಿದ್ದರೊ ಅವರು ಅದನ್ನು ಹಿಂದಕ್ಕೆ ಪಡೆಯಬೇಕು. ಕೋಪಯುಕ್ತವಾದ ಮಾತೇ ಮೊದಲಿಗೆ ನೋವನ್ನುಂಟು ಮಾಡುತ್ತದೆ.

ಅನಂತರ ಬುದ್ಧ ಶ್ಲೋಕ ಹೇಳಿದ :–

ಯಾರಿಗೆ ಕೋಪವೇ ಇಲ್ಲವೋ ಅವರಿಗೆ ಹೇಗೆ ಕೋಪ ಬರಲು ಸಾಧ್ಯ? ಯಾವಾಗ ನೀನು ನಿನ್ನನ್ನು ಗಂಭೀರನಾಗಿ ನೋಡುವೆಯೋ ನಿನ್ನ ಮೇಲೆ ಹತೋಟಿ ಸಂಪಾದಿಸುವೆಯೋ ಆಗ ನೀನು ಶಾಂತಿ, ಸ್ವತಂತ್ರ ಹಾಗೂ ಸುರಕ್ಷಿತನಾಗಿರುವೆ.

ಯಾರು ಬೇರೆಯವರನ್ನು ನೋಯಿಸುತ್ತಾರೋ, ಅವರಿಂದ ನೋವನ್ನನುಭವಿಸಿ ನನ್ನನ್ನೂ ಬೇರೆಯವರನ್ನೂ ಹಿಂಸಿಸುತ್ತಾರೆ.

ಯಾವಾಗ ನೀನು ನೋವನ್ನನುಭವಿಸಿ, ಬೇರೆಯವರಿಗೆ ನೋವನ್ನು ಮಾಡುವುದಿಲ್ಲವೋ ಆಗ ನೀನು ಗೆದ್ದಂತೆಯೇ.

ನನ್ನ ನಡೆ ಹಾಗೂ ಗೆಲುವು ನಿನಗೆ ಸಹಕರಿಸುತ್ತದೆ. ಯಾವಾಗ ನೀನು ನಿನ್ನ ಹಾಗೂ ಬೇರೆಯವರ ಕೋಪದ ಮೂಲವನ್ನು ಗ್ರಹಿಸುವೆಯೋ ನಿನ್ನ ಮನಸ್ಸು ಆಗ ನಿಜವಾದ ಶಾಂತಿ, ಸಂತೋಷಗೊಂಡು ಹಗುರವಾಗುತ್ತದೆ. ನೀನು ವೈದ್ಯನಾಗಿ ನಿನ್ನನ್ನೂ ಬೇರೆಯವರನ್ನೂ ಗುಣಪಡಿಸುವೆ. ನೀನು ಇದನ್ನು ಅರ್ಥಮಾಡಿಕೊಳ್ಳದಿದ್ದರೆ ಕೋಪಾವಿಷ್ಟನಾಗಿ ಮೂರ್ಖನಾಗುವೆ.

ಬುದ್ಧನಂತೆಯೇ ಮಹಮ್ಮದ್ ಬಗ್ಗೆಯೂ ಒಂದು ಕಥೆಯಿದೆ. ಅವನು ಒಂದು ಮನೆಯ ಮುಂದೆ ಹೋಗುವಾಗ ಒಬ್ಬ ಮುದುಕಿ ಕಸ ಹೊರಗೆ ಚೆಲ್ಲುತ್ತಿದ್ದಳು. ಅವನು ಅದನ್ನು ಗಮನಿಸಿದೆ ಮುಂದೆ ಸಾಗುತ್ತಿದ್ದನು. ಈ ಪದ್ಧತಿ ದಿನಗಳವರೆಗೂ ಮುಂದುವರೆಯಿತು. ಒಂದು ದಿನ ಆ ಮನೆಯ ಮುಂದೆ ನಡೆದಾಗ ಯಾವ ಕಸವೂ ಅವನೆಡೆ ಚೆಲ್ಲಲ್ಪಡಲಿಲ್ಲ. ನಂತರದ ದಿನವೂ ಹಾಗೆಯೇ ಆಯಿತು. ಆಗ ಆ ಮುದುಕಿಗೆ ಏನೋ ಆಗಿರಬೇಕೆಂದು ಮಹಮ್ಮದ್‌ಗೆ ಅನಿಸಿತು. ವಿಚಾರಿಸಿದಾಗ ಅವಳು ತೀವ್ರ ಅನಾರೋಗ್ಯವಾಗಿರುವಳೆಂದು ತಿಳಿಯಿತು. ಅವನು ಅವಳ ಬಳಿಬಂದು, ಸೇವೆ ಮಾಡಿ ಅವಳನ್ನು ಸಹಜ ಸ್ಥಿತಿಗೆ ತಂದ. ಆಗ ಆ ಮುದುಕಿಗೆ ತನ್ನ ನಡವಳಿಕೆಯ ಬಗ್ಗೆ ಬೇಸರ ಜಿಗುಪ್ಸೆಯಾಯಿತು. ಆಗ ಅವಳು ಕೇಳಿದಳು ನಾನು ಅಷ್ಟು ಕೆಟ್ಟದಾಗಿ ನಡೆದುಕೊಂಡರೂ ನೀನು ಹೇಗೆ ಒಳ್ಳೆಯವನಾಗಿ ವರ್ತಿಸಿದೆ ಎಂದು. ಅದಕ್ಕೆ ಪ್ರವಾದಿ ಉತ್ತರಿಸಿದ – ಅವಳ ಹತ್ತಿರ ಇದ್ದುದನ್ನು ಅವಳು ನೀಡುತ್ತಿದ್ದಳು, ಅವನ ಹತ್ತಿರ ಇದ್ದುದನ್ನು ಅವನು ನೀಡುತ್ತಿದ್ದ ಎಂದು.

ಯಾರಿಗೆ ಕೋಪವಿಲ್ಲವೆಂದರೆ ಯಾರಿಗೆ ಸುಪ್ತ ಪ್ರಜ್ಞೆಯಲ್ಲಿ ಕೋಪದ ಬೀಜಗಳಿಲ್ಲವೋ ಎಂದು. ನಾವು ಕೋಪಗೊಳ್ಳುವುದೇಕೆಂದರೆ ನಮ್ಮಲ್ಲಿ ಕೋಪದ ಬೀಜಗಳಿರುವುದರಿಂದ. ಈ ಬೀಜಗಳು ನಮ್ಮಲ್ಲಿ ಪೋಷಕರಿಂದ ಅಥವಾ ಸಮಾಜದಿಂದ ವರ್ಗಾಯಿಸಲ್ಪಟ್ಟಿರಬಹುದು. ಸ್ವಲ್ಪ ಕೆರಳಿಸಿದರೂ ಅದು ಹೊರಬರುತ್ತದೆ. ಯಾರಿಗೆ ಈ ಕೋಪದ ಬೀಜವಿಲ್ಲವೋ ಅವರು ತಮ್ಮ ಬಗ್ಗೆ ಏನೇ ಹೇಳಿದರೂ ನಗುತ್ತಲೇ ಇರುತ್ತಾರೆ.

ಕೋಪವನ್ನು ನಿಗ್ರಹಿಸಲು ಆತ್ಮಮಯಾನಂದ ಎಂಬ ಚಿಂತಕ ಹೋಗುವಂತೆ. ನೀವು ಕೋಪಗೊಳ್ಳುವುದಕ್ಕೆ ಮುಂಚೆ, ಒಂದು ಶಬ್ದವನ್ನೂ ಹೇಳುವುದಕ್ಕೆ ಮುಂಚೆ ನಿಮಗೆ ನೀವೇ ಹೇಳಿಕೊಳ್ಳಿ – ''ನಾನು ನಾಳೆ ಕೋಪಗೊಳ್ಳುವೆ. ಯಾವಾಗ ನಿಷ್ಪ್ರಯೋಜಕವಾದುದು ಮುಂದೂಡಲ್ಪಡುವುದೋ ಆಗ ಅದು ತನ್ನ ತೀವ್ರತೆಯನ್ನು ಕಳೆದುಕೊಂಡು ಘಟನೆಯ ಬಗ್ಗೆ ಮರು ಚಿಂತನೆಗೆ ಅವಕಾಶ ಮಾಡಿಕೊಡುತ್ತದೆ. ಸ್ವಾಮಿ ಆತ್ಮಾನಂದರು ಆತ್ಮಮಯಾನಂದರು ನುಡಿದಿದ್ದಕ್ಕೆ ಸೇರಿಸಿದರು – ''ಮಾನವರಿಗೆ ಯಾವುದೇ ಘಟನೆಯನ್ನಾದರೂ ಸೃಷ್ಟಿಸಲು ಅಥವಾ ನಾಶಗೊಳಿಸಲು ಸ್ವಾತಂತ್ರ್ಯವಿದೆ. ಆದ್ದರಿಂದ ನಮ್ಮ ಸಂಕಲ್ಪವು ಅಷ್ಟು ಮಹತ್ವದ್ದಾಗಿರುತ್ತದೆ.

ನೀವು ನಕಾರಾತ್ಮಕ ಹಾಗೂ ನಿರಾಸೆಗೊಂಡವರನ್ನು ಎಲ್ಲೆಡೆಯಲ್ಲೂ ಕಾಣಬಹುದು. ಅವರು ಅಮಾಯಕರನ್ನು ತಮ್ಮ ಕೋಪಕ್ಕೆ ಗುರಿಮಾಡುವರು ಮತ್ತು ಸ್ವಕೇಂದ್ರೀಕೃತವಾಗಿ ಕಿರಿಕಿರಿಯುಂಟು ಮಾಡುತ್ತಿರುತ್ತಾರೆ.

ಯಾರು ಸ್ವಾಭಾವಿಕವಾಗಿಯೇ ಬೇರೆಯವರ ತಪ್ಪನ್ನು ಕಂಡುಹಿಡಿಯುವರೋ ಅವರು ಕೆಲಸದವರಾಗುತ್ತಾರೆ. ಬೇರೆಯವರಿಗಿಂತಲೂ ತಾವು ಶ್ರೇಷ್ಠ ಎಂದು ತಮ್ಮಷ್ಟಕ್ಕೆ ತಾವೇ ಅವರು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ನೀವು ಬೇರೆಯವರಿಂದ ಏನು ಬಯಸುವೆಯೋ

ಅದು ನೀನಾದರೆ ನೇರ ವ್ಯಕ್ತಿತ್ವ, ಆಹ್ಲಾದಕತೆ ಹೊಸ ವಿಷಯಗಳ ಬಗ್ಗೆ ಮುಕ್ತಮನಸ್ಸು ಬೇರೆಯವರು ನಿಮ್ಮ ಬಳಿ ಬರುತ್ತಾರೆ. ಸ್ವಗುಣಾದರ್ಶ, ಕೋಪಗಳು ಬೇರೆಯ ಕಡೆ ಬೇರೆಯವರನ್ನು ಸೆಳೆಯುತ್ತದೆ.

ಬೇರೆಯವರ ಕಹಿತನದಿಂದ ಹೇಗೆ ಮೇಲೇರುವುದು ಎನ್ನುವುದೇ ನೀವು ಬೇರೆಯವರನ್ನು ಹೋಲುತ್ತಿಲ್ಲವೆನ್ನುವುದಕ್ಕೆ ಸಾಕ್ಷಿ. ನೀವು ಕೋಪಗೊಂಡು ಜಿಗುಪ್ಸಿತರಾಗುವಿರಿ. ನೀವು ಬೇರೆಯವರನ್ನು ತಿದ್ದಲಾರಿರಿ. ಆದರೆ ನೀವು ನಿಮ್ಮನ್ನು ತಿದ್ದುಕೊಳ್ಳಬಲ್ಲಿರಿ.

ಪ್ರೀತಿಯಿಂದ ನೀವು ಕೋಪವನ್ನು ಗೆಲ್ಲಬಲ್ಲಿರಿ. ಪ್ರಾರಂಭಿಕ ಹಂತದಲ್ಲಿ ಇದು ಕಷ್ಟವಾಗಿ ತೋರಬಹುದು, ಆದರೆ ಆ ವಿಷಯದಲ್ಲಿ ಪ್ರಾರಂಭಿಸಬೇಕು.

ಕೋಪ ಎಂಬುದು ಮಾನಸಿಕ ಅಲೆ. ಅದನ್ನು ನೀವು ಗುರುತಿಸಿ ಪ್ರತಿಕ್ರಯಿಸುತ್ತೀರಿ. ಈ ಮಾನಸಿಕ ಅಲೆಯನ್ನು ನಿಗ್ರಹಿಸಿ ವ್ಯತ್ಯಾಸ ಪಡಿಸಿಕೊಳ್ಳುವುದಾದರೆ, ಪ್ರತಿಕ್ರಿಯೆಯೂ ಶಾಂತವಾಗಿದ್ದುದಾಗುತ್ತದೆ ಕೋಪಾವೇಶವಿಲ್ಲದೆ. ನಾವು ನಮ್ಮ ಆಂತರಿಕತೆಯತ್ತ ಗಮನವಹಿಸಬೇಕೇ ಹೊರತು ಆಂತರಿಕ ಬಲೆಯತ್ತ ಅಲ್ಲ. ಅದಕ್ಕಾಗಿಯೇ ಹೊರಹೋಗಿ ಪ್ರಕೃತಿಯನ್ನು ಶೋಧಿಸಬೇಕು ಮತ್ತು ಮಾನವೀಯತೆಯನ್ನು ಮರೆಯಬಾರದು.

ಹಿಂದೆ ಹೇಳಿರುವಂತೆ ನಮ್ಮ ಪವಿತ್ರ ಗ್ರಂಥಗಳಲ್ಲಿ ತಿಳಿಸಿರುವಂತೆ, ಕೋಪವೆಂಬುದು ಬೆಂಕಿಯಷ್ಟೇ ವಿನಾಶಿಯಾದುದು, ಅದಕ್ಕಿಂತ ಹೆಚ್ಚಲ್ಲದಿದ್ದರೂ ಸಹ. ನೀವು ಕೋಪಗೊಂಡಾಗ ದೇಹದಲ್ಲಿರುವ ಕೆಲವು ಗ್ರಂಥಿಗಳು ವಿಕಾಸಗೊಳ್ಳುತ್ತವೆ. ಆಗ ಅದು ಅಡ್ರೆನಲೆನ್ನು ಹೊರಹಾಕಿ ಹಾರ್ಮೋನುಗಳಲ್ಲಿ ಆತಂಕವುಂಟುಮಾಡುತ್ತದೆ. ಅದರ ಪರಿಣಾಮ ದೇಹದ ಮೇಲಾಗುತ್ತದೆ. ಮುಖವು ಕೆಂಪಾಗುವುದು, ರಕ್ತದ ಒತ್ತಡ ಅಧಿಕವಾಗುವುದು, ನಮ್ಮ ಧ್ವನಿ ಉತ್ಕಂಠವಾಗುತ್ತದೆ, ಉಸಿರಾಟ ಬೇಗ ಬೇಗ ಆಗುತ್ತದೆ. ಆಳವಾಗಿ ಆಗುತ್ತದೆ, ಹೃದಯದ ಬಡಿತ ಅಧಿಕವಾಗುತ್ತದೆ, ಕೈಕಾಲುಗಳ ಮಾಂಸಖಂಡಗಳು ಹಿಡಿದಂತಾಗುತ್ತದೆ. ದೇಹವು ಆತಂಕಕ್ಕೊಳಗಾಗುತ್ತದೆ. ಒಟ್ಟು ಪರಿಣಾಮವೆಂದರೆ, ಕೋಪ ಹೆಚ್ಚಾಗುತ್ತದೆ, ಹೃದಯಕ್ಕೆ ಸಂಬಂಧಿಸಿದ ರೋಗಗಳು, ಪಾರ್ಶ್ವವಾಯು, ಹುಣ್ಣು, ಹೆಚ್ಚಾದ ರಕ್ತಸಂಚಾರವಾಗುತ್ತದೆ. ಆದ್ದರಿಂದ ಕೋಪವನ್ನು ನಿಗ್ರಹಿಸುವುದೇ ಲೇಸು. ಕೋಪ ನಿಮ್ಮನ್ನು ಸುಡುವ ಮುನ್ನ ನೀವು ಕೋಪವನ್ನು ಸುಡಿರಿ.

ಯಾವಾಗ ನೀವು ನಿಃಶಬ್ದವಾಗಿ ಸಂತಸದಿಂದಿರುವಿರೋ ಜೀರ್ಣಶಕ್ತಿ ದೇಹದಲ್ಲಿ ಸರಿಯಾಗಿರುತ್ತದೆ. ಕೋಪಗೊಂಡಾಗ ಅದು ಅಸಮತೋಲನವಾಗುತ್ತದೆ. ಆದ್ದರಿಂದಲೇ ಉಪನಿಷತ್ಕಾರರು ಸಂತಸದಿಂದ ಆಹಾರಸೇವಿಸಬೇಕೆಂದು ವಿಧಿಸಿರುವರು, ಇದನ್ನೇ ವೈದ್ಯರೂ ಅನುಮೋದಿಸುವರು. ''ಪ್ರಸನ್ನಮುಖೋ ಅನ್ನಾನಿ ಭುಂಜೀತ''. ಕೋಪಗೊಂಡಿರುವಾಗ ಅವನು ಪಿತ್ತದಿಂದಿರುವಾಗ ಊಟ ಮಾಡಬಾರದು. ಕೋಪವು ಸಮಸ್ತ ದೇಹವನ್ನು ವಿಷದಂತೆ ಹಾಳು ಮಾಡುತ್ತದೆ.

ಮೂರು ರೀತಿಯಾಗಿ ಈ ಕೋಪವನ್ನು ನಿಗ್ರಹಿಸಬಹುದು. ಮೊದಲನೆಯದು ಮಾತಿನಿಂದ. ಮನಃಶಾಸ್ತ್ರಜ್ಞರ ಪ್ರಕಾರ ಕೋಪವನ್ನು ಶಬ್ದದ ಮೂಲಕ ಹೊರಹಾಕಿದರೆ ಮನಸ್ಸು ಹಗುರವಾಗುತ್ತದೆ. ಆದರೆ ಇದರಿಂದ ತಾತ್ಕಾಲಿಕವಾದ ಉಪಶಮನ ದೊರೆಯುತ್ತದೆ. ಮತ್ತೆ ಕೋಪವು ಸಂಗ್ರಹವಾಗಿ ಮತ್ತೊಂದು ಬಾರಿ ಹೊರಬರಲು ಕಾರಣವಾಗುತ್ತದೆ. ಕ್ರಮೇಣ ಕೋಪ ಎಂಬುದು ಅಭ್ಯಾಸವಾಗಿ ನಾವು ಅದರ ದಾಸರಾಗುತ್ತೇವೆ. ಕೋಪವೇ ನಿಮ್ಮನ್ನು ನಿಯಂತ್ರಿಸುತ್ತದೆ. ಅದು ಬಹಳ ಕಿರುಕುಳ ಕೊಡುವ ಯಜಮಾನ. ಎರಡನೆಯದಾಗಿ ಅದನ್ನು ಅದುಮಿ ಇಡುವದು. ಅದೂ ಸರಿಯಲ್ಲ. ಏಕೆಂದರೆ ಅದು ನಮ್ಮನ್ನು ಸುಪ್ತ ಪ್ರಜ್ಞೆಗೆ ತಳ್ಳಿ ಮತ್ತೂ ಸಹ ಅನರ್ಥವನ್ನುಂಟುಮಾಡುತ್ತದೆ.

ಆದ್ದರಿಂದ ಬಾಹ್ಯವಾಗಿ ಹೊರಹಾಕುವುದಾಗಲೀ, ಬಲವಂತವಾಗಿ ತಡೆಹಿಡಿಯುವುದಾಗಲೀ ಸರಿಯಲ್ಲ. ಅದರಿಂದ ಕೋಪವನ್ನು ನಿಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ ಮೂರನೆಯ ಮಾರ್ಗವಾದ ಕ್ಷಮೆ, ತಾಳ್ಮೆ ಹಾಗೂ ಸಹನೆ ಉತ್ತಮವಾಗಿ ಪರಿಣಮಿಸುತ್ತದೆ. ಕ್ಷಮಿಸು ಮತ್ತು ಮುಕ್ತನಾಗು. ಪ್ರತಿರಾತ್ರಿಯೂ ಮಲಗುವ ಮುನ್ನ ದಿನಚರಿಯನ್ನು ಮೆಲುಕು ಹಾಕು. ನೀನು ಯಾರಿಂದಲಾದರೂ ಮೋಸಹೋದೆಯೋ ಯಾರಾದರೂ ನಿನಗೆ ಕಷ್ಟಕೊಟ್ಟರೇ, ತೊಂದರೆಗೊಳಪಡಿಸಿದರಾ ಅಥವಾ ಕೆಟ್ಟದ್ದಾಗಿ ನಡೆದುಕೊಂಡರಾ? ಅಂತಹವರನ್ನು ಕರೆದು ಹೇಳಿ ''ನಾನು ನಿನ್ನನ್ನು ಕ್ಷಮಿಸಿರುವೆ'' ಎಂದು. ನಂತರ ಶಾಂತವಾಗಿ ನಿದ್ರಿಸಿ.

ಈ ಹಂತದಲ್ಲಿ ರಷ್ಯಾ ದೇಶದ ದೊರೆಯಾದ ಫ್ರೆಡರಿಕ್ ದಿ ಸೆಕೆಂಡ್‌ನ ಜೀವನದಲ್ಲಿ ನಡೆದ ಘಟನೆಯನ್ನು ನೆನಪಿಸಿಕೊಳ್ಳುವುದು ಒಳ್ಳೆಯದು. ಒಂದು ದಿನ ತನ್ನ ಬೆಳ್ಳಿಯ ನಷ್ಯದ ಡಬ್ಬಿಯಿಂದ ತನ್ನ ಸೇವಕ ಸ್ವಲ್ಪ ನಷ್ಯ ತೆಗೆದುಕೊಳ್ಳುತ್ತಿದ್ದುದನ್ನು ನೋಡಿದ.

ನೀನು ಈ ನಷ್ಯದ ಡಬ್ಬಿಯನ್ನು ಇಷ್ಟಪಡುವೆಯಾ ಎಂದು ರಾಜ ಸಹಜವಾಗಿ ಕೇಳಿದ, ಕದಿಯುವ ಹಂತದಲ್ಲಿದ್ದ ಸೇವಕ ಪೇಚಿಗೆ ಸಿಕ್ಕಿ ನಿರುತ್ತರನಾದನು.

ಮತ್ತೆ ರಾಜ ತನ್ನ ಪ್ರಶ್ನೆಯನ್ನು ಪುನರಾವರ್ತಿಸಿದನು – ನಿನಗೆ ಈ ನಷ್ಯದ ಡಬ್ಬಿ ಇಷ್ಟವೇ?

ಆಗ ಅವನು ತಲೆಯೆತ್ತಿ ಹೇಳಿದ – ''ಹೌದು, ಇದು ಸುಂದರವಾದ ನಷ್ಯದ ಪೆಟ್ಟಿಗೆ.

ಹಾಗಿದ್ದರೆ ತೆಗೆದುಕೋ ಎಂದ ರಾಜ. ಅದು ನಮಗಿಬ್ಬರಿಗೆ ಅತ್ಯಂತ ಚಿಕ್ಕದು.

ಮತ್ತೊಂದು ಘಟನೆಯೂ ಇಲ್ಲಿ ಸ್ಮರಿಸಿಕೊಳ್ಳಬೇಕು. ಕೋಪದಿಂದಿದ್ದ ಒಬ್ಬ ಸಾಧುವಿದ್ದನು. ಅವನು ಒಂದು ಆಶ್ರಮದಲ್ಲಿದ್ದ ಮತ್ತು ಅಲ್ಲಿದ್ದವರೊಂದಿಗಿರುವುದು ಕಷ್ಟವಾಯಿತು. ಅವನು ಆಶ್ರಮ ಬಿಟ್ಟು ಕಾಡಿನಲ್ಲಿ ಸ್ವತಂತ್ರವಾಗಿರಲು ನಿಶ್ಚಯಿಸಿದ. ಅದರಿಂದ ಅವನು ಕೋಪಗೆಲ್ಲಬಹುದೆಂದುಕೊಂಡ. ಪ್ರಾರಂಭದಲ್ಲಿ ಅವನು ಶಾಂತಿ ಹಾಗೂ ಆಂತರಿಕ ನೆಮ್ಮದಿಯಿಂದಿದ್ದನು. ಸಂತೋಷವಾಗಿದ್ದನು.

ಒಂದು ದಿನ ನದಿಗೆ ನೀರನ್ನು ತರಲು ಹೂಜಿಯನ್ನು ತೆಗೆದುಕೊಂಡು ಹೊದನು. ಅವನು ನೆಲದ ಮೇಲೆ ಹೂಜಿಯನ್ನಿಟ್ಟಕೂಡಲೇ ಅದು ಕೆಳಗೆಬಿತ್ತು. ಅವನು ಮತ್ತೆ ಅದರಲ್ಲಿ ನೀರನ್ನು ತುಂಬಿಸಿದ. ಮತ್ತೆ ಹೂಜಿ ಬಿತ್ತು. ಅವನು ಅನೇಕಸಲ ಅದನ್ನು ಪುನರಾವರ್ತಿಸಿ, ಕೊನೆಗೆ ತಾಳ್ಮೆ ಕಳೆದುಕೊಂಡು ಆ ಹೂಜಿಯನ್ನು ಒಡೆದು ಹಾಕಿದನು. ಆಗ ಅವನಿಗೆ ಅರಿವಾಯಿತು – ನಾನು ಆಶ್ರಮಬಿಟ್ಟೆ. ತನಗೆ ತಾನೇ ತಪ್ಪೊಪ್ಪಿಕೊಂಡ– ನಾನು ನನ್ನ ಕೋಪಗೆಲ್ಲಲು ಆಶ್ರಮ ಬಿಟ್ಟೆ, ಆದರೆ ಅದು ನನ್ನನ್ನು ಕಾಡಿಗೂ ಹಿಂಬಾಲಿಸಿತು.

ವಯಕ್ತಿಕ ವ್ಯಕ್ತಿಗಳಾಗಲೀ, ಪರಿಸ್ಥಿತಿಗಳಾಗಲೀ, ಕೋಪವನ್ನುಂಟುಮಾಡುವುದಿಲ್ಲ. ಅದು ನೀವು ವ್ಯಕ್ತಿಗಳಿಗೆ ಮಾಡುವ ಪ್ರತಿಕ್ರಿಯೆಯೇ ಹಾಗೂ ಪರಿಸ್ಥಿತಿಗಳೇ ನೀವು ಕೋಪಿಷ್ಟರೋ ಅಥವಾ ಅಲ್ಲವೋ ಎಂಬುದನ್ನು ನಿರ್ಧರಿಸುತ್ತದೆ. ಆದ್ದರಿಂದ ಕೋಪ ತಡೆಯಲು ಮನೋದಾರ್ಢ್ಯ ಬೆಳೆಸಿಕೊಳ್ಳಬೇಕು.

ನಾವು ತಪ್ಪುಗಳನ್ನು ಸ್ಮರಿಸಿದಾಗ, ಕೊನೆಗೆ ಮನಸ್ಸಿನಿಂದ ಹೊರಹೊಮ್ಮುವುದೇ ಕೋಪ. ಇದು ಎಲ್ಲರ ಬಗ್ಗೆಯೂ ಅತ್ಯಂತ ಪ್ರಮುಖ ವಿಷಯ. ಪ್ರತಿಯೊಬ್ಬರೂ ತನಗೆ, ಕೋಪ ಮಾಡಿಕೊಳ್ಳಲು ಅಧಿಕಾರವಿದೆಯೆಂದೇ ಭಾವಿಸುವರು. ನಿಯಮಗಳ ಬಗ್ಗೆ ಕೇಳುವುದು, ಸಕಾರಾತ್ಮಕ ವಿಷಯಗಳ ಬಗ್ಗೆ ಕೇಂದ್ರೀಕರಿಸುವುದು ವಾಚಿಕವಾಗಿ ಸಾಧ್ಯವಾಗಬಹುದು, ಆದರೆ ವಾಸ್ತವವಾಗಿ ನಿಮಗೆ ಪ್ರತ್ಯುತ್ತರ ನೀಡುವ ತುರಿಕೆಯಿರುತ್ತದೆ. ಆಗ ನಿಯಮಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಕಷ್ಟವಾಗುತ್ತದೆ. ಸಾಮಾನ್ಯವಾಗಿ ಬೇರೆಯವರೇ ನಿಮ್ಮನ್ನು ಪ್ರಚೋದಿಸುತ್ತಿರುತ್ತಾರೆ. ಆಗ ನಾವೆಲ್ಲರೂ ಹೇಳುತ್ತೇವೆ – ನಾನು ಏನನ್ನೂ ಹೇಳುತ್ತಿರಲಿಲ್ಲ. ಆದರೆ ಅವನು ನನಗೆ ಯಾವ ಆಯ್ಕೆಯನ್ನೂ ಕೊಡಲಿಲ್ಲ. ನಾವು ಅತ್ಯಂತ ವಿಚಾರವಂತರೆಂದುಕೊಂಡು ಅದಕ್ಕೆ ವಿರುದ್ಧವಾಗಿರುತ್ತೇವೆ.

ನಾನು ನನ್ನನ್ನು ಅಧೀನದಲ್ಲಿಟ್ಟುಕೊಂಡು ಪ್ರತ್ಯುತ್ತರಿಸಬೇಕೋ ಅಥವಾ ಸುಮ್ಮನಿರಬೇಕೋ ಎಂದು ನಿರ್ಧರಿಸಬಹುದು. ಆಯ್ಕೆ ನನ್ನದಾದರೂ ಸಹ ನನ್ನ ಮೇಲೆ ನಾನು ಹಿಡಿತ ಸಾಧಿಸುವುದು ಅತ್ಯಂತ ಕಷ್ಟಕರವಾದುದು. ಗೆಲುವಿನಿಂದ ಬಂದ ಅಹಂಕಾರ ಗೆಲ್ಲುವುದು ಕಷ್ಟ. ನಮ್ಮ ಮರ್ಯಾದೆಗೆ ಧಕ್ಕೆ ಬಂದ ಆಸೆಯನ್ನು ತಡೆಹಿಡಿಯುವುದು ಕಷ್ಟ. ಇದೇ ಸ್ನೇಹಿತರ ಮಧ್ಯೆ ಘರ್ಷಣೆಗೆ ಕಾರಣವಾಗುತ್ತದೆ, ಸಂಸಾರಗಳನ್ನು ಹಾಳುಮಾಡುತ್ತದೆ. ಕೆಲವರ ವಿಷಯದಲ್ಲಿ ಹೇಳಲಾಗದಂತಹ ಆಪತ್ತಿಗೂ ಕಾರಣವಾಗುತ್ತದೆ. ಆದರೆ ಈ ಎಲ್ಲವನ್ನೂ ತಡೆಯಬಲ್ಲ ಶಕ್ತಿ ಆಂತರಿಕವಾಗಿ ನಮ್ಮ ಹೃದಯದಲ್ಲೇ ಇರುತ್ತದೆ.

ನಾವು ಕೋಪಗೊಂಡಾಗ ಅವನು ವಿವೇಚಿಸಬೇಕು. ಬೇರೊಬ್ಬನಿಗೆ ಅವನ ವಿಷಯಕವಾಗಿಯೂ ಚಿಂತಿಸಲು ಬಿಡಬೇಕು. ಆಗ ಕಿರುಚುವುದನ್ನು ಕಡಿಮೆ ಮಾಡಿಕೊಂಡು ಕೇಳುವುದನ್ನು ಹೆಚ್ಚಾಗಿ ಮಾಡಿಕೊಳ್ಳಬೇಕು.

ನಾವು ಅವಸರವಾಗಿ ಮಾತನಾಡಿದಾಗ ಅವರ ಬಗ್ಗೆ ಅನಂತರ ಪಶ್ಚಾತ್ತಾಪಕ್ಕೊಳಗಾಗುತ್ತೇವೆ. ಆದರೆ ಈ ಪಶ್ಚಾತ್ತಾಪ ಬಹಳ ಕೊನೆಯಲ್ಲಿ ಬರುತ್ತದೆ.

ನಾವು ಕ್ಷಮೆಯಾಚಿಸಲೂ ಆಗ ನಮ್ಮಲ್ಲಿ ಸಮಯ ಇರುವುದಿಲ್ಲ. ನಾವು ನಮ್ಮ ಅಂತರ್ವಾಣಿಯನ್ನಾಲಿಸಿದರೆ, ಕೋಪಗೊಂಡಾಗ, ನಾವು ಗಾಯದಿಂದ ತಪ್ಪಿಸಿಕೊಳ್ಳುವುದು ಮಾತ್ರವಲ್ಲ. ನಾವು ಅದರಿಂದಾಗುವ ಕೆಟ್ಟ ಪರಿಣಾಮದಿಂದಲೂ ಪಾರಾಗಬಹುದು.

ಅಕ್ರೋಧ – ಕೋಪವಿಲ್ಲವರ ಬಗ್ಗೆ ವಿಚಾರವೂ ಮಾಡುವುದಕ್ಕೆ ಮುಂಚೆ ಕಾರಣವಿದ್ದೂ ಕೋಪಮಾಡಿಕೊಳ್ಳದಿರುವುದು ಎಂದು ಕುಲ್ಲೂಕಭಟ್ಟ ಮನುಸ್ಮೃತಿಯ ಒಂದು ಶ್ಲೋಕದ ವ್ಯಾಖ್ಯಾನಾವಸರದಲ್ಲಿ ಹೇಳುತ್ತಾನೆ. ''ಕ್ರೋಧ ಹೇತೌ ಸತ್ಯಪಿ ಕ್ರೋಧಾನುಪಪತ್ತಿಃ''. ಕ್ರೋಧ ಎಂಬುದು ಸುಂದರವಾದ ಮಾತಿಗೆ ಒಂದು ಅಡಚಣೆಯಾಗಿರುತ್ತದೆ. ಸಮಾಜದಲ್ಲಿರುವುದಕ್ಕೆ ಮಾತು ಮುಖ್ಯವಾದ ವಾಹಿನಿಯಾಗಿರುತ್ತದೆ. ಕೋಪವು ಯಾವಾಗಲೂ ಮಾನ್ಯತೆಯಲ್ಲಿ ಪರ್ಯವಸಾನವಾಗುತ್ತದೆ. ನಮ್ಮ ಆಂತರಿಕವಾದುದನ್ನೆಲ್ಲಾ ಕೋಪವು ತೆಗೆದುಹಾಕಿ ನ್ಯೂನತೆಯನ್ನುಂಟುಮಾಡುತ್ತದೆ. ಕೆಲವು ಸಲ ಕೋಪವು ನಮ್ಮನ್ನು ನಾವು ರಕ್ಷಿಸಿಕೊಳ್ಳುವ ಉಪಾಯವಾಗುತ್ತದೆ. ಇದಕ್ಕಿಂತ ದೊಡ್ಡ ಸತ್ಯವಿಲ್ಲ. ಕೋಪವು ಹುಚ್ಚರನ್ನಾಗಿಸುತ್ತದೆ. ಅದಕ್ಕೆ ಯಾವ ನಿಲುಗಡೆ ತಾನೇ ಇದೆ? ಕೋಪದಿಂದ ಅವನ ನಿಲುವು ಕಳೆದುಹೋಗಿ ಅವನ ನೆನಪಿನ ಶಕ್ತಿಯೂ ಹಾಳಾಗುತ್ತದೆ. ತಾನು ತನ್ನಷ್ಟಕ್ಕೇ ಹಿಡಿದಿಟ್ಟುಕೊಳ್ಳಲಾರದ ಸ್ಥಿತಿಯನ್ನು ತಲುಪಿಸುತ್ತದೆ. ತಾನು ಯಾರೆಂಬುದನ್ನು ಅವನು ಮರೆಯುತ್ತಾನೆ. ಅವನಿಗೆ ಸರಿಹೊಂದದ ರೀತಿಯಲ್ಲಿ ಅವನು ವರ್ತಿಸಲಾರಂಭಿಸುತ್ತಾನೆ. ಇದಕ್ಕೆ ಒಳ್ಳೆಯ ನಿದರ್ಶನವೆಂದರೆ ರಸ್ತೆಯಲ್ಲಾಗುವ ಉದ್ವೇಗ. ಆಗ ವಿವೇಚನೆ ಸಂಪೂರ್ಣವಾಗಿ ನಷ್ಟವಾಗುತ್ತದೆ. ತನ್ನ ಹುಚ್ಚುವರ್ತನೆ ಅವನಿಗೆ ಏನನ್ನೂ ಅನಿಸುವುದಿಲ್ಲ. ಅವನು ಸರಿಯಾದ ಸಂದರ್ಭದಲ್ಲಿ ತನ್ನ ಆವೇಶವನ್ನು ಹಿಡಿದಿಟ್ಟುಕೊಂಡಿದ್ದರೆ ಆಗ ಬೇರೆಯೇ ಆಗುತ್ತಿತ್ತು. ಆದರೆ ಅದನ್ನು ಕುರಿತು ಹೇಳುವುದು ಸುಲಭ ಆದರೆ ಮಾಡುವುದು ಕಷ್ಟ. ಅದಕ್ಕೆ ದೃಢವಾದ ಸಂಕಲ್ಪ ಬೇಕಾಗುತ್ತದೆ. ಅದು ಕಷ್ಟವಾದುದಾದರೂ ಅಸಾಧ್ಯವಾದುದೇನಲ್ಲ.

---

ಆಕರಗಳು

1) ರಾಮಾಯಣ.5.55.4-5 2) ಹರ್ಷಚರಿತ.ಪುಟ.14 3) ಹಿಂಗುಲಪ್ರಕರಣ.7.3. 4) ಬೃಹನ್ನಾರದೀಯಪುರಾಣ.32.33 5) ಯೋಗಸೂತ್ರ.4.9 6) ಚಾಣಕ್ಯಸೂತ್ರಾಣಿ.148 7) ನೀತಿಕಲ್ಪತರು.7.20 8) ಹರಿವಂಶಪುರಾಣ.61-63 9) 1.33 10) ಹರ್ಷಚರಿತ.ಪು.14 11) ಮಹಾಭಾರತ.ಆದಿಪರ್ವ.87-7. 12) ಅದೇ.79.6 13) ಅದೇ.79.5 14) ಹರಿಲೀಲಾಕಲ್ಪತರು.4.10.33 15) ಯೋಗಸೂತ್ರ.4-10 16) ಆನಂದವೃಂದಾವನ ಚಂಪೂ.15.140 17) ನವಸಾಹಸಾಂಕಚರಿತ.10.46 18) ವಾಲ್ಮೀಕಿರಾಮಾಯಣ.5.55.3. 19) 7.48 20) ಬ್ಯೂಹ್ಲರ್ ಅವರ ಭಾಷಾಂತರ.4. ಸೇಕ್ರೇಡ್‌ಬುಕ್ಸ್ ಆಫ್ ದಿ ಈಸ್ಟ್.ಸಂಪುಟ.25

# 13. ದುರಾಧರ್ಷಿತಾ - ಮುಂದಾಲೋಚನೆ ದೂರದೃಷ್ಟಿ

ನಮ್ಮ ಆರ್ಷೇಯಗ್ರಂಥಗಳಲ್ಲಿ ಮತ್ತೆ ಮತ್ತೆ ಪ್ರತಿಪಾದಿಸಿರುವುದೆಂದರೆ ನಾವು ನಮ್ಮ ಜೀವನದಲ್ಲಿ ಸದ್ಯದಲ್ಲಿರುವ ಲಾಭ ಅಥವಾ ನಷ್ಟ ಕುರಿತು ಯೋಚಿಸಬಾರದು ಆದರೆ ದೂರದೃಷ್ಟಿ ಇರಬೇಕೆಂದು. ದೀರ್ಘಂ ಪಶ್ಯತ ಮಾಹ್ರಸ್ವಂ. ನಾವು ನಮ್ಮ ಕೃತ್ಯಗಳನ್ನು ನಿರೂಪಿಸುವಾಗ ಮುಂದಾಲೋಚನೆಯಿಂದ ನಡೆಸಬೇಕೇ ಹೊರತು ಅದೇ ತನ್ನ ಅಂಶವನ್ನು ತೆರೆಯುವಂತಾಗಲಿ ಎಂದು ಭಾವಿಸಬಾರದು. ರಾಮಾಯಣದ ಪ್ರಕಾರ ಶುದ್ಧನು ಶುದ್ಧಮನಸ್ಕನಾದವನು ಮುಂದಾಲೋಚನೆಯುಳ್ಳವನಾಗಿರಬೇಕು, ಅನಾಗತ ವಿಧಾನಂತು ಕರ್ತವ್ಯಂ ಶುಭಮಿಚ್ಛತಾ[1]. ಮಹಾಭಾರತವೂ ಈ ಅಂಶವನ್ನೇ ಸಮರ್ಥಿಸುತ್ತದೆ.

ಅನಾಗತ ವಿಧಾತಾ ಚ ಪ್ರತ್ಯುತ್ಪನ್ನಮತಿಶ್ಚ ಯಃ ।
ದ್ವಾವಿಮೌ ಸುಖಮೇಧೇತೇ ದೀರ್ಘಸೂತ್ರೀ ವಿನಶ್ಯತಿ ॥[2]

ಯಾರು ಮುಂದಾಲೋಚನೆಯುಳ್ಳವರೋ, ಯಾರಿಗೆ ಮನಸ್ಸು ಸರಿಯಾಗಿ ಸಮಯಕ್ಕೆ ಕಾರ್ಯತತ್ಪರವಾಗುವುದೋ ಅವರು ತಮ್ಮ ಜೀವನದಲ್ಲಿ ಸುಖವಾಗಿರುತ್ತಾರೆ. ಯಾರು ಮಂದಬುದ್ಧಿಯುಳ್ಳವರೋ ಅವರು ದುಃಖವನ್ನನುಭವಿಸುತ್ತಾರೆ.

ಈ ಭಾವನೆ ತಂತ್ರೋಪಾಖ್ಯಾನದಲ್ಲೂ ಬರುತ್ತದೆ. ಅದು ಮೇಲಿನ ಶ್ಲೋಕವನ್ನು ನಾಲ್ಕನೇ ಪಾದ ಬಿಟ್ಟು ಮರೂಚ್ಚರಿಸುತ್ತದೆ, ಯದ್ ಭವಿಷ್ಯೋ ವಿನಶ್ಯತಿ3. ಯಾರು ಮುಂದಾಗುವುದನ್ನು ಸಹಜವೆಂದು ಭಾವಿಸುವರೋ ಅವರು ನಾಶವಾಗುತ್ತಾರೆ.

ಭೀಮ ಮಹಾಭಾರತದಲ್ಲಿ ಒಂದು ಪ್ರಸಂಗದ ಮುಖಾಂತರ ಇದನ್ನು ವರ್ಣಿಸುತ್ತಾನೆ. ಒಂದು ಕೊಳದಲ್ಲಿ ಮೂರು ರೀತಿಯಾದ ಮೀನುಗಳಿದ್ದವು. ಮೊದಲನೆಯದು ಘಟನೆಯ ಮುಂಚೆಯೇ ಮುಂಜಾಗ್ರತಾಕ್ರಮ ತೆಗೆದುಕೊಳ್ಳುತ್ತಿತ್ತು. ಎರಡನೆಯದು ಸನ್ನಿವೇಶಕ್ಕೆ ತಕ್ಕಂತೆ ತಾನು ವರ್ತಿಸುತ್ತಿತ್ತು. ಮೂರನೆಯದು ಏನೂ ಮಾಡದೇ ಸುಮ್ಮನೆ ಇರುತ್ತಿತ್ತು. ಒಂದು ಸಲ ಮೀನುಗಾರರು ಮೀನನ್ನು ಹಿಡಿಯಲು ಕೊಳದ ನೀರನ್ನು ಹೊರಹಾಕುತ್ತಾ ಬಂದರು. ಮೊದಲನೆಯದು ತಾನು ಕೂಡಲೇ ಈ ಕೊಳದಿಂದ ಬೇರೆಡೆ ಸ್ಥಳಾಂತರಿಸುವುದು ಒಳ್ಳೆಯದೆಂದೂ, ಕಷ್ಟ ಒದಗುವುದರೊಳಗೆ ಹೊರಡಬೇಕೆಂದೂ ಯೋಚಿಸಿತು. ಎರಡನೆಯದು ಆ ಕೊಳದಲ್ಲಿ ಇದ್ದು ಸಮಯಬಂದಾಗ ಸರಿಯಾದ ನಿಲುವು ತೆಗೆದುಕೊಂಡರಾಯಿತೆಂದು ಭಾವಿಸಿತು. ಮೂರನೆಯದು ಏನನ್ನೂ ಯೋಚಿಸದೆ ಸುಮ್ಮನೆ ಇದ್ದಿತು. ಮೊದಲನೆಯದು ಕೊಳದಲ್ಲಿ ಸಾಕಷ್ಟು ನೀರಿರುವಾಗಲೇ ಬೇರೆಡೆ ಸ್ಥಳಾಂತರಿಸಿತು. ಎರಡನೆಯದು ಅಲ್ಲೇ ಇದ್ದು ಮೀನುಗಾರರು ಎಲ್ಲಾ ನೀರನ್ನೂ ಬರಿದುಗೊಳಿಸಿ ಎಲ್ಲಾ ಮೀನನ್ನೂ ತಮ್ಮ ಜಾಲದಲ್ಲಿ ಹಾಕುತ್ತಿದ್ದಾಗ ಅದು ಆ ಜಾಲದ ಹಗ್ಗಕ್ಕೆ ಸಿಲುಕಿದಂತೆಯೇ ನದಿಗೆ ಮಿಕ್ಕ ಮೀನುಗಳತ್ತ ಗಮನಹರಿಸುತ್ತಿದ್ದಾಗ ತಪ್ಪಿಸಿಕೊಂಡಿತು. ಮೂರನೆಯದು ಏನನ್ನೂ ಮಾಡದೆ ಅಲ್ಲೇ ಇದ್ದು ಸಾವನ್ನಪ್ಪಿತು.

ಮುಂದಾಲೋಚನೆ ಬಹಳ ಅಪರೂಪವಾದ ಗುಣವಾಗಿದ್ದು ಅದು ಹುಟ್ಟಿನಿಂದಲೇ ಬರುತ್ತದೆ. ಮುನಿಗಳಿಗೂ ದಾರ್ಶನಿಕರಿಗೂ ಅದಿರುತ್ತದೆ. ಅವರಿಗೆ ವರ್ತಮಾನ ಯಾವ

ಪ್ರಭಾವವನ್ನೂ ಬೀರುವುದಿಲ್ಲ. ಅವರು ಮುಂದಾಗುವ ಘಟನೆಗಳನ್ನು ಮಾಡಬಲ್ಲರು. ರಾಮ ಖರನೊಂದಿಗೆ ಕಾಡಿನಲ್ಲಿ ಯುದ್ಧ ಮಾಡುತ್ತಿದ್ದಾಗ ತನ್ನ 14,000 ಯೋಧರೊಂದಿಗೆ ಸೀತೆ ಲಕ್ಷ್ಮಣನೊಂದಿಗೆ ಪರ್ವತದ ಗುಹೆಯಲ್ಲಿ ಆಸರೆ ಪಡೆಯುವಂತೆ ನಿರ್ದೇಶಿಸಿದ, ಏಕೆಂದರೆ ಆ ಪ್ರದೇಶ ಮರಳಿಂದ ಆವೃತವಾಗಿ ಅಲ್ಲಿಗೆ ಬರಲು ಸುಲಭವಾಗಿರಲಿಲ್ಲ. ಆದ್ದರಿಂದ ವಿವೇಕಿಯಾದವನು ಮುಂದಾಗಬಹುದಾದ ಕೆಡುಕನ್ನು ನಿವಾರಿಸಲು ತನ್ನವರ ಒಳಿತಿಗಾಗಿ ಮುಂಚಿತವಾಗಿಯೇ ಸರಿಯಾದ ಕ್ರಮ ಕೈಗೊಳ್ಳಬೇಕು :-

ಅನಾಗತವಿಧಾನಂತು ಕರ್ತವ್ಯಂ ಶುಭಮಿಚ್ಛತಾ ।
ಆಪದಂ ಶಂಕಮಾನೇನ ಪುರುಷೇಣ ವಿಪಶ್ಚಿತಾ ॥[4]

ರಾಮನು ತಾನು ಹಾಗೂ ಲಕ್ಷ್ಮಣನು ರಕ್ಕಸರೊಡನೆ ಹೋರಾಡುತ್ತಿದ್ದಾಗ ಸೀತಾಪಹರಣವಾಗಬಹುದೆಂಬ ಮುಂದಾಲೋಚನೆಯಿಂದ ಕೂಡಿದ್ದನು. ಅವನ ಮುಂದಾಲೋಚನೆಯೇ ಕೆಲವು ರಾಮಾಯಣಗಳ ಪ್ರಕಾರ ಅವನು ಆಶ್ರಮದ ಹೊರಗೆ ಗೆರೆಯನ್ನೆಳಿದಿದ್ದನು. ಆಗಲೇ ಮಾರೀಚನು ಮಾಯಾಮೃಗದಿಂದ ಬಂದು ರಾಮನನ್ನು ನಂಬಿಸಿ ದೂರಸೆಳೆದಾಗ ಸೀತೆ ಆ ರೇಖೆಯಿಂದ ಹೊರಬಂದು ಕಷ್ಟಕ್ಕೀಡಾದುದು.

ಹಿಂದಿನ ಕಾಲದಲ್ಲಿ ಚಂದ್ರಗುಪ್ತನ ಮುಂದಾಲೋಚನೆಯೇ ಸೆಲ್ಯೂಕಸ್‌ನ ಮಗಳನ್ನು ಮದುವೆಯಾಗಲು ಪ್ರೇರೇಪಿಸಿತು. ಅದರಿಂದ ಭಾವೀ ಶತ್ರುವನ್ನು ತನ್ನವನನ್ನಾಗಿ ಮಾಡಿಕೊಂಡುದರ ಫಲವಾಗಿ ನಂದರೊಡನೆ ಅವನು ಕಲಿತು ತನ್ನ ಭದ್ರತೆಗೆ ಭಂಗಬಾರದಂತೆ ಮಾಡಿದನು. ಇದೇ ಮಾದರಿಯನ್ನೇ ಅನುಸರಿಸಿ ಮಧ್ಯಕಾಲದಲ್ಲಿ ಮೊಗಲ ಚಕ್ರವರ್ತಿಗಳು ಹಿಂದೂ ರಜಪೂತ ಹೆಂಗಸರನ್ನು ಮದುವೆಯಾಗಿ ರಾಜ್ಯ ಅವರಿಂದ ದಕ್ಕಿಸಿಕೊಂಡು ಸಾಧ್ಯವಾದಷ್ಟು ಮಟ್ಟಿಗೆ ಶಾಂತಿಯಿಂದಲೇ ರಾಜ್ಯವಾಳಿದರು.

ಆಧುನಿಕ ಕಾಲಕ್ಕೆ ಬರುವುದಾದರೆ, ಪಂಡಿತ್ ನೆಹರೂರವರ ಮುಂದಾಲೋಚನೆಯೇ ಭಾರತ ಕೈಗಾರಿಕೋದ್ಯಮದಲ್ಲಿ ಭದ್ರ ಬುನಾದಿಯನ್ನು ಹಾಕಿತು. ಅದರಿಂದಲೇ ಯುದ್ಧ ಪ್ರಸಂಗದಲ್ಲೂ ಸಹ ಭಾರತ ತನ್ನ ಕೈಗಾರಿಕಾ ರಂಗದಲ್ಲಿ ಮುನ್ನಡೆಯಲು ಸಾಧ್ಯವಾಯಿತು. ನೆಹರೂರವರ ಕಾಲದಲ್ಲೇ ಬೃಹತ್ ಅಣೆಕಟ್ಟುಗಳ ನಿರ್ಮಾಣವಾಯಿತು. ನೀರಿನ ಹಂಪಡೆಯುವಿಕೆಯಿಂದ ವಿದ್ಯುದುತ್ಪಾದನೆಯಾಗಿ ಉಕ್ಕಿನ ಕಾರ್ಖಾನೆಗಳು ಬೃಹದಾಕಾರವಾಗಿ ಬೆಳೆಯಲು ಸಹಕಾರಿಯಾಯಿತು. ಇಂದಿನ ಆರ್ಥಿಕ ಮುನ್ನಡೆ ದೇಶ ಹೊಂದಲು ನೆಹರೂರವರ ಮುಂದಾಲೋಚನೆಯೇ ಕಾರಣವಾಗಿತ್ತು. ಆದರೆ ಸರದಾರ್ ಪಟೇಲ್ ಅದಕ್ಕೆ ವಿರುದ್ಧವಾಗಿ ಕೆಲಸ ಮಾಡಿ 500ಕ್ಕೂ ಹೆಚ್ಚು ರಾಜಮನೆತನಗಳನ್ನು ಒಗ್ಗೂಡಿಸಿದರು. ಬ್ರಿಟೀಷರ ಪ್ರಕಾರ ಅದಕ್ಕೆ ಮೂರು ಐಚ್ಛಿಕತೆಗಳಿದ್ದರೆ ಭಾರತದೊಂದಿಗೆ ಸೇರಲು, ಪಾಕಿಸ್ತಾನದಿಂದ ಸೇರಲು ಅಥವಾ ಸ್ವಾಯತ್ತವಾಗಿರಲು, ಕೊನೆಯ ಎರಡನ್ನು ಒಪ್ಪಿಕೊಂಡರೆ ರಾಜ್ಯಗಳಿಗೆ ಅತೀವ ತೊಂದರೆಯಾಗುತ್ತಿತ್ತು. ಎರಡನೆಯನ್ನು ಒಪ್ಪಿದ ಜುನಾಗರ, ಮೂರನೆಯದನ್ನು ಒಪ್ಪಿದ ಹೈದರಾಬಾದ್ ಅದು ಯೂನಿಯನ್ ಒಂದೇ ಅಂತರ್ಗತವಾಗುವಂತಾಯಿತು.

ಜಾತ್ಯಾತೀತತೆಯ ಮಾರ್ಗ–ರಾಜ್ಯಗಳು ಧರ್ಮ ಅಥವಾ ಜಾತಿಯ ಆಧಾರದ ಮೇಲೆ ಬೇರ್ಪಡಿಸುವುದಿಲ್ಲವೆಂಬ ಮಾತಲ್ಲೂ ಸಹ ನೆಹರೂರವರ ಮುಂದಾಲೋಚನೆಯನ್ನೇ ಪ್ರತಿಪಾದಿಸುತ್ತದೆ. ಹಾಗೆ ಮಾಡದಿದ್ದರೆ ಭಾರತದಲ್ಲಿದ್ದಂತಹ ಅನೇಕ ಧರ್ಮ ಹಾಗೂ ಜಾತಿಗಳು ದೇಶವನ್ನು ಛಿದ್ರವಿಚ್ಛಿದ್ರವಾಗಿ ಮಾಡುವುದೆಂದೂ ನೆಹರೂರವರು ಅರಿತಿದ್ದರು.

ಮುಂದಾಲೋಚನೆಯು ನಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದು ಮತ್ತು ನಮ್ಮ ಪ್ರಚೋದನೆಗೆ ತಕ್ಕಂತೆ ನಡೆಯುವುದೂ ಆಗಿರುತ್ತದೆ. ನಮ್ಮ ವಿರುದ್ಧದವರ ಇಂಗಿತವನ್ನು ಅರಿಯುವುದೂ ಅವರ ಸ್ನೇಹ ಪ್ರವೃತ್ತಿಯಿದ್ದರೂ ಮುಖ್ಯವಾಗುತ್ತದೆ. ಅದು ಒಂದು ಕಾಲದಲ್ಲಿ ಸರಿದೋರಿದರೂ ಸಹ ಕಾಲಾಂತರದಲ್ಲಿ ಅದು ಇಂಗಿತವಾಗಿ ದ್ವೇಷದಲ್ಲಿ ಪರಿಣಾಮ ಹೊಂದಿದರೆ ನಂಬಿದವುಗಳನ್ನು ನಂಬುವಂತಿಲ್ಲ ಎಂಬ ಮಾತು ತಲೆಯೆತ್ತುತ್ತದೆ. ವಿಶ್ವಸ್ತೇಽಪಿನ ವಿಶ್ವಸೇತ್. ಮುಂದಾಲೋಚನೆಯೆಂದರೆ ನಮ್ಮ ದೃಷ್ಟಿಯನ್ನು ಮೇಲಿರಿಸುವುದೂ ಸಹ ಆಗಿರುತ್ತದೆ. ಅದೇ ಜೀವಿತದ ಸಫಲತೆಗೂ ಕಾರಣವಾಗುತ್ತದೆ.

ದೂರದೃಷ್ಟಿಯು ಪ್ರತಿಯೊಬ್ಬ ಯೋಜಕನಿಗೂ, ಗೃಹನಿರ್ಮಾಪಕನಿಗೂ, ವಾಸ್ತುಶಿಲ್ಪಿಗೂ ಇರಬೇಕು. ರಸ್ತೆಗಳು ನಿರ್ಮಿಸಿದಾಗ ಅಂದಿನ ವಾಹನಗಳನ್ನು ಮಾತ್ರವೇ ಗಮನದಲ್ಲಿಟ್ಟು ಕಟ್ಟಬಾರದು. ಐದರಿಂದ ಹತ್ತು ವರ್ಷಗಳವರೆಗೆ ಆ ರಸ್ತೆಯು ಸಂಚಾರವನ್ನು ಪಡೆಯುವಂತಿರಬೇಕು. ಅಣೆಕಟ್ಟುಗಳು, ವಿಮಾನನಿಲ್ದಾಣಗಳು, ಸಾರ್ವಜನಿಕ ಸ್ಥಳಗಳೂ ಹಾಗೆಯೇ.

ಈ ಗ್ರಂಥಕರ್ತ ಪುರಿಯಲ್ಲಿದ್ದಾಗ ಜಗನ್ನಾಥ ವಿಶ್ವವಿದ್ಯಾನಿಲಯ ಆಗತಾನೇ ಸ್ಥಾಪನೆಯಾಗಿತ್ತು. ಅದರ ನಿರ್ಮಾಣಕಾರ್ಯ ಪ್ರಾರಂಭದ ಹಂತದಲ್ಲಿತ್ತು. ಆಗ ಗ್ರಂಥಕರ್ತನ ಸ್ನೇಹಿತ ಜರ್ಮನಿಯಿಂದ ತನ್ನ ಪತ್ನಿಯೊಂದಿಗೆ ಬಂದು ಅಲ್ಲೇ ಸ್ವಲ್ಪ ದಿನ ತಂಗಿದ್ದ. ಒಂದು ದಿನ ಆ ವಿಶ್ವವಿದ್ಯಾನಿಲಯದ ನಕ್ಷೆಯನ್ನು ಗ್ರಂಥಕರ್ತ ಅವರಿಗೆ ತೋರಿಸತೊಡಗಿದ. ಮುಂದಾಗಬಹುದಾದಂತಹ ಗ್ರಂಥಾಲಯದ ನಕ್ಷೆ ತೋರಿಸಿದಾಗ ಮಿತ್ರನ ಹೆಂಡತಿ ಸ್ಟುಟ್‌ಗಾರ್ಟ್‌ನ್ ಕೇಂದ್ರೀಯ ಗ್ರಂಥಾಲಯದ ಮುಖ್ಯ ಗ್ರಂಥಪಾಲಕಿ ಗ್ರಂಥಕರ್ತರಿಂದ ನಕ್ಷೆ ತೆಗೆದುಕೊಂಡು ಆ ಗ್ರಂಥಾಲಯ ಕೇವಲ 50,000 ಅಥವಾ 75,000 ಪುಸ್ತಕವನ್ನು ಮಾತ್ರವೇ ಹೊಂದಲು ಸಾಧ್ಯವೆಂದೂ ಬೆಳೆಯುವಂತಹ ವಿಶ್ವವಿದ್ಯಾನಿಲಯಕ್ಕೆ ಅದು ಏನೇನು ಸಾಲದೆಂದೂ ಅದಕ್ಕೆ ಹೆಚ್ಚಿನ ಸ್ಥಳನೀಡಬೇಕೆಂದೂ ತಿಳಿಸಿದಳು. ತದನಂತರದ ದಿನವೇ ಮುಖ್ಯಮಂತ್ರಿಯು ವಿಶ್ವವಿದ್ಯಾಲಯದ ಬಗ್ಗೆ ಒಂದು ಗೋಷ್ಠಿಯನ್ನಿಟ್ಟಾಗ ಈ ಅಂಶವನ್ನೇ ಗ್ರಂಥಕರ್ತರು ಮುಂದಿಟ್ಟರು. ಕೂಡಲೇ ಆ ಗ್ರಂಥಾಲಯದ ಮುಖ್ಯ ವಾಸ್ತುಶಿಲ್ಪಿ ಅದೇ ತನ್ನ ಅಭಿಪ್ರಾಯವೂ ಆಗಿತ್ತೆಂದೂ ಅದರಿಂದ ಕುಪಿತನಾದ ಮುಖ್ಯಮಂತ್ರಿ ಅದನ್ನು ಬದಲಾಯಿಸಬೇಕೆಂದು ಹೇಳಿದುದಲ್ಲದೆ ಅರ್ಧ ಮಿಲಿಯನ್ ಪುಸ್ತಕಗಳಿಗಾದರೂ ಅವಕಾಶ ಮಾಡಿಕೊಡಬೇಕೆಂದರು. ಅದು ಅವರ ಮುಂದಾಲೋಚನೆಯಾಗಿತ್ತು.

---

ಆಕರಗಳು

1) 3.24.11 2) 1.37.1. 3) ರಾಮಾಯಣ.3.24.11.

# 14. ದೃಢಸಂಕಲ್ಪ

ಯಾವುದಾದರೂ ಧ್ಯೇಯವನ್ನು ಸಾಧಿಸಲು ದೃಢಸಂಕಲ್ಪ ಅತ್ಯವಶ್ಯಕವಾದುದು. ಯಾವಾಗ ಮಾನವ ಏನನ್ನಾದರೂ ಮಾಡಲು ನಿರ್ಧರಿಸುತ್ತಾನೋ ಆದರಿಂದ ಅವನನ್ನು / ಅವಳನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಕಾಳಿದಾಸ ಈ ಮಾತನ್ನು ಮೇನೆಯ ಮುಖಾಂತರ ಪಾರ್ವತಿ ಶಿವನನ್ನೊಲಿಸಲು ತಪಸ್ಸು ಬೇಡ ಎಂಬ ಹೇಳಿಕೆಯನ್ನು ಉದ್ಧರಿಸುತ್ತಾನೆ – ಕ ಈಪ್ಸಿತಾರ್ಥಸ್ಥಿರನಿಶ್ಚಯಂ ಮನಃ ಪಯಶ್ಚನಿಮ್ನಾಭಿ ಮುಖಂ ಪ್ರತೀಪಯೇತ್[1] ಯಾರ ಮನಸ್ಸು ಇಷ್ಟಾರ್ಥ ವಸ್ತುವಿನ ಬಗ್ಗೆ ನಿಶ್ಚಯಗೊಂಡಿದೆಯೇ, ಕೆಳಮುಖವಾಗಿ ಹರಿಯುವ ನೀರಿನ ಗತಿಯನ್ನು ಯಾರಿಂದ ತಾನೇ ನಿಲ್ಲಿಸಲು ಸಾಧ್ಯ?

ಆದರೆ ಇದಕ್ಕೆ ಗಟ್ಟಿ ಹೃದಯವಿರಬೇಕು. ಯಾವುದಾದರೂ ನಿರ್ಧಾರ ಕೈಗೊಂಡರೆ ಅದನ್ನು ಸಾಧಿಸುವ ತನಕ. ಏನೇ ಆದರೂ ಹಿಂದಕ್ಕೆ ಬಾರದಂತಹ ದೃಢಸಂಕಲ್ಪವಿರಬೇಕು. ಈ ವಿಷಯಕ್ಕೆ ನಮ್ಮ ಸಾಹಿತ್ಯದಲ್ಲಿ ಉದಾಹರಣೆಗಳಿವೆ. ಉದಾಹರಣೆಗೆ ಚಿಕ್ಕಬಾಲಕ ನಚಿಕೇತ ಯಮನಿಂದ ಅನೇಕ ಪ್ರಲೋಭನೆಗಳನ್ನೊಡ್ಡಿದ್ದಾಗ್ಯೂ ಸಹ – ನೂರು ವರ್ಷದ ವರೆಗೆ ಮಕ್ಕಳನ್ನೂ, ಮೊಮ್ಮಕ್ಕಳನ್ನೂ ಕಾಣುವಂತೆ, ಪ್ರಾಣಿಗಳು, ಚಿನ್ನ, ಕುದುರೆಗಳು, ಸುಂದರ ಅಪ್ಸರೆಯರು ಸಾಮಾನ್ಯ ಮಾನವರಿಗೆ ಸಿಗದಂತಹವರು ಆಗುವವರೆಂದು ನಚಿಕೇತ ತನ್ನ ನಿರ್ಧಾರ ಬದಲಿಸದೆ ಯಾವ ಪ್ರಲೋಭನೆಗಳಿಗೂ ಒಳಗಾಗದೆ ಧೈರ್ಯವಾಗಿ ಕೇಳುತ್ತಾನೆ. ಮಾನವರು ಸತ್ತಾಗ ಅವರು ಮತ್ತೆ ಹುಟ್ಟುತ್ತಾರೋ, ಅಥವಾ ಇಲ್ಲವೋ ಈ ನಿನ್ನ ಕುದುರೆಗಳೂ, ಅಪ್ಸರೆಯರೂ ನಿನ್ನಲ್ಲೇ ಇರಲಿ – ತವೈವ ವಾಹಾಸ್ತವ ನೃತ್ಯಗೀತೆ.[2] ಅದಕ್ಕಿಂತ ಭಿನ್ನವಾದ ಯಾವುದಕ್ಕೂ ನಚಿಕೇತ ಮಣೆಯಲಿಲ್ಲ – ನಾನ್ಯಂ ತಸ್ಮಾನ್ ನಚಿಕೇತಾ ವೃಣೀತೇ[3]. ನಚಿಕೇತ ಮತ್ತಾವುದನ್ನೂ ಸಹ ಬಯಸುವುದಿಲ್ಲ. ಯಮ ನಚಿಕೇತನಿಗೆ ಮಣಿದು ಆತ್ಮನ ನಿತ್ಯತ್ವವನ್ನು ಪ್ರತಿಪಾದಿಸಿ ಸಹಸ್ರಾರು ಮಂದಿಗೆ ಬರಬಹುದಾದ ಶಂಕೆಯನ್ನೂ ನಿವಾರಣೆ ಮಾಡಿದನು.

ಸಾವಿತ್ರಿಯ ವಿಷಯದಲ್ಲೂ ಸಹ ಯಮನೇ ಮಣಿಯಬೇಕಾಯಿತು.ಅವಳು ಅವನನ್ನನುಕರಿಸಿ ಒಂದಾದ ಮೇಲೊಂದರಂತೆ ವರಗಳನ್ನೂ ಪಡೆದಳು. ಅನಂತರ ತನ್ನ ಮಾತಲ್ಲೇ ಅವನನ್ನು ಕಟ್ಟಿಹಾಕಿ ತನ್ನ ಗಂಡನ ಪ್ರಾಣವನ್ನು ಹಿಂಪಡೆದಳು.

ಎಲ್ಲಾ ಅನ್ವೇಷಕರೂ ಹಾಗೂ ಸಂಶೋಧಕರೂ ತಮ್ಮ ಅನ್ವೇಷಣಾ ಕಾರ್ಯದಲ್ಲಿ ಅನೇಕ ತೊಂದರೆಗಳನ್ನನುಭವಿಸಬೇಕಾಯಿತು. ಅವರ ನಂಬಿಕೆ ಮತ್ತು ಶ್ರದ್ಧೆ ಅವರನ್ನು ಕೊನೆಯ ತನಕ ಹುರಿದುಂಬಿಸಿತು. ಯಾರು ವನ್ಯಜೀವಿಗಳ ಬಗ್ಗೆ ಅಥವಾ ನೀರಿನ ಜೀವಿಗಳ ಬಗ್ಗೆ ಅಧ್ಯಯನ ನಡೆಸಿದರೋ, ಅಥವಾ ದಟ್ಟವಾದ ಕಾಡುಗಳಲ್ಲಿ ಅಲೆದಾಡುತ್ತಾ ಗಿಡಬಳ್ಳಿಗಳ ಬಗ್ಗೆ ಕ್ರೂರ ಪ್ರಾಣಿಗಳನ್ನೂ ಲೆಕ್ಕಿಸದೆ ಅನ್ವೇಷಿಸಿದರೋ ಅವರು ತಮ್ಮ ಶ್ರದ್ಧೆ ಹಾಗೂ ನಂಬಿಕೆಯಿಂದಲೇ ಕಾರ್ಯಸಾಧನೆ ಮಾಡಿದರು. ಇದೇ ವಿಷಯ ವಲಸೆ ಬಂದವರೂ ನೌಕಾಯಾನ ತಜ್ಞರೂ ಸಹ ಜನವಿಲ್ಲದ ಪ್ರದೇಶಗಳನ್ನು ಗುರುತಿಸಿ ಅಲ್ಲಿ ಇರುವಂತೆ ಮಾಡಲು ಅಲ್ಲಿ ತರಿಸಿದ್ದಂತಹ ಕ್ರೂರಬುಡಕಟ್ಟು ಜನಾಂಗದವರನ್ನೂ ಎದುರಿಸಬೇಕಾಯಿತು.

ದೃಢನಂಬಿಕೆ ಹಾಗೂ ವಿಶ್ವಾಸದಿಂದ ಮುಂದುವರೆದು ತಮ್ಮ ಗುರಿಸಾಧಿಸಿದವರ ಬಗ್ಗೆ ಭಾರತೀಯ ಸಾಹಿತ್ಯಕ ಹಳೆಯ ದಾಖಲೆಗಳ ಸಂರಕ್ಷಣಾಗಾರ ಬೆಳಕನ್ನು ಚೆಲ್ಲುತ್ತದೆ. ಏಕಲವ್ಯ ದ್ರೋಣಾಚಾರ್ಯರ ಮೂರ್ತಿಯನ್ನೇ ಮುಂದಿಟ್ಟುಕೊಂಡು ತನ್ನ ಶ್ರದ್ಧೆ ವಿಶ್ವಾಸಗಳಿಂದಲೇ ಶ್ರೇಷ್ಠ ಬಿಲ್ಲುಗಾರನಾದ. ಅವನು ದ್ರೋಣರನ್ನು ಮಾನಸಿಕ ಗುರುವಾಗಿ ಸ್ವೀಕರಿಸಿದ್ದರೂ ಸಹ ಬಿಲ್ವಿದ್ಯೆಯಲ್ಲಿ ಅವನಿಗೆ ಯಾವುದೇ ರೀತಿಯಾದ ತರಬೇತಿ ಇರಲಿಲ್ಲ. ಅವನ ಸತತ ಅಭ್ಯಾಸ ಹಾಗೂ ನಂಬಿಕೆ ಶ್ರದ್ಧೆಗಳೇ ಅವನನ್ನು ದ್ರೋಣರ ಪ್ರಿಯಶಿಷ್ಯನಾದ ಅರ್ಜುನನನ್ನು ಬಿಲ್ವಿದ್ಯೆಯಲ್ಲಿ ಹಿಮ್ಮೆಟ್ಟುವಂತೆ ಆಯಿತು.

ಇನ್ನೊಂದು ಉದಾಹರಣೆಯೆಂದರೆ ಗಣಿತಜ್ಞ ಹಾಗೂ ಖಗೋಳಶಾಸ್ತ್ರಜ್ಞನಾದ ಭಾಸ್ಕರಾಚಾರ್ಯನ ಮಗಳಾದ ಲೀಲಾವತಿ. ಅವನು ಮದುವೆಯಾದ ಕೂಡಲೇ ತನ್ನ ಮಗನನ್ನು ಕಳೆದುಕೊಂಡಿದ್ದನು. ಅದು ಅವಳಿಗೆ ಬಹಳವಾಗಿ ದುಃಖವನ್ನುಂಟು ಮಾಡಿತ್ತು. ಅವಳು ಕಳೆಗುಂದಿ ಯಾವಾಗಲೂ ಅಳುತ್ತಿದ್ದಳು. ಅದನ್ನು ತಿಳಿದು ಭಾಸ್ಕರಾಚಾರ್ಯ ಅವಳನ್ನು ಅತ್ತೆ ಮಾವಂದಿರ ಮನೆಯಿಂದ ತನ್ನ ಮನೆಗೆ ಕರೆತಂದ. ಅಲ್ಲೂ ಅವಳು ಸತತವಾಗಿ ದುಃಖಿತಳಾಗಿ ಅಳುತ್ತಿದ್ದಳು. ಒಂದು ದಿನ ಭಾಸ್ಕರಾಚಾರ್ಯ ಅವಳಿಗೆ ಹೇಳಿದ – ನೀನು, ಇದೇ ರೀತಿ ಮುಂದುವರೆದರೆ ನಿನ್ನ ಜೀವನವನ್ನೇ ಹಾಳುಮಾಡಿಕೊಳ್ಳುವೆ. ಅವಳಿಗೆ ಯಾವುದೋ ವಿಷಯಾಂತರವಿರಬೇಕು. ಅವನು ಅವಳಿಗೆ ಅಂಕಗಣಿತ ಕಲಿಯುವಂತೆ ತಿಳಿಸಿದ. ಶ್ರೇಷ್ಠ ಗುರುವಾದ ಭಾಸ್ಕರಾಚಾರ್ಯ ಅಂಕಗಣಿತ ಬೋಧಿಸಲಾರಂಭಿಸಿದ. ಸ್ವಲ್ಪ ಕಾಲಾನಂತರ ಅವಳಿಗೆ ಅದರಲ್ಲಿ ಅಭಿರುಚಿಯುಂಟಾಯಿತು. ಅನೇಕ ಸಮಸ್ಯೆಗಳನ್ನು ತಾನೇ ಪರಿಹರಿಸಲಾರಂಭಿಸಿದಳು. ಅಷ್ಟೇ ಅಲ್ಲದೆ ಕೆಲವು ಸಿದ್ಧಾಂತಗಳನ್ನು ಸ್ಥಾಪಿಸಿದಳು. ತನ್ನ ತಂದೆಯ ಸಂಶೋಧನೆಯಲ್ಲಿ ಸಹಕರಿಸಿದಳು. ಅವನು ಇದರಿಂದ ಅತ್ಯಂತ ಪ್ರೀತಿಗೊಂಡು ಆ ಗ್ರಂಥಕ್ಕೆ ಅವಳ ಹೆಸರನ್ನೇ ಇಟ್ಟನು. ಲೀಲಾವತಿ ಹಿಂದಿನ ಭಾರತದ ಪ್ರಮುಖ ಗಣಿತ ಗ್ರಂಥ. ಅವಳ ಎಡಬಿಡದ ಪರಿಶ್ರಮ ಹಾಗೂ ಶ್ರದ್ಧೆಯೇ ಅವಳು ತನ್ನ ಕಾರ್ಯದಲ್ಲಿ ಸಫಲವಾಗುವಂತೆ ಮಾಡಿತು.

ಯಾರಾದರೂ ಸ್ವಲ್ಪವಾದರೂ ಜೀವನದಲ್ಲಿ ಸಾಧಿಸಿದ್ದವರಿದ್ದರೆ ಅವರಿಗೆ ದೃಢಸಂಕಲ್ಪವಿರಬೇಕು. ಅದು ಆತ್ಮಕಥೆ ಅಥವಾ ಅಸಂಬದ್ಧವಾಗಿ ತೋರಿದರೂ ಈ ಗ್ರಂಥಕರ್ತನ ವಯಕ್ತಿಕ ಅನುಭವವನ್ನು ಹೇಳಬೇಕು. ಶಾಸ್ತ್ರೀ ಪರೀಕ್ಷೆಯಲ್ಲಿ ಉತ್ತೀರ್ಣನಾಗುವತನಕ ಆಂಗ್ಲಭಾಷೆ ಜ್ಞಾನವಿರಲಿ, ಆಂಗ್ಲ ಅಕ್ಷರಗಳ ಜ್ಞಾನವೂ ಇರಲಿಲ್ಲ. ಲಾಹೋರಿನ ಓರಿಯಂಟಲ್ ಕಾಲೇಜಿನಿಂದ ನೇರವಾಗಿ ಡಿ.ಎ.ವಿ. ಪ್ರೌಢಶಾಲೆಯ ಒಂಭತ್ತನೆಯ ತರಗತಿಗೆ ಸೇರ್ಪಡಿಸಲಾಯಿತು. ಕೇವಲ ಹದಿನಾರು ತಿಂಗಳಲ್ಲಿ ಆಂಗ್ಲಭಾಷೆ ಕಲಿತು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಆಂಗ್ಲ ಮಾಧ್ಯಮದಲ್ಲೇ ಬರೆದು ಸರಕಾರದ ವಿದ್ಯಾರ್ಥಿ ವೇತನವನ್ನು ಪಡೆಯುವಂತಾಯಿತು – ಅದೇ ದೃಢಸಂಕಲ್ಪವೇ ವಾರಣಾಸಿಯಲ್ಲಿದ್ದಾಗ ಕ್ಲಿಷ್ಟಕರವಾದ ವ್ಯಾಕರಣಗ್ರಂಥಾಧ್ಯಯನದಲ್ಲೂ ಸಹಕರಿಸಿತು.

ಕೆಲವು ಘಟನೆಗಳಲ್ಲಿ ದೃಢಸಂಕಲ್ಪವೇ ಅತೀವ ಬುದ್ಧಿವಂತಿಕೆಗಿಂತಲೂ ಒಳ್ಳೆಯದಾಗಬಹುದು. ಇಲ್ಲಿ ಭೋಜದೇವನ ಕಥೆ ಪ್ರಸ್ತುತವಾಗುತ್ತದೆ. ಅವನು ಒಳ್ಳೆಯ

ವಿದ್ಯಾರ್ಥಿಯಾಗಿರದೆ, ಗುರುಗಳು ಹೇಳಿದ ಪಾಠವನ್ನು ಗ್ರಹಿಸಲು ಅಸಮರ್ಥನಾಗಿದ್ದನು. ಒಂದು ದಿನ ಕೆಲವು ಮಹಿಳೆಯರು ಬಾವಿಯಿಂದ ನೀರನ್ನು ಮಣ್ಣಿನ ಹೂಜಿಯಿಂದ ಸೇದುತ್ತಿದ್ದುದನ್ನು ನೋಡಿದನು. ಆ ಹೂಜಿಯಲ್ಲಿ ತೂತುಗಳು ಹೇಗಾಯಿತೆಂದು ಅವರನ್ನು ಅವನು ಕೇಳಿದಾಗ ಅವರು ಹೇಳಿದರು – ಹೂಜಿಯನ್ನು ಒಂದು ದಿಕ್ಕಿನೆಡೆ ಗುರಿಮಾಡಿ ಮತ್ತೆ ಮತ್ತೆ ಮುಳುಗಿಸುವುದರಿಂದ ಅದರಲ್ಲಿ ತೂತಾಗಿದೆ ಎಂದು. ನಿರ್ಜೀವವಾದ ಭೂಮಿಯು ಕೆಲವು ವಸ್ತುಗಳನ್ನು ಇಡುವುದರಿಂದ ಮುಳುಗುವುದಾದರೆ ಆ ಸಾರವು ನನ್ನಲ್ಲಿ ನಿಲ್ಲುವುದಿಲ್ಲವೇ ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡನು. ತನ್ನ ಹೆಜ್ಜೆ ಹಿಂದೆ ಹಾಕಿ ತನ್ನ ಗುರುವಿನ ಬಳಿಬಂದು ದೃಢಸಂಕಲ್ಪದಿಂದ ಗುರುಕಲಿಸಿದ್ದನ್ನೆಲ್ಲಾ ಸ್ಮರಣೆಗೆ ತಂದುಕೊಂಡನು. ಅದರಿಂದ ಅವನು ಪಾಠ ಕಲಿಯುವಂತಾಯಿತು ಮುಂದೆ ಅವನೇ ಸುಪ್ರಸಿದ್ಧ ವಯ್ಯಾಕರಣಿ ಆದ.

ಈ ಘಟನೆ ದೃಢಸಂಕಲ್ಪವನ್ನು ಪ್ರತಿಪಾದಿಸುತ್ತದೆ. ಒಬ್ಬ ರಾಜನಿಗೆ ಮಕ್ಕಳಿರಲಿಲ್ಲ. ಅವನು ಯಾವಾಗಲೂ ತನಗೆ ಉತ್ತರಾಧಿಕಾರಿಯಿಲ್ಲವೆಂದು ಖಿನ್ನನಾಗಿದ್ದನು. ಅವನ ಮಂತ್ರಿ ರಾಜಗುರುವನ್ನು ಸಂಪರ್ಕಿಸಿ ಉತ್ತರಾಧಿಕಾರಿ ನೇಮಿಸುವಂತೆ ಹೇಳಿದ. ರಾಜಗುರು ಒಂದು ವಸ್ತುಪ್ರದರ್ಶನವನ್ನೇರ್ಪಡಿಸಬೇಕೆಂದೂ ಅಲ್ಲಿ ಅವನಿದ್ದರೂ ಸುಲಭವಾಗಿ ಸಿಗುವಂತಿರಬಾರದೆಂದೂ ಹೇಳಿದ. ರಾಜನು ಒಂದು ಬೃಹತ್ತಾದ ಮೈದಾನದಲ್ಲಿ ವಸ್ತುಪ್ರದರ್ಶನವನ್ನೇರ್ಪಡಿಸಿದ. ವೈವಿಧ್ಯಮಯವಾದ ಅಂಗಡಿಗಳು ಇಲ್ಲಿ ಬಂದವು. ಆ ಅಂಗಡಿಗಳು ಉದ್ಘಾಟನೆಯಾದ ಒಂದು ಘಂಟೆಯೊಳಗೆ ಯಾರಾದರೂ ಅಲ್ಲಿಗೆ ಬಂದು ತಮ್ಮ ಇಷ್ಟವಾದ ವಸ್ತುವನ್ನು ಉಚಿತವಾಗಿ ತೆಗೆದುಕೊಂಡು ಹೋಗಬಹುದೆಂದೂ ಘೋಷಿಸಲಾಯಿತು. ಅನಂತರ ಬಂದವರು ಆ ವಸ್ತುವಿನ ನಾಲ್ಕು ಪಟ್ಟು ಬೆಲೆ ಕೊಡಬೇಕು. ರಾಜನೂ ಆ ಪ್ರದರ್ಶನದಲ್ಲಿ ಎಲ್ಲೋ ಅವಿತುಕೊಂಡಿರುವನು. ಯಾರಾದರೂ ಅವನನ್ನು ಗುರುತಿಸಿದರೆ ಅವರೇ ಉತ್ತರಾಧಿಕಾರಿಯಾಗುವರು. ದೊಡ್ಡ ಜನಸಂದಣಿಯೇ ಅಲ್ಲುಂಟಾಯಿತು. ಎಷ್ಟಾದರೆ ಅಷ್ಟು ವಿನಾ ಶುಲ್ಕ ತೆಗೆದುಕೊಂಡು ಹೋಗಲು ಸಂದಣಿಯುಂಟಾಯಿತು. ಒಬ್ಬ ಯುವಕ ಮಾತ್ರ ಅಲ್ಲಿದ್ದ ಯಾವ ವಸ್ತುವನ್ನೂ ಗಮನಿಸದೆ ಕೇವಲ ರಾಜನನ್ನೇ ತದೇಕಚಿತ್ತವಾಗಿ ಹುಡುಕುತ್ತಿದ್ದ. ಅವನ ಏಕಾಗ್ರತೆ ಫಲಕಾರಿಯಾಯಿತು. ಒಂದು ಗುಹೆಯಲ್ಲಿ ಅವಿತಿದ್ದ ರಾಜನನ್ನು ಅವನು ನೋಡಿದ್ದರಿಂದ ಕರಾರಿನಂತೆ ಅವನಿಗೆ ಉತ್ತರಾಧಿಕಾರ ಪಟ್ಟ ದೊರೆಯಿತು.

ದೃಢಸಂಕಲ್ಪಕ್ಕಿರುವ ಮತ್ತೊಂದು ನಿದರ್ಶನವೆಂದರೆ ರಷ್ಯಾದೇಶದ ವಿಮಾನಚಾಲಕನಾದ ಅಶ್ವೇನ್. ಅವನ ದೈಹಿಕ ನೈಪುಣ್ಯತೆ ಎಲ್ಲರನ್ನೂ ಆಚ್ಚರಿಗೊಳಿಸುತ್ತಿತ್ತು. ಒಂದು ದಿನ ದುರದೃಷ್ಟವಶಾತ್ ಅವನ ವಿಮಾನ ಅನಿರೀಕ್ಷಿತ ತೊಡಕಿನಿಂದ ಒಂದು ದಿಣ್ಣೆಗೆ ತಗುಲಿತು. ಅದರಿಂದ ಅವನಿಗೆ ತೀವ್ರ ನೋವುಂಟಾಯಿತು. ಅವನ ಎರಡು ಕಾಲುಗಳನ್ನೂ ಕತ್ತರಿಸಬೇಕಾಯಿತು. ಅವನ ಪ್ರಾಣ ಉಳಿಸಲು ಅವನ ಮನೆಯವರಿಗೆ ಹಾಗೂ ಮಿತ್ರರಿಗೆ ಅವನನ್ನು ಈ ರೀತಿ ನೋಡಲು ಅತೀವ ಕಷ್ಟವಾಯಿತು. ಅವನ ಒಬ್ಬ ಮಿತ್ರ ನುಡಿದ –

ಅಶ್ವೇನ್. ಇಂದಿನಿಂದ ನೀನು ವಿಮಾನ ನಡೆಸುವುದನ್ನು ನಾವು ನೋಡಲಾರೆವು. ಅದಕ್ಕೆ ಅಶ್ವೇನ್ ನೀವು ನನ್ನನ್ನು ಮತ್ತೆ ವಿಮಾನ ನಡೆಸುವುದನ್ನು ನೋಡುವಿರಿ ಎಂದ. ಅದನ್ನು ಅವನ ಮಿತ್ರರು ಸುಳ್ಳೆಂದೂ ತನಗೆ ತಾನೇ ಮೋಸಮಾಡಿಕೊಳ್ಳುತ್ತಿರುವನೆಂದೂ ಭಾವಿಸಿದರು. ಆದರೆ ಅದು ಹಾಗಿರಲಿಲ್ಲ. ಅವನು ಕೃತಕ ಕಾಲಿನ ಸಹಾಯದಿಂದ ನಡೆಯಲಾರಂಭಿಸಿದನು. ಮೊದಲು ಒಂದು ಕೋಲಿನ ಸಹಾಯದಿಂದ ನಂತರ ಅದೂ ಇಲ್ಲದೆಯೇ ಕೂಡಲೇ ತಾನು ಒಂದು ವಿಮಾನವನ್ನು ಚಾಲಿಸುವುದಾಗಿಯೂ ಹೇಳಿದ. ಕೊನೆಗೆ ತನ್ನ ಕೃತಕ ಕಾಲುಗಳಿಂದಲೇ ಅವನು ವಿಮಾನವನ್ನೂ ಚಾಲಿಸಿದ.

ಚರಿತ್ರೆ ದೃಢಸಂಕಲ್ಪದ ವಿಷಯಕವಾಗಿ ಅನೇಕ ನಿದರ್ಶನಗಳನ್ನು ನೀಡುತ್ತದೆ. ಒಂದು ನಿದರ್ಶನವೆಂದರೆ ಆಲ್ಬರ್ಟ್ ಐನ್‌ಸ್ಟೀನ್‌ನ ವಿಷಯ. ಅವನು ಅತ್ಯಂತ ಬಡತನದಿಂದ ತನ್ನ ಜೀವನ ಪ್ರಾರಂಭಿಸಿದರೂ ಕೊನೆಗೆ ಅವನು ಮಾಡಿದ ಅನ್ವೇಷಣೆಗಳಿಂದ ಚರಿತ್ರೆಯೇ ಬದಲಿಸುವಂತಾಯಿತು.

19ನೇ ಶತಮಾನದ ಒಂದು ಬಡಕುಟುಂಬದಲ್ಲಿ ಆಲ್ಬರ್ಟ್ ಐನ್‌ಸ್ಟೀನ್ ಜನಿಸಿದ. ಅವನು ಅತ್ಯಂತ ನಿರ್ಗತಿಕನಾಗಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದ. ಆದರೆ ಪ್ರಾರಂಭದಿಂದಲೇ ಅವನು ಅತ್ಯಂತ ಆಸೆಯುಳ್ಳವನಾಗಿದ್ದು ಚುರುಕುಬುದ್ಧಿಯುಳ್ಳವನಾಗಿದ್ದ. ಅವನು ತನ್ನ ಗುರಿಯನ್ನು ಮುಟ್ಟುವವರೆಗೆ ನಿಲ್ಲಿಸುತ್ತಿರಲಿಲ್ಲ. ಸಂಕಲ್ಪವೇ ಅವನ ನಿಜವಾದ ಶಕ್ತಿಯಾಗಿ ಪ್ರಪಂಚದ ಶ್ರೇಷ್ಠ ವಿಜ್ಞಾನಿಗಳಲ್ಲಿ ಒಂದಾದ.

ದೃಢಸಂಕಲ್ಪಕ್ಕೆ ತನ್ನದೇ ಆದ ಶಕ್ತಿಯಿದೆ. ಅದರಿಂದ ಅತ್ಯಂತ ಕಷ್ಟಕರ ಸನ್ನಿವೇಶಗಳಲ್ಲೂ ಕಷ್ಟವನ್ನೇ ಅವಕಾಶವನ್ನಾಗಿ ಮಾರ್ಪಡಿಸಿಕೊಳ್ಳಬಹುದು. ಇಲ್ಲಿ ನಿರೂಪಿಸಿರುವ ಕಥೆ ಅದಕ್ಕೆ ನಿದರ್ಶನವಾಗಬಲ್ಲದು. ಒಂದು ಹಳ್ಳಿಯಲ್ಲಿ ಒಬ್ಬ ಮುದುಕನಿದ್ದ. ಅವನು ಆಲೂಗಡ್ಡೆಗಳನ್ನು ತನ್ನ ತೋಟದಲ್ಲಿ ಬೆಳೆಯಲು ಬಯಸುತ್ತಿದ್ದ ಆದರೆ ಅದು ಅತ್ಯಂತ ಕಷ್ಟಕರವಾಗಿತ್ತು. ಅವನಿಗೆ ಸಹಕರಿಸಬಹುದಾದಂತಹ ಒಬ್ಬನೇ ಮಗ ಕಾರಾಗೃಹದಲ್ಲಿದ್ದ. ಆ ಮಗನಿಗೆ ಪತ್ರ ಬರೆದು ಮುದುಕ ತಿಳಿಸಿದ.

ಎಲೈ ಮಗನೇ, ವರ್ಷವೂ ನನ್ನ ತೋಟದಲ್ಲಿ ಆಲೂಗಡ್ಡೆ ಬೆಳೆಯಲು ಸಾಧ್ಯವಾಗದಿರುವುದರಿಂದ ನನಗೆ ಅತ್ಯಂತ ಬೇಸರವಾಗಿದೆ. ನಿನ್ನಮ್ಮನಿಗೆ ಇದು ಇಷ್ಟವಾಗಿದ್ದರಿಂದ ಅದನ್ನು ಮಾಡಲಾಗದೆ ನನಗೆ ಬೇಸರ ತಂದಿದೆ. ನಾನು ಉಳುವುದಕ್ಕೆ ವೃದ್ಧನಾಗಿರುವೆ. ನೀನು ಇಲ್ಲದಿದ್ದರೆ ನನಗೆ ತೊಂದರೆಯಿರುತ್ತಿರಲಿಲ್ಲ. ಕೂಡಲೇ ಕಾರಾಗೃಹದಲ್ಲಿದ್ದ ತನ್ನ ಮಗನಿಂದ ಮುದುಕ ಒಂದು ತಂತಿವಾರ್ತೆಯನ್ನು ಪಡೆದ – "ತಂದೆ ಈ ಭೂಮಿಯನ್ನು ಅಗೆಯಬೇಡ, ನಾನು ನನ್ನ ಬಂದೂಕನ್ನು ಅಲ್ಲೇ ಮುಚ್ಚಿಟ್ಟಿರುವೆ. ಮರುದಿನ ಬೆಳಿಗ್ಗೆ ನಾಲ್ಕು ಘಂಟೆಗೆಲ್ಲಾ ರಕ್ಷಣಾಧಿಕಾರಿಗಳು ಬಂದು ಆ ತೋಟವನ್ನೆಲ್ಲಾ ಅಗೆದರು. ಆದರೆ ಅವರಿಗೆ ಬಂದೂಕು ಸಿಗಲಿಲ್ಲ. ಇದರಿಂದ ಅನಿಶ್ಚಿತನಾದ ಮುದುಕ ನಡೆದದ್ದನ್ನೆಲ್ಲಾ ವಿವರಿಸಿ ಈಗೇನು ಮಾಡಬೇಕೆಂದು ಮಗನಿಗೆ ಮತ್ತೆ ಪತ್ರ ಬರೆದ. ಅದಕ್ಕೆ

ಅವನ ಉತ್ತರ ಇಂತಿತ್ತು – ಈಗ ನೀನು ಆಲೂಗಡ್ಡೆಯನ್ನು ನೆಡು. ಇಲ್ಲಿಂದ ನಾನು ನಿನಗೆ ಮಾಡಬಹುದಾದ ಅತ್ಯುತ್ತಮ ಕಾರ್ಯವೆಂದರೆ ಅದೇ''.

ಕಥೆಯ ನೀತಿಯೆಂದರೆ – ನೀವು ವಿಶ್ವದ ಯಾವುದೇ ಭಾಗದಲ್ಲಿದ್ದರೂ ಸಹ ಏನನ್ನಾದರೂ ಮಾಡಲೇಬೇಕೆಂದು ನಿಶ್ಚಯಿಸಿದ್ದರೆ ಅದನ್ನು ಮಾಡಿ ಸಾಧಿಸಬಹುದು. ನಿಮ್ಮ ಮನಸ್ಸಿನ ಚಿಂತನೆ ಮುಖ್ಯವೇ ಹೊರತು ನೀವು ಎಲ್ಲಿ ಇದ್ದೀರೆಂಬುದಲ್ಲ. ಕತ್ತಲೆಯನ್ನು ಸೃಷ್ಟಿಸುವುದಕ್ಕಿಂತಲೂ ಒಂದು ಮೇಣದ ಬತ್ತಿಯನ್ನು ಉರಿಯುವಂತೆ ಮಾಡುವುದೇ ಲೇಸು.

ಸುಪ್ರಸಿದ್ಧ ಚಿಂತಕರಾದ ಮೌಲಾನ ವಹೀದುದ್ದೀನ್ ಖಾನ್ 6.12.2012ರಲ್ಲಿ ಪ್ರಕಟವಾದ ಟೈಮ್ಸ್ ಆಫ್ ಇಂಡಿಯಾದ ಒಂದು ಅಂಕಣದಲ್ಲಿ ಮನೋದಾರ್ಢ್ಯ ಹಾಗೂ ದೃಢಸಂಕಲ್ಪಕ್ಕೆ ಒಂದು ನಿದರ್ಶನ ನೀಡುತ್ತಾರೆ. ಆವರು ಬರೆಯುತ್ತಾರೆ – ಸ್ವಲ್ಪಕಾಲದ ಹಿಂದೆ ಮಧ್ಯ ಆಫ್ರಿಕಾದ ರ್‍ವಾಂಡದ ರಾಜಧಾನಿಯಾದ ಕಿಗಲಿಯಲ್ಲಿ ಕೆಲವು ದಿನ ಕಳೆದೆ. ಆಗ ಅಲ್ಲಿ ನೆಲೆಸಿದ್ದ ಒಬ್ಬ ಗುಜರಾತಿ ಪುರುಷ ಅಲ್ಲೊಂದು ಬಟ್ಟೆಯಂಗಡಿ ಇಟ್ಟಿದ್ದ.

ನಾನು ಅವನನ್ನು ಒಂದು ಸಲ ಭೇಟಿಯಾದಾಗ ಅವನು ನಿರರ್ಗಳವಾಗಿ ಒಳ್ಳೆಯ ಆಂಗ್ಲಭಾಷೆ ಮಾತನಾಡುವುದು ತಿಳಿಯಿತು. ಅವನ ಮಿತ್ರರು ಅವನ ಆಂಗ್ಲಾಧ್ಯಾಯನದ ಹಿಂದೆ ಒಂದು ಕಥೆಯಿದೆಯೆಂದು ಹೇಳಿದರು. ಮೊಟ್ಟಮೊದಲಿಗೆ ಈ ಗುಜರಾತಿ ಕಿಗಲಿಗೆ ಬಂದು ಅಂಗಡಿ ತೆಗೆದಾಗ ಅವನಿಗೆ ಆಂಗ್ಲಭಾಷೆ ಬರುತ್ತಿರಲಿಲ್ಲ. ಆದರೆ ಅವನ ಬಹುತೇಕ ಗ್ರಾಹಕರು ಆಂಗ್ಲಭಾಷಿಗಳಾಗಿದ್ದರು. ಆದ್ದರಿಂದ ಅವರೊಡನೆ ಮಾತನಾಡಲು ಅವನಿಗೆ ಆಂಗ್ಲಭಾಷೆ ಅನಿವಾರ್ಯವಾಯಿತು.

ಪ್ರಾರಂಭದ ದಿನಗಳಲ್ಲಿ ಅವನ ಆಂಗ್ಲಭಾಷೆ ಅಷ್ಟೇನೂ ಚೆನ್ನಾಗಿರಲಿಲ್ಲ. ಒಂದು ದಿನ ಅವನಿಗೆ ಯಾರೋ ಹೇಳಿದರು – ನೀನು ಒಳ್ಳೆಯ ಆಂಗ್ಲ ಮಾತನಾಡಲಾಗದಿದ್ದರೆ, ಏತಕ್ಕೋಸ್ಕರ ಆ ಭಾಷೆಯಲ್ಲಿ ಮಾತನಾಡುವೆ? ಎಂದು. ಅದಕ್ಕೆ ಅವನು ಪ್ರತ್ಯುತ್ತರಿಸಿದ – ನಾನು ತಪ್ಪಾದ ಆಂಗ್ಲ ಮಾತನಾಡುವುದೇಕೆಂದರೆ ಮುಂದೆ ಸರಿಯಾದ ಆಂಗ್ಲ ಮಾತನಾಡಬಹುದೆಂದು.

ಎರಡು ವರ್ಷಗಳಲ್ಲಿ ಅವನು ಗ್ರಾಹಕರೊಂದಿಗೆ ಒಳ್ಳೆಯ ಆಂಗ್ಲದಲ್ಲಿ ಮಾತನಾಡಲಾರಂಭಿಸಿದ. ನಾನು ಅವನನ್ನು ಸಂಧಿಸಿದಾಗ ಅವನು ಒಳ್ಳೆಯ ಆಂಗ್ಲ ಮಾತನಾಡುತ್ತಿದ್ದ. ಒಬ್ಬ ಅಂಗಡಿಯ ವ್ಯಾಪಾರಿಗೆ ಅದು ಚೆನ್ನಾಗಿಯೇ ಇತ್ತು.

ಆದ್ದರಿಂದ ''ಎಲ್ಲಿ ಮನಸ್ಸಿರುತ್ತದೆಯೋ ಅಲ್ಲಿ ಮಾರ್ಗವಿರುತ್ತದೆ'' ಯಾವುದಾದರೂ ಗಳಿಸುವುದರಲ್ಲಿ ನಿಮಗೆ ಉತ್ಕಟ ಇಚ್ಛೆಯಿದ್ದರೆ ಈಗಲಾಗದಿದ್ದರೂ ಮುಂದೆಯಾದರೂ ಅದನ್ನು ನಾವು ಸಾಧಿಸುವೆವು.

ಆದ್ದರಿಂದ ದೃಢಸಂಕಲ್ಪವೇ ಅನುಭವದಿಂದ ಗೊತ್ತಾಗುವಂತೆ ಪ್ರಾಮಾಣಿಕ ವ್ಯಕ್ತಿಗೆ ನಿಜವಾದ ಗುರುವಾಗಬಲ್ಲದು.

ಮಾನವನ ಮೆದುಳಿನ ಅಧ್ಯಯನದಿಂದ ನಮಗೆ ತಿಳಿಯುವುದೆಂದರೆ ಅದಕ್ಕೆ ಅನೇಕ ಕಿಟಕಿಗಳಿವೆ. ಕೆಲವು ತೆರೆದಿರುತ್ತದೆ ಮತ್ತೆ ಕೆಲವು ಮುಚ್ಚಿರುತ್ತದೆ. ಮನಸ್ಸಿನ ಕಿಟಕಿ ತೆರೆಯಲು ಬಲಾತ್ಕರಿಸುವಂತಹ ಸಂದರ್ಭಗಳು ಬೇಕು. ಯಾರಿಗಾದರೂ ಒಂದು ಆಘಾತವಾಗುವಂತಹ ಸನ್ನಿವೇಶ ಒದಗಿಸಿದರೆ ಆಗ ಮನಸ್ಸಿನ ಕಿಟಕಿ ತಾನೇ ತಾನಾಗಿ ತೆರೆದುಕೊಳ್ಳುತ್ತದೆ. ಕೆಲವು ಸಲ ಅಂತಹ ಸಂದರ್ಭಗಳು ಪವಾಡವನ್ನೇ ಮಾಡಬಹುದು. ಆಗ ಆ ಮಾನವನು ಊಹೆಗೂ ಸಿಗದಂತಹ ರೀತಿಯಲ್ಲಿ ನಿಭಾಯಿಸಿಕೊಳ್ಳಬಹುದು.

ಇಂತಹ ನಿಯಮವನ್ನು ಯಾವ ಸಂದರ್ಭಕ್ಕಾದರೂ ಅನ್ವಯಿಸಬಹುದು ದೊಡ್ಡದಾಗಲೀ, ಸಣ್ಣದಾಗಲೀ. ಯಾರು ಬೇಕಾದರೂ ಪವಾಡ ಮಾಡಬಹುದು. ಆದರೆ ಅವನಿಗೆ ಯಾವುದೇ ಸಂದರ್ಭವನ್ನಾದರೂ ತನ್ನ ಒಳಿತಿಗಾಗಿ ಮಾರ್ಪಡಿಸಿಕೊಳ್ಳುವ ಸಾಮರ್ಥ್ಯವಿರಬೇಕಷ್ಟೆ.

ಮನಃಶಾಸ್ತ್ರದಲ್ಲಿ ಬುದ್ಧಿವಿಕಲ್ಪಕ್ಕೆ ಸಂಬಂಧಿಸಿದಂತಹ ವಾದಗಳು ಇಂತಹ ಅಸಹಜ ಘಟನೆಗಳನ್ನು ವಿವರಿಸಬಲ್ಲದು. ಯಾವಾಗಲಾದರೂ ಆಘಾತವುಂಟು ಮಾಡುವಂತಹ ಅನುಭವವಾದರೆ. ಆಗ ಮನಸ್ಸಿಗೆ ಆಘಾತವುಂಟಾಗುತ್ತದೆ. ಈ ಮನಸ್ಸಿನ ಆಘಾತ ನಿಷ್ಕ್ರಿಯವಾದ ಜೀವಕೋಶವನ್ನು ಸಕ್ರಿಯಗೊಳಿಸಿದಾಗ ಸಾಮಾನ್ಯವಾಗಿ ಮಾಡಲಾರದಂತಹ ಕ್ರಿಯೆಗಳೂ ನಡೆಯುತ್ತವೆ.

ಇಂತಹ ಅನೇಕ ಉದಾಹರಣೆಗಳಿವೆ. ಭೀಮರಾವ್ ಅಂಬೇಡ್ಕರ್ ಅವರನ್ನೇ ತೆಗೆದುಕೊಳ್ಳಬಹುದು. ಅವರು ಬಡ ಹಿಂದುಳಿದ ಜನಾಂಗದಲ್ಲಿ ಹುಟ್ಟಿದರು. ಚಿಕ್ಕಂದಿನಲ್ಲೇ ತಮ್ಮ ಸಮಾಜದಲ್ಲೇ ಅವರು ತಿರಸ್ಕೃತರಾದರು. ಈ ದುಃಖಕರವಾದ ಸನ್ನಿವೇಶವನ್ನು ಮೆಟ್ಟಿ ಅವರು ಹೊರಬಂದರು. ಬಹಳ ಕಷ್ಟದಿಂದ ವಿದ್ಯಾಭ್ಯಾಸ ಮುಗಿಸಿ ಭಾರತದ ಸಂವಿಧಾನ ಶಿಲ್ಪಿಯೂ ಆದರು. ಭಾರತದ ಸ್ವಾತಂತ್ರ್ಯದ ಬಳಿಕ ಭಾರತ ಸಂವಿಧಾನ ರೂಪಿಸಲು ಅವರನ್ನೇ ಅಧ್ಯಕ್ಷರನ್ನಾಗಿಯೂ ನೇಮಿಸಲಾಯಿತು.

ಅಂತಹ ಸಂದರ್ಭಗಳಲ್ಲಿ ಧೃತಿಗೆಡಬಾರದು. ಆಗ ಅವರು ಬೇರೆಯವರನ್ನು ನೋಡಿ ತಮ್ಮ ಸುಪ್ತ ಪ್ರತಿಭೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

ಸುದೃಢವಾದ ಸಂಕಲ್ಪವಿದ್ದರೆ ಸುಪ್ತವಾದ ಸತ್ವವನ್ನು ಜಾಗೃತಗೊಳಿಸಿಕೊಂಡು ಕಾರ್ಯಸಾಧಿಸಿಕೊಳ್ಳಬಹುದು.

ಸಂದರ್ಭಕ್ಕೆ ತಕ್ಕಂತೆ ನಡೆಯುವುದು ಕೇವಲ ಪ್ರತಿಕ್ರಿಯೆಯಲ್ಲ ಅದು ಸಕ್ರಿಯತೆಯೂ ಹೌದು. ಅದಕ್ಕೆ ಸತತವಾದ ಪರಿಶ್ರಮ, ಅನಾಸಕ್ತಿ ಹಾಗೂ ತಾಳ್ಮೆ ಬೇಕು. ಆದರಿಂದ ಭಾವನಾತ್ಮಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಬೇಡಿಕೆಗಳನ್ನು ಸಾಧಿಸಿಕೊಳ್ಳಬಹುದು ಆದರೆ ಅದಕ್ಕೆ ಹೊಸ ಕುಶಲತೆ ಹಾಗೂ ಜಾಣ್ಮೆ ಬೇಕಾಗುತ್ತದೆ.

ಬುದ್ಧಿವಂತರಿಗೂ ಮೂರ್ಖರಿಗೂ ಇರುವ ಒಂದೇ ವ್ಯತ್ಯಾಸವೆಂದರೆ ಬುದ್ಧಿವಂತರು ವಾಸ್ತವಿಕತೆಯನ್ನು ತಮಗನುಕೂಲಕರವಾಗುವಂತೆ ರೂಪಿಸಿಕೊಳ್ಳುತ್ತಾರೆ. ಆದರೆ ಮೂರ್ಖನಿಗೆ ಅದು ಸಾಧ್ಯವಾಗುವುದಿಲ್ಲ. ಅವನು ಜೀವಿತದ ಏರಿಳಿತಗಳ ನಡುವೆ ಸಿಲುಕಿ ಒದ್ದಾಡುತ್ತಾನೆ. ಬೈಬಲ್‌ನಲ್ಲಿ ಒಬ್ಬ ಬುದ್ಧಿವಂತ ಕಲ್ಲಿನಿಂದ ಮನೆ ಕಟ್ಟಿದವನ ಪ್ರಸಂಗ ಬರುತ್ತದೆ. ಆ ಮನೆ, ಬಿರುಗಾಳಿಯನ್ನು ತಟ್ಟುಕೊಂಡಿತು. ಆದರೆ ಮರಳಿನಿಂದ ಮನೆಕಟ್ಟಿದ್ದವನು ತನ್ನ ಮನೆ ಮಳೆ ಹಾಗೂ ಬಿರುಗಾಳಿಗೆ ಹಾಳಾದ್ದನ್ನು ನೋಡಿದ. ಆದ್ದರಿಂದ ನಮಗೆ ಬಂಡೆಯಷ್ಟು ದಾರ್ಢ್ಯವಿದ್ದರೆ ಎಂತಹ ಸಂದರ್ಭಗಳನ್ನಾದರೂ ಎದುರಿಸಬಹುದು.

ಜೀವನ ಯಾವಾಗಲೂ ಸುಗಮವಾಗಿರುವುದಿಲ್ಲ. ಅದು ಅನೇಕ ದುಃಖಗಳನ್ನೂ ತಂದೊಡ್ಡುತ್ತದೆ. ಅದನ್ನು ಎದುರಿಸಲು ದೃಢವಾದ ಮನಸ್ಸು ಬೇಕು. ದೃಢವಲ್ಲದ ಮನಸ್ಸು ಕಷ್ಟ ತಾಳಲಾರದೆ ಸಂಕಟಕ್ಕೆ ಒಳಗಾಗುತ್ತದೆ. ಮಗನ ಮರಣ ವಾರ್ತೆ ಕೇಳಿ ದ್ರೋಣರ ಸ್ಥಿತಿ ಏನಾಯಿತು! ಅವರು ಮಗನನ್ನು ಹಚ್ಚಿಕೊಂಡಿದ್ದರಿಂದ ಯುದ್ಧ ಮಾಡದೆ ಸಾವನ್ನಪ್ಪಿದರು.

ಚರಿತ್ರೆಯು ದೃಢಸಂಕಲ್ಪ ಹಾಗೂ ಮನೋದಾರ್ಢ್ಯಕ್ಕೆ ಒಳ್ಳೆಯ ಸಂದರ್ಭವನ್ನೊದಗಿಸುತ್ತದೆ. ಒಂದು ಕ್ರೀಡಾವರ್ಗವಿತ್ತು. ಒಬ್ಬ ಅತ್ಯಂತ ಕೃಶವಾದ ಹುಡುಗಿಯು ತನ್ನ ಆಸನದಿಂದೆದ್ದು ಒಲಂಪಿಕ್ ದಾಖಲೆಯನ್ನು ಕುರಿತು ಕೇಳಿದಾಗ ಅವಳ ಸಹಪಾಠಿಗಳಲ್ಲಿ ನಗುವಿನ ಅಲೆಯನ್ನೆಬ್ಬಿಸಿತು. ಅವಳ ಶಿಕ್ಷಕರಿಗೂ ಅವಳು ಕೇಳಿದ ಪ್ರಶ್ನೆ ಸರಿದೋರಲಿಲ್ಲ. ಅವಳಿಗೆ ಆಟವನ್ನಾಡುವುದಿರಲಿ, ಸರಿಯಾಗಿ ನೆಟ್ಟಗೆ ನಿಲ್ಲಲೂ ಆಗುತ್ತಿರಲಿಲ್ಲ. ನಿರಾಸೆಗೊಂಡ ಹುಡುಗಿ ಏನನ್ನೂ ಹೇಳಲಿಲ್ಲ. ಮರುದಿನ ಬೇರೆಯವರಿಂದ ಭಿನ್ನಸ್ಥಳದಲ್ಲಿ ಅವಳಿಗೆ ಆಸನ ನೀಡಲಾಯಿತು. ಅವಳು ತಾತ್ಕಾಲಿಕ ತಡೆ ನೀಡಿ ತನ್ನ ಊರುಗೋಲಿನ ಸಹಾಯದಿಂದ ತನ್ನ ಶಿಕ್ಷಕಿಗೆ ತಿಳಿಸಿದಳು – ಯಾರಾದರೂ ದೃಢಸಂಕಲ್ಪ ಮಾಡಿದರೆ ಅವರು ಖಂಡಿತವಾಗಿಯೂ ತಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳುವರು ಎಂದು. ತಾನು ಗಾಳಿಯಲ್ಲಿ ಒಂದು ದಿನ ತೇಲುವಂತೆಯೂ ಹೇಳಿದಳು. ಆಗ ಆ ತರಗತಿಯಲ್ಲಿದ್ದವರೆಲ್ಲಾ ಹೀಯಾಳಿಸತೊಡಗಿದರು. ಅವಳು ಸತತ ಅಭ್ಯಾಸದಿಂದ ನಿಧಾನವಾಗಿ ಓಡುವುದನ್ನು ಕಲಿತಳು. ಸ್ವಲ್ಪ ಸಮಯದ ನಂತರ ವೇಗವನ್ನು ಗಳಿಸಿದಳು. ಅನಂತರ ಚಿಕ್ಕ ಸ್ಪರ್ಧೆಗಳಲ್ಲಿ ಭಾಗವಹಿಸಲಾರಂಭಿಸಿದಳು. ಅವಳನ್ನು ಅಷ್ಟು ವೇಗವಾಗಿ ಓಡುವುದನ್ನು ನೋಡಿದವರಿಗೆ ಆಶ್ಚರ್ಯವುಂಟಾಯಿತು. 1960ರಲ್ಲಿ ವಿಶ್ವ ಒಲಂಪಿಕ್ಸ್‌ನಲ್ಲಿ ಭಾಗವಹಿಸಿ ಚಿನ್ನದ ಪದಕವನ್ನು ಗಳಿಸಿದಳು. ಅವಳೇ ವಿಲ್ಮಾ ರುಡಾಲ್ಫ್.

ಅಬ್ರಹಾಂ ಲಿಂಕನ್‌ನ ಘಟನೆಯನ್ನೂ ಚರಿತ್ರೆ ಮುಂದಿಡುತ್ತದೆ. ಅವನು ಬಡ ಕುಟುಂಬದಿಂದ ಬಂದ. ಅವನಿಗೆ ಚಿಕ್ಕಂದಿನಲ್ಲಿ ಗತಿಯಿಲ್ಲದಿದ್ದರೂ ಸಹ ಏನನ್ನಾದರೂ ಸಾಧಿಸಬೇಕೆಂಬ ಮಹತ್ವಾಕಾಂಕ್ಷೆಯಿತ್ತು. ಅವನು ಕಾನೂನಿನ ವಿದ್ಯಾರ್ಥಿಯಾಗಿದ್ದ. ಅವನು ಯಾರಿಂದಲೋ ಕೇಳಿದ. ಅವನ ಹಳ್ಳಿಯ ಮುಖಾಂತರ ಹರಿಯುತ್ತಿದ್ದ ನದಿಯ ಮೇಲೆ ಒಬ್ಬ ನ್ಯಾಯಾಧೀಶನ ಮನೆಯಿದೆಯೆಂದು. ಅವನ ಬಳಿ ಕಾನೂನಿಗೆ ಸಂಬಂಧಿಸಿದಂತೆ ಅನೇಕ ಗ್ರಂಥಗಳಿವೆ. ಲಿಂಕನ್ ಆ ನ್ಯಾಯಾಧೀಶನನ್ನು ಭೇಟಿಯಾಗಿ ಅವನಲ್ಲಿದ್ದ

ಕೆಲವು ಪುಸ್ತಕಗಳನ್ನು ಎರವಲು ಪಡೆಯಲೂ ನಿಶ್ಚಯಿಸಿದ. ಆಗ ಅದು ಚಳಿಗಾಲದ ಮಧ್ಯಭಾಗವಾಗಿತ್ತು. ತಾನೇ ಒಂದು ದೋಣಿಯನ್ನು ತೆಗೆದುಕೊಂಡು ನದಿಯಲ್ಲಿ ಹೋಗಲು ಪ್ರಯತ್ನಿಸಿದ. ಮಧ್ಯದಲ್ಲಿ ದೋಣಿ ಒಂದೆಡೆ ತಗುಲಿ ಇಬ್ಭಾಗವಾಯಿತು. ಅದನ್ನೂ ಲೆಕ್ಕಿಸದೆ ಲಿಂಕನ್ ನದಿಯನ್ನು ಈಜಿದ. ಕೊರೆಯುವ ಚಳಿಯನ್ನೂ, ಮಂಜುಗಡ್ಡೆಯನ್ನೂ ಲೆಕ್ಕಿಸಲಿಲ್ಲ. ಅವನನ್ನು ನೋಡಿ ನ್ಯಾಯನಿರ್ಣಾಯಕನಿಗೆ ನಂಬಲಾಗಲಿಲ್ಲ. ಲಿಂಕನ್‌ನ ಕಣ್ಣುಗಳಲ್ಲಿದ್ದ ದೃಢಸಂಕಲ್ಪವನ್ನು ಅವನು ಗಮನಿಸಿದ. ತನ್ನ ಸೇವಕ ರಜೆಯಲ್ಲಿದ್ದರಿಂದ ಸ್ವಲ್ಪದಿನ ಲಿಂಕನ್ ಅವನಿಗೆ ಗೃಹ ಕೃತ್ಯದಲ್ಲಿ ಸಹಕರಿಸಿದರೆ ಅವನ ಕಾನೂನು ಪುಸ್ತಕಗಳನ್ನು ಪಡೆಯಬಹುದೆಂದೂ ತಿಳಿಸಿದ. ಆಗ ಲಿಂಕನ್ ಅವನ ಜೊತೆಯೇ ಇದ್ದು ಅವನು ಹೇಳಿದ ಕೆಲಸವನ್ನೆಲ್ಲಾ ಮಾಡಿದ. ಬಿಡುವಿನ ವೇಳೆಯಲ್ಲಿ ಪುಸ್ತಕಗಳನ್ನು ಓದಿದ. ಇದರಿಂದ ಅತ್ಯಂತ ಸಂತುಷ್ಟವಾದ ನ್ಯಾಯಾಧೀಶ ಲಿಂಕನ್ನನಿಗೆ ಕೆಲವು ಪುಸ್ತಕಗಳನ್ನು ಬಹುಮಾನ ರೂಪದಲ್ಲಿ ಕೊಟ್ಟ. ಅವನೇ ಅಮೇರಿಕದ ಭಾವಿ ಅಧ್ಯಕ್ಷನಾದ ಅಬ್ರಹಾಂ ಲಿಂಕನ್.

ಕೋಪ, ದುಃಖ, ಹೊಟ್ಟೆಕಿಚ್ಚು, ಅಹಂಕಾರ, ಭಯ, ಕೀಳರಿಮೆ ಮಾನವನನ್ನು ನಿಃಶಕ್ತನಾಗಿಸುತ್ತದೆ ಮತ್ತು ಅವನಲ್ಲಿರುವ ದೃಢಸಂಕಲ್ಪವನ್ನು ನಾಶಮಾಡುತ್ತದೆ. ಆದರೆ, ಕೆಲವರು ಮಾತ್ರ ಅಂತಹ ಕಷ್ಟಕರ ಸನ್ನಿವೇಶಗಳಲ್ಲೂ ತಮ್ಮ ದೃಢಸಂಕಲ್ಪದಿಂದ ಜಾರುವುದಿಲ್ಲ. ಒಂದು ಸಲ ಸರದಾರ್ ವಲ್ಲಭಭಾಯ್ ಪಟೇಲರು ನ್ಯಾಯಾಲಯದಲ್ಲಿ ವಾದ ಮಾಡುತ್ತಿದ್ದರು. ಆಗ ತನ್ನ ಹೆಂಡತಿಯ ಮರಣವಾರ್ತೆ ಅವರಿಗೆ ತಲುಪಿತು. ಅದರಿಂದ ಅಧೈರ್ಯಗೊಳ್ಳದೆ ಅವರು ನ್ಯಾಯಾಲಯದಲ್ಲಿ ವಾದಮಾಡಿ ತಮ್ಮ ಕಕ್ಷಿಗಾರನಿಗೆ ಜಯವನ್ನು ತಂದುಕೊಟ್ಟರು. ಆನಂತರ ತಮ್ಮ ಹೆಂಡತಿಯ ಮರಣ ವಾರ್ತೆಯನ್ನು ಹೊರಗೆಡಹಿದರು. ಅದೇ ನಿಜವಾದ ಆರೋಗ್ಯಕರ ಮನಸ್ಸಿಗೆ ಸೂಚನೆ. ಅಂತಹವರು ಎಂತಹ ಕಷ್ಟದಲ್ಲೂ ಧೃತಿಗೆಡವುದಿಲ್ಲ. ಯಾವಾಗ ಮಾನವ ಮಾನಸಿಕವಾಗಿ ಧೈರ್ಯದಿಂದಿರುವನೋ ಆಗ ಬಂದಂತಹ ಕಷ್ಟಗಳು ತಾವಾಗಿಯೇ ಕರಗಿ ಮಾಯವಾಗುತ್ತದೆ. ಸ್ವಾಮಿ ವಿವೇಕಾನಂದರು ಹೇಳಿದರು. ''ನಿನ್ನನ್ನು ಅಳುವಂತೆ ಮಾಡಿರುವುದು ಯಾವುದು ಮಿತ್ರ? ನಿನ್ನಲ್ಲೆ ಎಲ್ಲ ರೀತಿಯ ಸಾಮರ್ಥ್ಯವಿದೆ. ಕಷ್ಟದಿಂದ ಪಾರಾಗುವ ಮನೋದಾರ್ಢ್ಯವಿದ್ದರೆ ಈ ನಮ್ಮ ಭೂಮಿಯೆಂಬ ಗ್ರಹದ ಪಯಣದಲ್ಲಿ ಯಾವ ಸಮಸ್ಯೆಯನ್ನಾದರೂ ಎದುರಿಸಬಹುದು, ಗೆಲುವನ್ನೂ ಸಾಧಿಸಬಹುದು.

---

ಆಕರಗಳು

1) ಕುಮಾರಸಂಭವ.5.5 2) ಕಠೋಪನಿಷತ್.1.26 3) ಅದೇ.1.29

# 15. ಶ್ರಮ

ಅನಾದಿಕಾಲದಿಂದಲೂ ಸಹ ಶ್ರಮದ ಪ್ರಾಮುಖ್ಯತೆಯನ್ನು ನಮ್ಮ ಹಿಂದಿನವರು ಕೊಂಡಾಡಿದ್ದಾರೆ. ಋಗ್ವೇದ ನಿರೂಪಿಸುವಂತೆ "ನ ಋತೇಶ್ರಾಂತಸ್ಯ ಸಖ್ಯಾಯ ದೇವಾಃ." ಯಾರು ಶ್ರಮವಹಿಸುವುದಿಲ್ಲವೋ ಅವರೊಂದಿಗೆ ಭಗವಂತನೂ ಗೆಳೆತನ ಮಾಡುವುದಿಲ್ಲ ಐತರೇಯ ಬ್ರಾಹ್ಮಣ ನುಡಿಯುವಂತೆ ಯಾರು ಶ್ರಮವಹಿಸುವುದಿಲ್ಲವೋ ಅವರಿಗೆ ಸಂಪತ್ತಿಲ್ಲ ಕಾಂತಿಯೂ ಇಲ್ಲ. ಆದ್ದರಿಂದ ಶ್ರಮವೇ ಸಂಪತ್ತಿಗೂ ಒಳ್ಳೆಯ ಬಾಳ್ವೆಗೂ ಹೆಗ್ಗುರುತು. ಕೇವಲ ಕೆಲಸ ಮಾಡುವುದು ಮಾತ್ರವಲ್ಲ, ಕಷ್ಟಪಟ್ಟು ಕೆಲಸ ಮಾಡಿ ಶ್ರಮದಿಂದಲೇ ಎಲ್ಲವನ್ನೂ ಗಳಿಸಬೇಕು. ಮಲಗಿ ನಿದ್ರಿಸುತ್ತಿರುವ ಸಿಂಹದ ಬಾಯನ್ನು ತಾನಾಗಿಯೇ ಯಾವ ಜಿಂಕೆಯೂ ಪ್ರವೇಶಿಸುವುದಿಲ್ಲ. ಅದು ಪರಿಶ್ರಮದಿಂದಲೇ ಬೇಟೆಯಾಡಬೇಕು – ನಹಿ ಸುಪ್ತಸ್ಯ ಸಿಂಹಸ್ಯ ಪ್ರವಿಶಂತಿ ಮುಖೇ ಮೃಗಾಃ. ಶ್ರಮದಿಂದಲೇ ಶ್ರೀರಾಮನೂ ಸಹ ಕಾಡಿನಲ್ಲಿ ಕಷ್ಟವನ್ನನುಭವಿಸಿ ರಾಕ್ಷಸರ ಸೈನ್ಯವನ್ನು ನಾಶ ಮಾಡುವಂತಾಯಿತು.

ಯಾವಾಗ ಶ್ರಮವು ತಕ್ಕುದಾದ ಫಲ ನೀಡುವುದೆಂದೂ ಅದು ಶಾಶ್ವತವೆಂದೂ ಅಶಾಶ್ವತವಲ್ಲವೆಂದೂ ತಿಳಿದಾಗಲೇ ಸಂತಸವುಂಟಾಗುತ್ತದೆ.

ಫಲಂ ಅಯತೌ ಸುಚರಿತವರ್ತಿ ಕಲ್ಪಯನ್ ।
ಭವತಿ ಶ್ರಮೋऽಪಿ ಹಿ ಸುಖಾಯ ದೇಹಿನಾಮ್ ॥[4]

ಇದನ್ನೇ ಅನಾದಿಕಾಲದ ಸೂಕ್ತಿಯೂ ನಿರೂಪಿಸುತ್ತದೆ – ಕ್ಲೇಷಃ ಫಲೇನ ಹಿ ಪುನಃ ನವತಾಂ ವಿಧತ್ತೇ. ಒಂದು ಸುಭಾಷಿತವೂ ಸಹ ಅದೇ ಅಭಿಪ್ರಾಯವನ್ನೇ ಹೇಳುತ್ತದೆ.

ಯಾವ ಮನುಷ್ಯ ಒಂದು ಗಿಡನೆಟ್ಟು ಅದಕ್ಕೆ ಪಾತಿಮಾಡಿ, ನೀರುಹಾಕಿ ಅದು ದೊಡ್ಡದಾಗಿ ಹಣ್ಣನ್ನು ಕೊಟ್ಟಾಗ ಸಂತಸ ಪಡುವನೋ ಹಾಗೆಯೇ ಪಟ್ಟ ಶ್ರಮಕ್ಕೆ ತಕ್ಕ ಫಲಸಿಕ್ಕಾಗ ಅವನಿಗೆ ಅನಿಸುತ್ತದೆ :-

ಯತ್ಸಾಧಿತಂ ಗುರುತರೈರ್ವಿವಿಧೈಃ ಪ್ರಯತ್ನೈಃ
ತದ್‌ರೋಚತೇ ಹಿ ಪರಮಂ ಪುರುಷಸ್ಯ ಲಕ್ಷ್ಯಂ ।
ಆಧಾರಬಂಧ ಜಲಸೇಚನಕೈಃ ಕರಾಭ್ಯಾಮ್
ಸಂವರ್ಧಿತಸ್ಯ ಹಿ ತರೋಃ ಪ್ರಸವೋತಿರುಚ್ಯಃ ॥[5]

ಆದ್ದರಿಂದ ಶ್ರಮವು ದುಃಖವನ್ನುಂಟುಮಾಡುತ್ತದೆಂದು ಭಾವಿಸಬಾರದು. ಅದು ನಿಗದಿತವಾದ ಗುರಿಯನ್ನು ಸಾಧಿಸಲು ಕಾರಣವಾದರೆ ಅದಕ್ಕೆ ತಾನಾಗಿಯೇ ಜನರು ಪ್ರವೃತ್ತರಾಗುವಂತಾಗುತ್ತದೆ. ಅದು ಅವರ ಮಾನಸಿಕ ಸ್ಥಿತಿಯನ್ನೂ ಸಹ ನಿರ್ದೇಶಿಸುತ್ತದೆ. ಒಂದು ಬಾರಿ ಒಬ್ಬ ಚಿಕ್ಕ ಹೆಂಗಸು ತನ್ನ ಕೈಯಲ್ಲಿ ಒಂದು ಮಗುವನ್ನೆತ್ತಿಕೊಂಡು ಬೆಟ್ಟ ಹತ್ತುತ್ತಿರುವುದನ್ನು ನೋಡಿ ನುಡಿದರು. ನೀನು ಅಷ್ಟೊಂದು ಭಾರ ಹೊರುತ್ತಿರುವೆ.

ಆಗ ಅವಳಿಂದ ಉತ್ತರ ಬಂತು - ಇದು ಕಷ್ಟವಲ್ಲ ಆ ಮಗು ನನ್ನ ತಮ್ಮ ಎಂದು. ಅದು ತಮ್ಮನಾದರೆ ಶ್ರಮವಿಲ್ಲ, ಅದಿಲ್ಲವಾದರೆ ಶ್ರಮ. ಆದ್ದರಿಂದ ನಮ್ಮ ಭಾವನೆಗಳೇ ಮುಖ್ಯವಾಗುತ್ತದೆ.

ರಾಯ್.ಎಲ್.ಸ್ಮಿತ್ ಅವರು ಹೇಳುವಂತೆ "ಪ್ರತಿಹಗಲೂ ಮಾನವನನ್ನು ಪರೀಕ್ಷೆಗೊಳಗಾಗಿಸುತ್ತದೆ. ಸಂಜೆಯ ಹೊತ್ತಿಗೆ ನಿರ್ಣಯ ನೀಡುತ್ತದೆ. ಎಷ್ಟು ಸತ್ಯ! ಎಷ್ಟು ಜನಕ್ಕೆ ಈ ಜೀವನದ ಪರೀಕ್ಷೆಯ ಅರಿವಿದೆ? ಯಾರಿಗೆ ಈ ಸತ್ಯದ ಅರಿವಿಲ್ಲವೋ, ಅಂತಹವರಿಗೆ ಅನೇಕ ತೊಂದರೆಗಳು ಬರುತ್ತದೆ. ಅವರಿಗೆ ತಿಳಿಯದೆಯೇ ಜೀವನವೆಲ್ಲವೂ ವ್ಯರ್ಥವಾಗುತ್ತದೆ.

ದಿನಗಳದೆಂತೆಲ್ಲ ಜೀವನದ ಸತ್ಯಾಂಶವು ಅರಿವಾಗುತ್ತದೆ. ಯಾರಾದರೂ ಅದನ್ನೆದುರಿಸಿ ಸಫಲರಾದರೆ ತಮ್ಮ ಶ್ರಮದಿಂದ ಆಗ ಅವರು ತಮ್ಮ ದಿನ ಸಫಲವಾಯಿತೆಂದು ಭಾವಿಸುತ್ತಾರೆ. ಅದನ್ನು ಬಿಟ್ಟು ಯಾರಾದರೂ ಅದನ್ನು ಸಹಜವಾಗಿ ತೆಗೆದುಕೊಂಡರೆ ದಿನವನ್ನು ಕಳೆಯಲು ಬಿಟ್ಟರೆ ಸಂಜೆಯ ನಿರ್ಣಯ ಅವರ ಪರವಾಗಿ ಇರುವುದಿಲ್ಲ.

ಪ್ರತಿಯೊಬ್ಬರೂ ಶ್ರಮವಹಿಸಬೇಕು ಆದರೆ ಕೇವಲ ಶ್ರಮಕ್ಕೆಂದಲ್ಲ. ವೃದ್ಧಾಶ್ರಮ ಆಗದಂತೆ ತಡೆಯಬೇಕು. ಕ್ರೂರವಾದ ಬಾತುಕೋಳಿಯನ್ನು ಅಟ್ಟಿಸಿಕೊಂಡು ಹೋಗುವುದು ಸರಿಯಲ್ಲ. ಆದರಿಂದ ಕೇವಲ ಜಿಗುಪ್ಸೆಯಾಗುತ್ತದೆ. ಯಾವುದಾದರೂ ಕೆಲಸವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಕೇವಲ ಪದಗಳನ್ನು ಪ್ರಯೋಗಿಸಿದರೆ ಆಗ ಅವರ ಶ್ರಮವು ದಂಡವಾಗುತ್ತದೆ. ತಲೆ ಬೋಳಿಸಿಕೊಂಡಿರುವವನಿಗೆ ನಲುಗಿ ಹೋದ ಹೂಗಳಿಂದ ಏನು ತಾನೇ ಪ್ರಯೋಜನ?

ಸಂದರ್ಭಶಕ್ತಿಹೀನಾನಾಂ ಶಬ್ದಾಭ್ಯಾಸೋ ವೃಥಾಶ್ರಮಃ ।
ಮುಗ್ಧಾ ನಿಲಬ್ಧಾ ಪುಷ್ಪಾಣಿ ಮುಂಡಿತಃ ಕಿಂಕರಿಷ್ಯತಿ ॥[6]

ಗುರಿಯನ್ನು ತಲುಪಲು ಶ್ರಮವಹಿಸುವುದಾದರೆ ಆಗ ಶ್ರಮವು ವ್ಯವಸ್ಥಿತವಾಗಿರಬೇಕು. ಅವ್ಯವಸ್ಥೆಯಾಗಿರಬಾರದು. ಗುರಿಸಾಧಿಸಲು ಅತ್ಯಂತ ಮುಖ್ಯವಾದುದೆಂದರೆ ನಮ್ಮ ಶ್ರಮವು ಸ್ಥಿರವಾಗಿರಬೇಕು. ಯಾವುದೇ ಕಾರಣಕ್ಕೂ ಜಿಗುಪ್ಸೆಯಿಂದ ಮಧ್ಯದಲ್ಲಿ ನಿಲ್ಲಿಸಬಾರದು.

ಯೋ ಯಮರ್ಥಂ ಪ್ರಾರ್ಥಯತೇ ತದರ್ಥಂ ಚೇಷ್ಟತೇ ಕ್ರಮಾತ್ ।
ಸೋಽವಶ್ಯಂತದವಾಪ್ನೋತಿ ನ ಚೇಚ್ಛ್ರಾಂತೋ ನಿವರ್ತತೇ ॥[7]

ನಮ್ಮ ಶ್ರಮವು ತಾರ್ಕಿಕ ನಿರ್ಣಯನನ್ನು ಮುಟ್ಟಬೇಕು. ಯಾವಾಗ ಶ್ರಮದ ಬಹುಪಾಲು ಹಾಕಲ್ಪಟ್ಟಿದೆಯೋ ಮಿಕ್ಕಿರುವ ಸ್ವಲ್ಪ ಭಾಗವನ್ನು ಅವರು ನಿಲ್ಲಿಸಬಾರದು. ಭಾಸ ಹೇಳುವಂತೆ : ಸಮೂಲಂ ವೃಕ್ಷಮುತ್ಪಾಟ್ಯ ಸಾಕ್ಷಾತ್ ಛೇತ್ತುಂ ಕುತಃಶ್ರಮಃ?

ಶ್ರಮವನ್ನು ದೈಹಿಕ ಹಾಗೂ ಮಾನಸಿಕ ಎಂದು ಪ್ರಧಾನವಾಗಿ ಎರಡಾಗಿ ಗುರುತಿಸಬಹುದು, ಕೆಲವು ಕಡೆ ಅವೆರಡೂ ಸಹ ಒಂದರ ಮೇಲೊಂದು ಪಸರಿಸಬಹುದು. ಮರ ಕಡಿಯುವುದು, ಕಬ್ಬಿಣವನ್ನು ತುಂಡು ಮಾಡುವುದು, ಭಾರತೆಗೆದುಕೊಂಡು ಹೋಗುವುದು ಮೊದಲಾದ ಕ್ರಿಯೆಗಳು ದೈಹಿಕ ಶ್ರಮವುಳ್ಳದ್ದಾದುದು. ಆದರೆ ಅಧ್ಯಾಪನ ಮಾಡುವುದು, ವೈಜ್ಞಾನಿಕ ಸಂಶೋಧನೆ, ಯೋಜನೆಗಳು ಹೆಚ್ಚಾಗಿ ಮಾನಸಿಕವಾಗಿ ಶ್ರಮವನ್ನುಂಟು ಮಾಡುತ್ತದೆ. ಅನ್ವೇಷಣೆಗಳು, ಆವಿಷ್ಕಾರಗಳು ಸರಿಸಮವಾಗಿ ಎರಡನ್ನೂ ಹೊಂದಿರಬೇಕಾಗುತ್ತದೆ.

ಕೊನೆಯದಾಗಿ ಶ್ರಮವು ಅಮೂರ್ತತೆಯಲ್ಲಿರುವುದಿಲ್ಲ. ಅದು ಕಾರಣದೊಂದಿಗೆ ಕೂಡಿದ್ದಾಗಿರುತ್ತದೆ. ಇಲ್ಲಿ ಒಂದು ಮುಖ್ಯಾಂಶವಿದೆ. ಸರಿಯಾದ ಗುರಿಸಾಧಿಸಲು ಶ್ರಮಹಾಕಬೇಕಾಗುತ್ತದೆ. ಅದು ತನಗೆ ಹಾಗೂ ಸಮಾಜಕ್ಕೆ ಒಳಿತನ್ನುಂಟುಮಾಡುತ್ತದೆ. ಅದರ ವಿರುದ್ಧವಾದರೆ ಇಬ್ಬರಿಗೂ ಕೇಡನ್ನುಂಟುಮಾಡುತ್ತದೆ. ಒಬ್ಬ ಕಳ್ಳ, ಕೊಲೆಗಡುಕ, ಆತಂಕವಾದಿಯೂ ಶ್ರಮ ಹಾಕುತ್ತಾರೆ. ಆದರೆ ಅವರ ಶ್ರಮವು ತಪ್ಪು ದಿಕ್ಕಿನೆಡೆ ಇರುತ್ತದೆ. ನಮ್ಮ ಶ್ರಮ ಹಾಕುವಾಗ ನಾವು ವಿವೇಕವನ್ನು ಉಪಯೋಗಿಸಿಕೊಂಡು ಅದಕ್ಕೆ ಸರಿಯಾದ ನಿಲುವನ್ನು ತೋರಿಸಬೇಕು.

---


ಆಕರಗಳು

1) 4.33.11 2) 7.90 3) ಸಾಹಿತ್ಯರತ್ನಾಕರ.4.22 4) ಸೂಕ್ತಿಮುಕ್ತಾವಳಿ.16 5) ಕುಮಾರಸಂಭವ.5.86. 6) ಸಭಾರಂಜನಶತಕ.13 7) ಪ್ರತಿಜ್ಞಾಯೌಗಂಧರಾಯಣ.4.20

# 16. ಶೌರ್ಯ-ಪರಾಕ್ರಮ

ಶೌರ್ಯವನ್ನು ಸಾಮಾನ್ಯವಾಗಿ ಧೈರ್ಯ, ಸಾಹಸ, ಎಂಬುದಾಗಿ ಹೇಳುತ್ತಾರೆ. ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಅದನ್ನು ಬೇರೆ ಬೇರೆ ರೀತಿಯಲ್ಲಿ ವಿವರಿಸಲಾಗಿದೆ. ಸಾಹಿತ್ಯದರ್ಪಣ ಅದು ಯಾವುದಾದರೂ ಕ್ರಿಯೆಯನ್ನು ಪ್ರಾರಂಭಿಸಲು ಇರುವಂತಹ ಸಾಮಂಜಸ್ಯ ಎಂದು ಹೇಳುತ್ತದೆ :- ಕಾರ್ಯಾರಂಭೇಷು ಸಂರಂಭಃ ಸ್ಥೇಯಾನುತ್ಸಾಹ ಉಚ್ಯತೇ[1]. ರಸಗಂಗಾಧರದ ಪ್ರಕಾರ ಅದು ಔನ್ನತ್ಯದ ಭಾವನೆ. ಈ ಭಾವನೆಯು ಪರಾಕ್ರಮದಿಂದಲೋ ಬೇರೆಯವರಿಂದಲೋ ಬರಬಹುದು :- ಪರಪರಾಕ್ರಮ ದಾನಾದಿಸ್ಮೃತಿ ಜನ್ಮಾ ಔನ್ನತ್ಯಾಖ್ಯಾ ಉತ್ಸಾಹಃ ।

ಪರಾಕ್ರಮ ಗುಣವಿದ್ದಾಗ ಮಾತ್ರವೇ ಜಯಪ್ರಾಪ್ತವಾಗುತ್ತದೆ. ಪರಾಕ್ರಮವಿಲ್ಲದೆ ಜಯ ಸಾಧ್ಯವಿಲ್ಲ - ನ ಶೌರ್ಯೇಣ ವಿನಾ ಜಯಃ. ಮೂರು ಲೋಕಗಳಲ್ಲಿ ಅದಕ್ಕಿಂತಲೂ ಮಿಗಿಲಾದುದು ಯಾವುದೂ ಇಲ್ಲವೆಂದು ಶುಕ್ರನೀತಿ ಸಾರುತ್ತದೆ :- ನಹಿ ಶೌರ್ಯಾತ್ ಪರಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ[2]. ಶೌರ್ಯವಿಲ್ಲದೆ ಜಯದ ಸಾಧ್ಯತೆಯಿಲ್ಲ.

---

**ಆಕರಗಳು**

1) 3.178 2) 10.314

# 17. ಕ್ಷಮಾ

''ಕ್ಷಮ್'' ಎಂಬ ಧಾತುವಿನಿಂದ ನಿಷ್ಪನ್ನವಾಗಿ ''ಸಹಿಸುವುದು'' ಎಂಬರ್ಥದಲ್ಲಿ ಕ್ಷಮಾಗುಣವಿದೆ. ಸಹನೆಯಿಂದ ಕ್ಷಮಿಸುವುದೇನೂ ದೂರವಿಲ್ಲ. ಮಹಾಭಾರತ ಸಹನೆಯನ್ನು ದ್ವಂದ್ವಾರ್ಥದಲ್ಲಿ ವಿರುದ್ಧವಾಗಿ ಉಪಯೋಗಿಸುತ್ತದೆ. ಕ್ಷಮಾ ದ್ವಂದ್ವಸಹಿಷ್ಣುತ್ವಮ್[1] ಕ್ಷಮೆಯೆಂದರೆ ವಿರುದ್ಧವಾದ ಗುಣಗಳನ್ನು ಸಹಿಸಿಕೊಳ್ಳುವುದು. ಅದೇ ಅದರ ಸ್ವರೂಪನೂ ಆಗುತ್ತದೆ. ಸಹನೆಯನ್ನು ಸಹಚಿತ್ತತೆ ಎಂಬರ್ಥದಲ್ಲಿ ತೆಗೆದುಕೊಳ್ಳಬೇಕು. ಅತ್ಯಂತ ಕಷ್ಟಕರವಾದ ಸನ್ನಿವೇಶಗಳಲ್ಲೂ ಸಮತೋಲನ ಕಳೆದುಕೊಳ್ಳದಿರುವುದೇ ಕ್ಷಮಾ. ಬೇರೆಯವರ ಬೈಗಳಿಗಾಗಲೀ, ತೊಂದರೆಗಳಿಗಾಗಲೀ, ನೋವಿಗಾಗಲೀ ಪ್ರತಿಕ್ರಿಯಿಸದೆ ಮುಯ್ಯಿಗೆ ಮುಯ್ಯನ್ನು ಸಾಧಿಸದಿರುವುದೇ ಕ್ಷಮೆ. ಸಾಮಾನ್ಯ ಜನರು ಅದಕ್ಕೆ ಆಹುತಿಯಾಗುತ್ತಾರೆ. ಪ್ರತಿಕ್ರಯಿಸದಿರುವುದು ಬಹಳ ಕಷ್ಟ. ಅದಕ್ಕೆ ಮಾನಸಿಕವಾದ ಶಕ್ತಿಬೇಕು. ಯಾರಿಗದಿದೆಯೋ ಅವರು ಒಬ್ಬರನ್ನು ಮತ್ತೊಬ್ಬರಿಂದ ಬೇರ್ಪಡಿಸುತ್ತಾರೆ. ಬೇರೆಯವರಿಗೆ ಹಿಂದಿರುಗಿ ಹೊಡೆಯುವ ಶಕ್ತಿಯಿದ್ದರೂ ಹಾಗೆ ಮಾಡದೆ ಬೇರೆಯವರ ತಪ್ಪನ್ನು ಕ್ಷಮಿಸುವುದು ನಿಜಕ್ಕೂ ಅವರ ಒಳ್ಳೆಯ ತನಕ್ಕೆ ಒಂದು ಗರಿಯೇ ಸರಿ 'ಶಕ್ತಾನಾಂ ಭೂಷಣಂ ಕ್ಷಮಾ[2] ಶಕ್ತಿಹೀನರಿಗೆ ಅದೊಂದು ಗುಣ; ಕ್ಷಮಾಗುಣೋ ಹ್ಯಶಕ್ತಾನಾಂ[3]. ಈ ಗುಣವೇ ಅವರಲ್ಲಿರುವ ಕುಂದುಕೊರತೆಗಳನ್ನು ಮುಚ್ಚುತ್ತದೆ. ಕ್ಷಮೆಯಿಂಬ ಮಂತ್ರದಿಂದ ವಿಶ್ವವನ್ನು ಜಯಿಸಬಹುದು. ಕ್ಷಮಾ ವಶೀಕೃತಿರ್ಲೋಕೇ[4]. ಕ್ಷಮೆಯಿಂದ ಸಾಧ್ಯವಾಗದ್ದುದು ಯಾವುದೂ ಇಲ್ಲ. ಕ್ಷಮಯಾಕಿಂನ ಸಾಧ್ಯತೆ?

ಮಹಾಭಾರತದ ನಂತರ ಅತ್ಯಂತ ಸುಲಭ ಹಾಗೂ ಸಾರವತ್ತಾದ ವ್ಯಾಖ್ಯೆಯನ್ನು ಕ್ಷಮೆಗೆ ತತ್ತ್ವಾರ್ಥಸಾರ ನೀಡುತ್ತದೆ.

ಕ್ರೋಧೋತ್ಪತ್ತಿನಿಮಿತ್ತಾನಾಂ ಅತ್ಯಂತಂಸತಿಸಂಭವೇ ।
ಆಕ್ರೋಶತಾಡನಾದೀನಾಂ ಆಕುಲುಷ್ಯೋಪರಮಃ ಕ್ಷಮಾ ॥ [5]

ಬೇರೆಯವರ ಬಗ್ಗೆ ಸಂಪೂರ್ಣವಾಗಿ ಕೋಪವನ್ನು ಕಳೆದುಕೊಂಡು ಪ್ರತಿಕ್ರಯಿಸದೇ ಇರುವುದೇ ಕ್ಷಮಾ.ಮತ್ತೊಂದು ಜೈನಗ್ರಂಥವಾದ ಸರ್ವಾರ್ಥಸಿದ್ಧಿಯೂ ಕ್ಷಮಾಗುಣವನ್ನು ವ್ಯಾಖ್ಯಾನಿಸುತ್ತದೆ. ಆದರೆ ಅದರ ವ್ಯಾಪ್ತಿ ಸನ್ಯಾಸಿಗಳಿಗೆ ಮಾತ್ರವೇ ಸೀಮಿತವಾಗಿದೆ. ಅದರ ಪ್ರಕಾರ ಕ್ಷಮಾ ಎಂದರೆ ಮಾನಸಿಕವಾಗಿ ಕೆಟ್ಟದ್ದಲ್ಲದಿರುವುದು. ಯಾವಾಗ ಒಬ್ಬ ಭಿಕ್ಷು ಬೇರೆಯವರ ಮನೆಗೆ ಭಿಕ್ಷೆಗಾಗಿ ಹೋಗುತ್ತಾನೋ ಅವರಿಂದ ತಿರಸ್ಕರಿಸಲ್ಪಟ್ಟರೆ, ಹೀಯಾಳಿಸಲ್ಪಟ್ಟರೆ, ನಿಂದಿಸಲ್ಪಟ್ಟರೆ, ದೈಹಿಕವಾಗಿ ನೋವನ್ನು ಅನುಭವಿಸಿದರೂ ಸಹ ಅದನ್ನು ತಡೆದುಕೊಳ್ಳುವುದು ಕ್ಷಮೆ :-

ಶರೀರ ಸ್ಥಿತಿ ಹೇತುಮಾರ್ಗಣಾರ್ಥಂ ಪರಕುಲ್ಯಾನುಪಗಚ್ಛತೋ
ಭಿಕ್ಷೋಃ ದುಷ್ಟಜನಾಕ್ರೋಶ ಪ್ರಹಸನಾವಜ್ಞಾನತಾಡಾನ ಶರೀರ

ವ್ಯಾಪಾದನಾದೀನಾಂ ಸನ್ನಿಧಾನೇ ಕಾಲುಷ್ಯಾನುತ್ಪತ್ತಿಃ ಕ್ಷಮಾ'.

ಭವಿಷ್ಯ ಪುರಾಣದ ಪ್ರಕಾರ ದೈಹಿಕ, ವಾಚಿಕ, ಮಾನಸಿಕವಾಗಿ ನೋವುಂಟಾದರೂ ಸಹ ಅದರಿಂದ ಕೋಪಗೊಳ್ಳದಿರುವುದು ಮತ್ತು ಅಸಂತುಷ್ಟರಾಗದಿರುವುದು.

ವಾಚಾಮನಸಿಕಾಯೇಚ ದುಃಖೇನೋತ್ಪಾದಿತೇನ ಚ ।
ನಕುಪ್ಯತಿನ ಚಾ ಪ್ರೀತಿಃ ಸಾಕ್ಷಮಾ ಪರಿಕೀರ್ತಿತಾ ॥[7]

ಬ್ರಹ್ಮಾಂಡ ಪುರಾಣದ ಪ್ರಕಾರ

ಆಕೃಷ್ಟೋ ನಿಹತೋವಾಽಪಿ ನಾಕ್ರೋಷೇದ್‌ಯೋನ ಹಂತಿ ಚ।
ವಾಙ್‌ಮನಃ ಕರ್ಮಭಿರ್ವೇತ್ತಿ ತಿತಿಕ್ಷೈಷಾ ಕ್ಷಮಾ ಸ್ಮೃತಾ ॥[8]

ಕ್ಷಮಾ ಎಂದರೆ ಬೇರೆಯವರಿಂದ ಭೌತಿಕವಾಗಿ, ಮಾನಸಿಕವಾಗಿ, ಕಾಯಿಕವಾಗಿ ತೊಂದರೆಗೀಡಾಗಿದ್ದರೂ ಸಹ ಅವರನ್ನು ಕ್ಷಮಿಸುವುದು.

ಬೃಹನ್ನಾರದೀಯ ಪುರಾಣದ ಪ್ರಕಾರ ಕ್ಷಮೆಗೆ ಸಮನಾದ ಖ್ಯಾತಿಯಿಲ್ಲ। ನಾಸ್ತಿಕ್ಷಮಾಸಮಾಖ್ಯಾತಿಃ [9]

ಸ್ಕಾಂದಪುರಾಣದ ಪ್ರಕಾರ ಕೋಪವು ಪಾಪಕ್ಕೆ ದಾರಿಯಾಗುತ್ತದೆ. ದಯೆ ಮುಂದೆ ಸಂತಸವನ್ನು ನೀಡುತ್ತದೆ. ಯಾರು ಬರುತ್ತಿರುವ ಕೋಪವನ್ನು ತಡೆಯುವರೋ ಅವರು ಈ ಲೋಕದಲ್ಲಿ ಬೇರೆ ಲೋಕದಲ್ಲಿಯೂ ಸಹ ಸಂಪೂರ್ಣವಾಗಿ ಸಂತೋಷದಿಂದಿರುತ್ತಾರೆ. ಕ್ಷಮಾಗುಣದಿಂದ ಕೂಡಿಕೊಂಡಿರುವ ಮಾನವರು ನಿಜಕ್ಕೂ ಭಾಗ್ಯವಂತರು :-

ಕ್ರೋಧೇನ ಪಾತಕಂ ಭೂಯಾದ್ ದಯಮಾ ಪ್ರಾಪ್ಯತೇ ಸುಖಂ
ಯಃ ಸಮುತ್ಪತಿತಂ ಕ್ರೋಧಂ ಕ್ಷಮಯೈವ ನಿರಸ್ಯತಿ ।
ಇಹಲೋಕೇ ಪರತ್ರಾಸೌ ಅತ್ಯಂತಂಸುಖಮಶ್ನುತೇ
ಕ್ಷಮಾಯುಕ್ತಾ ಹಿ ಪುರುಷಾ ಲಭಂತೇಶ್ರೇಯ ಉತ್ತಮಮ್ ॥ [10]

ನರಾಭರಣವು ಒಂದು ಗುಣಕ್ಕಿಂತ ಮತ್ತೊಂದನ್ನು ಉದಾತ್ತೀಕರಿಸುತ್ತಾ ಕ್ಷಮೆಯನ್ನೇ ಉತ್ತುಂಗದಲ್ಲಿಡುತ್ತದೆ. ಅದರ ಪ್ರಕಾರ ಸೌಂದರ್ಯವು ಮಾನವನಿಗೆ ಆಭರಣ. ಸದ್ಗುಣ ಸೌಂದರ್ಯಕ್ಕೆ ಆಭರಣ, ಸದ್ಗುಣಕ್ಕೆ ಜ್ಞಾನ ಆಭರಣ, ಕ್ಷಮೆಯು ಜ್ಞಾನಕ್ಕೆ ಆಭರಣ :-

ನರಸ್ಯಾಭರಣಂ ರೂಪಂ ರೂಪಸ್ಯಾಭರಣಂ ಗುಣಃ ।
ಗುಣಸ್ಯಾಭರಣಂ ಜ್ಞಾನಂ ಜ್ಞಾನಸ್ಯಾಭರಣಂ ಕ್ಷಮಾ ॥ [11]

ಕ್ಷಮೆಗೆ ವಿಭಿನ್ನ ಉದ್ದೇಶಗಳಿರುತ್ತದೆ. ತನಗಿಂತ ಮೇಲಿರುವವರ ಬಗ್ಗೆ ಭಯವಿರಬಹುದು (ಹಣದಿಂದಲಾಗಲೀ, ತನಗಿಂತ ಮೇಲಿರುವವರ ಸ್ಥಾನದಿಂದಲಾಗಲೀ)

ತಮಗೆ ಸರಿಸಮಾನರಾದವರನ್ನು ಸಮಾಜಕ್ಕೆ ಹೆದರಿ ಕ್ಷಮಿಸಬಹುದು. ಯಾರು ತನಗಿಂತಲೂ ನಿಕೃಷ್ಟರಾದವನ್ನು ಕ್ಷಮಿಸುವರೊ ಅವರು ನಿಜಕ್ಕೂ ಸಾಧುಗಳು.

ಶ್ರೇಷ್ಠಂತು ಭಯಾತ್ ಕ್ಷಮತೇ ಸಮಂತುಲೋಕಾಪವಾದಭಯಾತ್ ।
ಹೀನಂಯಸ್ತು ಕ್ಷಮತೇಸ ಮಹರ್ಷಿಸಮೋ ನರೋಜ್ಞೇಯಃ ॥ [12]

ಕ್ಷಮೆಯು ನಮ್ಮ ಪೂರ್ವಜರಿಂದ ಅತಿಯಾಗಿ ಸ್ತುತಿಸಲ್ಪಟ್ಟಿದೆ. ಅದು ಎಲ್ಲಾ ಶ್ರೇಷ್ಠಗುಣಗಳ ಬುನಾದಿ. ಕ್ಷಮಾಹಿಮೂಲಂ ಸರ್ವತಪಸಾಂ ವಾಲ್ಮೀಕಿ ರಾಮಾಯಣ ತುಂಬು ಕಂಠದಿಂದ ಕ್ಷಮೆಯನ್ನು ದಾನವೆಂದೂ, ಯಾಗವೆಂದೂ, ಪ್ರಸಿದ್ಧಿಯೆಂದೂ, ಋಜುಮಾರ್ಗವೆಂದೂ ಸಮಸ್ತವಿಶ್ವದ ಸಹಾಯಕವೆಂದೂ ಹೇಳಿದೆ.

ಕ್ಷಮಾದಾನಂ ಕ್ಷಮಾ ಸತ್ಯಂ ಕ್ಷಮಾಯಜ್ಞಶ್ಚ ಪುತ್ರಿಕಾಃ।
ಕ್ಷಮಾಯಶಃ ಕ್ಷಮಾ ಧರ್ಮಃ ಕ್ಷಮಯಾಧಿಷ್ಠಿತಂಜಗತ್ ॥ [13]

ಮಹಾಭಾರತ ಸಾರುತ್ತದೆ. ಅದನ್ನು ಸತ್ಯವೆಂದೂ, ದಾನವೆಂದೂ, ಯಜ್ಞವೆಂದೂ, ಯಶಸ್ಸೆಂದೂ, ಧರ್ಮವೆಂದೂ, ಯಾರು ಬೇರೆಯವರನ್ನು ಕ್ಷಮಿಸುವರೋ ಅವರು ಈ ಲೋಕ, ಬೇರೆ ಲೋಕದಲ್ಲೂ ಇರುವರೆಂದೂ ಸಾರುತ್ತದೆ.

ಕ್ಷಮಾಸತ್ಯಂ ಕ್ಷಮಾ ದಾನಂ ಕ್ಷಮಾಧರ್ಮಃ ಕ್ಷಮಾತಪಃ ।
ಕ್ಷಮಾವತಾಮಯಂ ಲೋಕಃ ಪರಲೋಕಃ ಕ್ಷಮಾವತಾಮ್ ॥ [14]

ಮತ್ತೂ ಮುಂದುವರೆದು ಅದು ಸಾರುತ್ತದೆ. ಕ್ಷಮೆಯೇ ಯಾಶಸ್ಸು, ಕ್ಷಮೆಯೇ ದಾನ, ಕ್ಷಮೆಯೇ ಯುದ್ಧ, ಕ್ಷಮೆಯೇ ಧರ್ಮ, ಕ್ಷಮೆಯೇ ಅಹಿಂಸೆ, ಕ್ಷಮೆಯೇ ಧರ್ಮ, ಕ್ಷಮೆಯೇ ಇಂದ್ರಿಯ ನಿಗ್ರಹ, ಕ್ಷಮೆಯೇ ದಯೆ, ಕ್ಷಮೆಯೇ ಯಜ್ಞ.

ಕ್ಷಮಾಯಶಃ ಕ್ಷಮಾದಾನಂ ಕ್ಷಮಾಯಜ್ಞಃ ಕ್ಷಮಾದಮಃ ।
ಕ್ಷಮಾऽಹಿಂಸಾ ಕ್ಷಮಾರ್ಧರ್ಮಃ ಕ್ಷಮಾಚ ಇಂದ್ರಿಯನಿಗ್ರಹಃ
ಕ್ಷಮಾದಯಾ ಕ್ಷಮಾಯಜ್ಞಃ15

ರಾಮಾಯಣದಂತೆಯೇ ಅದೂ ಸಹ ವಿಶ್ವದ ಸಹಾಯಕನೆನ್ನುತ್ತದೆ.

ಕ್ಷಮಯೇದಂ । ಕ್ಷಮಯೇವ ಧೃತಂ ಜಗತ್[16]. ಅದು ನುಡಿಯುವಂತೆ ಕ್ಷಮಾಗುಣವಿಲ್ಲದ ಮಾನವರು ಭೂಮಿಯಲ್ಲಿದ್ದಿದ್ದರೆ, ಭೂಮಿಯಂತೆ ಆಗ ಜನರಲ್ಲಿ ಸಂಬಂಧಗಳೇ ಉಳಿಯುತ್ತಿರಲಿಲ್ಲ. ಜಗಳಕ್ಕೆ ಕೋಪವೇ ಮೂಲ.

ಯದಿನ ಸ್ಯುರ್ಮನುಷ್ಯೇಷು ಕ್ಷಮಿನಃ ಪೃಥ್ವೀ ಸಮಾಃ ।
ನಸ್ಯಾತ್ ಸಂಧಿ ರ್ಮನುಷ್ಯಾಣಾಂ ಕ್ರೋಧಮೂಲೋಹಿ ವಿಗ್ರಹಃ ॥ [17]

ಕ್ಷಮಾಗುಣವಿರುವವರು ಸ್ವರ್ಗ, ಯಶಸ್ಸು ಹಾಗೂ ಮೋಕ್ಷವನ್ನು ಪಡೆಯುತ್ತಾರೆ. ಆದ್ದರಿಂದಲೇ ಅದನ್ನು ಶ್ರೇಷ್ಠವೆಂದು ಹೇಳಿರುವುದು:-

ಕ್ಷಮಾವಾನ್ ಪ್ರಾಪ್ನುಯಾತ್ ಸ್ವರ್ಗಂ ಕ್ಷಮಾವಾನ್ ಆಪ್ನುಯಾದ್ ಯಶಃ ।
ಕ್ಷಮಾವಾನ್ ಪ್ರಾಪ್ನುಯಾದ್ ಮೋಕ್ಷಂ ತಸ್ಮಾತ್ ಸಾಧುಃ ಸ ಉಚ್ಯತೇ ॥ [18]

ಅಷ್ಟೇ ಅಲ್ಲ. ಅವನೇ ತೀರ್ಥ. ಅವನು ಪಾವಿತ್ರತೆಯ ಅಂಗ. ಏಕೆಂದರೆ ಬೇರೆಯವರು ಅವನನ್ನು ಗೌರವಿಸಲಿ, ತೆಗಳಲಿ, ಬಯ್ಯಲಿ ಅಥವಾ ಹಿಂಸಿಸಲಿ ಎಲ್ಲರನ್ನೂ ಕ್ಷಮಿಸುವನು :-

ಮಾನಿತೋऽಮಾನಿತೋವಾಪಿ ಪೂಜಿತೋऽಪೂಜಿತೋऽಪಿ ವಾ ।
ಆಕೃಷ್ಟಃ ತರ್ಜಿತೋವಾऽಪಿ ಕ್ಷಮಾವಾನ್‌ತೀರ್ಥಮುಚ್ಯತೇ ॥ [19]

ಅಷ್ಟಕ್ಕೆ ಮಹಾಭಾರತ ನಿಲ್ಲಿಸುವುದಿಲ್ಲ. ಅದು ಅವನನ್ನು ಬ್ರಹ್ಮನ ಸ್ಥಾನಕ್ಕೆ ಏರಿಸುತ್ತದೆ. ಯದಾ ಹಿ ಕ್ಷಮತೇ ಸರ್ವಾನ್ ಬ್ರಹ್ಮ ಸಂಪದ್ಯತೇ ತದಾ ।

ಯಾರು ತನ್ನನ್ನು ಪೀಡಿಸಿದ್ದಾರೋ, ತೊಂದರೆಕೊಟ್ಟಿದ್ದಾರೋ ಅಂತಹವರನ್ನು ಕ್ಷಮಿಸಲು ನೈತಿಕ ಧೈರ್ಯಬೇಕು. ಆದ್ದರಿಂದಲೇ ಕ್ಷಮಾಗುಣವಿರುವವನು ಸಾಮಾನ್ಯನಿಗಿಂತಲೂ ಶಕ್ತಿವಂತನೆಂದು ಹೇಳಲಾಗಿದೆ. ಅವನಲ್ಲಿರುವ ವಿಶಿಷ್ಟಗುಣವೇ ಅವನು ಬೇರೆಯವರಿಂದ ಬೇರೆಯಾಗಿರುತ್ತಾನೆ.

ಸೀತಾರಾಮರು ಭಾರತೀಯ ಪರಂಪರೆಯಲ್ಲಿ ಅತ್ಯದ್ಭುತ ಪಾತ್ರಗಳು. ಅವರು ಧೈರ್ಯ, ಪರಸ್ಪರ ಗೌರವ, ಮಾನಸಿಕ ಸ್ಥಿರತೆ, ಸತ್ಯದಿಂದಲೇ ಅದ್ಭುತ. ಅವರಲ್ಲಿದ್ದ ಕ್ಷಮಾಗುಣದಿಂದ, ರಾಮನ ಆದೇಶದಂತೆ ಹನುಮಂತ ಸೀತೆಯ ಬಳಿಗೆ ಬಂದಾಗ ಅವನ ಕ್ಷೇಮವನ್ನು ಅರುಹಲು ಹಾಗೂ ರಾವಣನನ್ನು ಕೊಲ್ಲಲು ಅವನು ಅವಳ ಅನುಮತಿ ಬೇಡುತ್ತಾನೆ. ಯದಿ ತ್ವಂ ಅನುಮನ್ಯಸೇ[20]. ರಾಕ್ಷಸಿಯರನ್ನು ಕೊಲ್ಲಲು ಹಂತುಮಿಚ್ಛಾಮಿ, ಯಾರು ಅವಳನ್ನು ಹಿಂದೆ ಬೆದರಿಸಿದ್ದರೋ ಯೇಭಿಸ್ತ್ವಂ ತರ್ಜಿತಾ ಪುರಾ. ಸೀತೆ ಅದನ್ನು ಸಮ್ಮತಿಸದೆ ಅವರನ್ನು ಕ್ಷಮಿಸುತ್ತಾಳೆ. ದಾಸೀನಾಂ ರಾವಣಸ್ಯಾಹಂ ಮರ್ಷಯಾಮೀಹದುರ್ಬಲಾ.[21]

ಅವಳಿಗೆ ಅವರ ಬಗ್ಗೆ ಕನಿಕರವುಂಟಾಗುತ್ತದೆ. ದೀನವತ್ಸಲಾ. ಅವರು ಕೇವಲ ರಾಜಾಜ್ಞೆಯನ್ನು ಪಾಲಿಸುತ್ತಿದ್ದರು. ರಾಜಸಂಶ್ರಯವಶ್ಯಾನಾಂ ಕುರ್ವತೀನಾಂ ಪರಾಜ್ಞಯಾ[22]. ತನ್ನ ಎಲ್ಲಾ ಕಷ್ಟಗಳಿಗೂ ತನ್ನ ದುರ್ದೈವವನ್ನೇ ಸೀತೆ ನಿಂದಿಸುತ್ತಾಳೆ. ಭಾಗ್ಯವೈಷಮ್ಯ ದೋಷೇಣ[23] ಅನಂತರ ಅವಳು ಶ್ಲೋಕಗಳ ಸಾಲುಗಳನ್ನೇ ಉದ್ಧರಿಸುತ್ತಾಳೆ – ಒಂದು ಕಾಡುಹಂದಿ ಹುಲಿಗೆ ಹೇಳಿದಂತೆ. ಧಾರ್ಮಿಕ ಸಹಾಯವಿರುವ ಪುರಾಣದಂತೆ ಯಾರೂ ಸಹ ಕೆಟ್ಟಕೃತ್ಯಗಳಿಗೆ ತಮ್ಮನ್ನು ಹೊಣೆಗಾರಿಕೆ ಮಾಡಿಕೊಳ್ಳಲು ಇಚ್ಛಿಸುವುದಿಲ್ಲ. ಆದ್ದರಿಂದ

ಪುಣ್ಯಾತ್ಮರು ಸನ್ನಡೆಯುಳ್ಳವರು ಕ್ಷಮೆಯನ್ನನುಸರಿಸುತ್ತಾರೆ. ಯಾರು ಸಾವಿಗೆಯೋಗ್ಯರೋ, ಯಾರು ಸಾಹಸಗಳನ್ನು ಮಾಡುವರೋ ಅವರಲ್ಲೂ ಸಹ ದಯೆ ತೋರುವುದು ಯುಕ್ತ. ಯಾರು ತಪ್ಪನ್ನು ಮಾಡುವುದಿಲ್ಲ? ಹಿಂಸಕರಾಗಿರುವವರ ಬಗ್ಗೆಯೂ ಹಿಂಸೆ ತೋರುವುದು ಯುಕ್ತವಲ್ಲ, ನಾವಿಗರು, ಕೊಲ್ಲುವುದರಲ್ಲೇ ಆಸಕ್ತರು. ತಪ್ಪನ್ನೇ ಮಾಡುವವರು. ಅವರೂ ಕ್ಷಮಾಯೋಗ್ಯರು. ಸೀತೆ ನಿಜಕ್ಕೂ ಕ್ಷಮಾ ದೇವತೆಯೇ!

ಸೀತೆಯಂತೆಯೇ ರಾಮನೂ ಸಹ. ರಾವಣನೊಡನೆ ಯುದ್ಧಮಾಡಿ ಅವನನ್ನು ಕೊಂದ ನಂತರ ವಿಭೀಷಣನನ್ನು ಉತ್ತರಕ್ರಿಯೆ ಮಾಡುವಂತೆ ಹೇಳುತ್ತಾನೆ. ಕ್ರಿಯತಾಮಸ್ಯ ಸಂಸ್ಕಾರಃ[25]. ಅಷ್ಟಕ್ಕೆ ನಿಲ್ಲಿಸುವುದಿಲ್ಲ. ರಾವಣ ವಿಭೀಷಣನಿಗೆ ಎಷ್ಟು ಪ್ರಿಯನೋ ತನಗೂ ಅಷ್ಟೇ ಪ್ರಿಯನೆಂದೂ ಹೇಳುವನು. ವೈರವು ಸಾವಿನಿಂದ ಕೊನೆಯಾಗಬೇಕು. ಮರಣಾಂತಾನಿ ವೈರಾಣಿ (ಸೀತಾಪಹರಣಕ್ಕೆ ಪ್ರತಿಯಾಗಿ ಸೇಡನ್ನು ತೀರಿಸಿಕೊಂಡ ನಂತರ) ನಿರ್ವೃತ್ತಂ ನಃ ಪ್ರಯೋಜನಂ. ಹುಟ್ಟು ಶತ್ರುವೂ ಸಹ ಅವನ ಅನಂತ ಗುಣಗಳಿಂದ ಪ್ರಿಯನಾಗುತ್ತಾನೆ.

ಯಾರೂ ಯಾವ ಸಂದರ್ಭದಲ್ಲೂ ತಪ್ಪನ್ನೇ ಮಾಡಿಲ್ಲವೆಂದು ಹೇಳಲಾಗದು. ಸಾಯುವವರೆಗೆ ಅವರೊಡನೆ ದ್ವೇಷ ಸಾಧಿಸಬೇಕು ಹಾಗೆ ಮಾಡಿದ್ದೇ ಆದರೆ, ನಾವು ಬೇರೆಯವರು ನಮಗೆ ತೊಂದರೆ ಕೊಟ್ಟಂತೆ ಆಗುವುದಲ್ಲದೆ ಪ್ರತಿಕ್ಷಣ ನಮ್ಮ ಜೀವನವನ್ನು ತಮ್ಮ ಹಿಡಿತದಲ್ಲಿಟ್ಟಂತಾಗುತ್ತದೆ. ಪ್ರತೀಕಾರ ಬುದ್ಧಿ ಹಾಗೂ ಪ್ರಕ್ಷುಬ್ಧತೆ ನಮ್ಮಲ್ಲಿ ಆವೇಶವಾಗಿ ನಮ್ಮ ಜೀವವನ್ನೇ ತೆಗೆಯುತ್ತದೆ.

ನಮಗೆ ನಮ್ಮ ಅಸಂಪೂರ್ಣತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಬೇರೆಯವರನ್ನು ಕ್ಷಮಿಸಬೇಕಾಗುತ್ತದೆ ಅದರಿಂದಲೇ ನಮ್ಮ ಮಾನಸಿಕ ಹಾಗೂ ಆಧ್ಯಾತ್ಮಿಕ ಒಳಿತಾಗುತ್ತದೆ.

ನಮಗೆ ನಮ್ಮ ತಪ್ಪುಗಳು ಕಾಣುವುದಿಲ್ಲ. ಅದನ್ನು ಬೇರೆಯವರು ನಮಗೆ ತೋರಿಸಿದಾಗ ನಾವು ಅವರಿಗೆ ಕೃತಜ್ಞರಾಗಿದ್ದು ಕಿವಿಗೊಟ್ಟುಕೇಳಬೇಕು. ಬೇರೆಯವರಲ್ಲಿರುವ ಅವಗುಣ ನೋಡಲು ಕಾತುರರಾಗಿರಬಾರದು. ಬೈಬಲ್ ಹೇಳುತ್ತದೆ - ''ಏತಕ್ಕೋಸ್ಕರ ನೀನು ನಿನ್ನ ತಮ್ಮನ ಕಣ್ಣಿನಲ್ಲಿ ಬಿದ್ದಿರುವ ಧೂಳನ್ನು ನೋಡುವೆ ನಿನ್ನ ಕಣ್ಣಿನಲ್ಲಿ ಮರದ ತುಂಡೇ ಬಿದ್ದಿರುವಾಗ''.

ಕೆಲವು ಬಾರಿ ಜನರು ನಮ್ಮನ್ನು ಹೊಟ್ಟೆಕಿಚ್ಚಿನಿಂದ ಅಥವಾ ನಕಾರಾತ್ಮಕ ಭಾವನೆಗಳಿಂದ ತಪ್ಪು ಕಂಡು ಹಿಡಿಯುತ್ತಾರೆ. ನಾವು ಅವರನ್ನು ಗಂಭೀರವಾಗಿ ಭಾವಿಸಿದರೆ ನಮ್ಮ ವೈಯಕ್ತಿಕ ಘನತೆ ಕಡಿಮೆಯಾಗುತ್ತದೆ. ನಮ್ಮ ನಮ್ಮ ಬದುಕಿನ ಹೋರಾಟ ದುರ್ಬಲ ಮಾಡುತ್ತದೆ. ನಮಗೇನಾದರೂ ರೋಗವಿದ್ದರೆ ಅಥವಾ ಮಾನಸಿಕ ತೊಂದರೆಯಿದ್ದರೆ ನಮ್ಮ ಅಸಂಪೂರ್ಣತೆಯನ್ನು ಅರಿತು ಅದಕ್ಕೆ ವೈದ್ಯಕೀಯ ಅಭಿಪ್ರಾಯ ತಾಳಬೇಕೇ ಹೊರತು ಸಮಸ್ಯೆಯನ್ನು ನಿರಾಕರಿಸಬಾರದು.

ನಮ್ಮ ಮನೆಯವರು ನಮಗೆ ಮಾಡಿರುವಂತಹ ಕೆಟ್ಟದ್ದನ್ನು ಹಚ್ಚಿಕೊಳ್ಳದೆ ಅದರ ಬಗ್ಗೆ ನಿರ್ಣಯವನ್ನು ಆತುರವಾಗಿ ತೆಗೆದುಕೊಳ್ಳಬಾರದು. ಪ್ರಾಯಶಃ ನಾವು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ ಅಥವಾ ಅವರು ನಮ್ಮನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ. ನಮ್ಮ ಮನೆಯಲ್ಲಿ ಯಾರಿಗಾದರೂ ಮುಂಗೋಪವಿದ್ದರೆ ಅವನು / ಅವರು ಮಾತಾಡುವಾಗ ನಾವು ನಿಃಶಬ್ದವಾಗಿರಬೇಕು. ಅನಂತರ, ಅವರ ವ್ಯಕ್ತಿತ್ವದ ಶಕ್ತಿಯನ್ನು ನಾವು ಮನಗಾಣಬಹುದು.

ಪ್ರಾಯಶಃ ಕ್ಷಮಾಗುಣದ ಬಗ್ಗೆ ಮನಃಶಾಸ್ತ್ರಜ್ಞರಾದ ಜನೆಟ್ ರೇನ್‌ವಾಟ್ ಏನು ಹೇಳುವರೆಂದು ನೋಡಬಹುದು. ಕ್ಷಮೆಯೆಂಬುದು ಮಾನವ ಏನು ಮಾಡಿದರೆಂಬುದರ ಬಗ್ಗೆ ಒಪ್ಪಿಕೊಳ್ಳುವುದಲ್ಲ ಅದು ನೀವು ಘಾಸಿಗೊಳಿಸಿದವರ ಅಶಕ್ತತೆ ಸೂಚಿಸುತ್ತದೆ. ನೀವೂ ಅವರ ಸ್ಥಿತಿಯಲ್ಲಿದ್ದಿದ್ದರೆ ಅದನ್ನೇ ಮಾಡುತ್ತಿದ್ದಿರಿ.

ಮಾನವನಿಗೆ ಕೊಟ್ಟಿರುವಂತಹ ಅತ್ಯಂತ ಸೃಜನಾತ್ಮಕ ಕ್ರಿಯೆ ಎಂದರೆ ಹಿಂದಿನ ಗಾಯಗಳನ್ನು ಮರೆಯುವುದು, ಬೇರೆಯವರನ್ನು ಕ್ಷಮಿಸುವುದು. ಕ್ಷಮೆಯೆಂಬುದು ಭಗವಂತ ನಿಮಗೆ ನೀಡಿರುವ ಕೊಡುಗೆ. ಅದು ಅನ್ಯಸಾಮರಸ್ಯಕ್ಕೆ ಒಂದಾಗಿ ನಾವು ಜೀವನದಲ್ಲಿ ನಡೆದ ಘಟನೆಗಳನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಕ್ಷಮೆಯೇ ಅಧ್ಯಾತ್ಮದ ಜೀವಾಳ ಏಕೆಂದರೆ ಅವು ನಮ್ಮನ್ನು ನೋವಿನನುಭವದಿಂದ ಪಾರು ಮಾಡುತ್ತದೆ.

ಕ್ಷಮೆಯ ಮಹತ್ವವನ್ನು ವಿವರಿಸಲು ಸಿಖ್ಖರಧರ್ಮ ಗ್ರಂಥವಾದ ಗುರುಗ್ರಂಥದಲ್ಲಿ ಅನೇಕ ಹೇಳಿಕೆಗಳಿವೆ. ''ಬುರೇ ದ ಭಲಾ ಮನಾ ಗುಸ್ಸಾ ಮನ್ ನ ವಸಾ '' ಯಾರು ನಿಮ್ಮನ್ನು ಕೇವಲವಾಗಿ ನಡೆಸಿಕೊಳ್ಳುವರೋ ಅವರ ಬಗ್ಗೆ ನೀವು ಕ್ಷಮೆಯಿಂದಿರಿ. ನಿಮ್ಮ ಮನಸ್ಸಿನಲ್ಲಿ ಕೋಪವುಂಟಾಗಲು ಅವಕಾಶ ಮಾಡದಿರಿ.

ನಾವು ಕೆಲವು ಸಲ ಕ್ಷಮಿಸುವುದು ಪಲಾಯನವೆಂದು ಭಾವಿಸುತ್ತೇವೆ. ಕಾರ್ಯವಿಮುಖತೆ ಅಥವಾ ಹೇಡಿತನ ಯಾರು ಅಸಮರ್ಥರೋ ಅವರು ಮಾತ್ರ ಕ್ಷಮಿಸುತ್ತಾರೆ ಎಂದು. ಅದು ಹಾಗಲ್ಲ, ಕ್ಷಮೆಯು ಮಾನವನನ್ನು ಹೇಡಿಯಾಗಿ ಮಾಡುವುದಿಲ್ಲ. ಬೈಬಲ್ ಪ್ರಕಾರ ಕ್ಷಮೆಯೇ ಶಕ್ತಿಯ ಸಂಕೇತ.

ಕ್ಷಮೆಯು ನಮ್ಮ ವಿಶ್ವಾಸ ಭಂಗ ಮಾಡಿದವರೊಡನೆ ಸಂಧಿ ಅಥವಾ ರಾಜಿ ಮಾಡಿಕೊಳ್ಳಬೇಕೆಂದಲ್ಲ ಅಥವಾ ಅವರ ಮನೋಭಾವ ನಾವು ಒಪ್ಪಿಕೊಂಡಿರುವೆವು ಎಂದೂ ಅಲ್ಲ. ಅದು ನಮ್ಮೊಳಗಿರುವ ಕೋಪ ಅಥವಾ ದ್ವೇಷವನ್ನು ದೂರಮಾಡಿದೆ. ಅದೇ ನಮಗೆ ತೊಂದರೆ ನೀಡುತ್ತಿತ್ತು ಎಂದು ಮಾತ್ರ ತಾತ್ಪರ್ಯ. ಕ್ಷಮೆಯು ನಮಗೆ ಕೇಡು ಮಾಡಿದವನ ಬಗ್ಗೆ ಇದ್ದ ಕೆಟ್ಟ ಭಾವನೆಯನ್ನು ದೂರಮಾಡುತ್ತದೆ. ಅದು ನಮ್ಮನ್ನು ಮುಂದಿನ ಕಾರ್ಯಗಳಿಗೆ ಮಾರ್ಗದರ್ಶನ ಮಾಡುತ್ತದೆ.

ಕ್ಷಮೆಯ ಮೊದಲ ಹಂತವೆಂದರೆ ನಾವು ನಮ್ಮ ದ್ವೇಷ ಸಾಧಿಸುವುವರಿಂದ ಬೇರೆಯವರಿಗೆ ಅಸಂತೋಷವನ್ನುಂಟುಮಾಡುವುದರೊಂದಿಗೆ ನಮ್ಮನ್ನೇ ದುಃಖಿಯುಕ್ತವಾಗಿ ಮಾಡುತ್ತೇವೆ.

ಸತ್ಯವೆಂದರೆ, ಹಿಂದಿನ ಕೃತಿಗೆ ತೊಡಗಿಸಿಕೊಂಡಿರುವುದು. ಬೇರೆಯವರನ್ನು ಸೋಲಿಗೆ ಕಾರಣ ಮಾಡುವುದಲ್ಲ ನಮ್ಮ ಒಳಿತಿಗೇ ಅದು ಮಾರಕವಾಗುತ್ತದೆ. ಮಾರ್ಟಿನ್ ಲೂಥರ್ ಹೇಳುವಂತೆ ಕ್ಷಮೆಯಿಂದಲೇ ನಿಜವಾದ ಸಂತೋಷ.

ಬುದ್ಧ ಹೇಳಿದ್ದ – ಕ್ಷಮೆಗೆ ಸಮಾನವಾದ ಸೇಡೇ ಇಲ್ಲ ಎಂದು. ಅದು ಕೇವಲ ಹೇಳಿಕೆ ಮಾತ್ರವಲ್ಲ. ನಮ್ಮ ಶಾಂತಿಯನ್ನು ಕಾಪಾಡಿಕೊಳ್ಳಲು ಅದೊಂದೇ ಮಾರ್ಗ. ಅಸಮಾಧಾನದ ಕಾರಣವನ್ನು ಪೋಷಿಸುವುದು ಆರೋಗ್ಯಕ್ಕೆ ಅತ್ಯಂತ ಹಾನಿಕಾರವಾದುದು.

ಕ್ಷಮೆಯು ಭಗವಂತನ ವರ. ಅದು ಹೃದಯಾಂತರಾಳದಿಂದ ಉಂಟಾಗುತ್ತದೆ. ಕ್ಷಮೆಯಿಂದ ಪ್ರತೀಕಾರದ ವಿಷ ಮಾಯವಾಗುತ್ತದೆ. ಕ್ಷಮಿಸಿದವನು ಪ್ರೇಮ, ಸಂತಸ, ವಿನಯ ಹಾಗೂ ಸಮಾಧಾನಕ್ಕೆ ಕಾರಣನಾಗುತ್ತಾನೆ.

ಈ ದಿಸೆಯಲ್ಲೇ ಜೀಸಸ್ ಮಾರ್ಕ್. 2.25ನಿಗೆ ನುಡಿದದ್ದು ದಾರಿದೀಪವಾಗುತ್ತದೆ. ನೀವು ಪ್ರಾರ್ಥನೆ ನಡೆಸುವಾಗ ಬೇರೆಯವರನ್ನು ಕ್ಷಮಿಸಿ. ಆ ಸಮಯದಲ್ಲಿ ನಿಮಗೆ ಯಾರ ಬಗ್ಗೆಯಾದರೂ ಕೆಟ್ಟ ಭಾವನೆಯಿದ್ದರೆ ಆ ಭಗವಂತ ನಿಮ್ಮನ್ನು ಕ್ಷಮಿಸುವನು. ನೀವು ಬೇರೆಯವರನ್ನು ಕ್ಷಮಿಸದಿದ್ದರೆ ಬೇರೆಯವರಿಂದ ನೀವೂ ಕ್ಷಮೆಗೆ ಪಾತ್ರರಲ್ಲ. ಆದರೆ ನೀವು ಅನುಭವಿಸಿದ ಕೇಡು ಅತ್ಯಂತ ನೋವನ್ನುಂಟುಮಾಡುತ್ತದೆ. ಅದರಿಂದ ಹೊರಬರಲು ಕಠಿಣವಾಗುತ್ತದೆ.

ಈ ಕ್ಷಮಾಗುಣವೇ ನಮ್ಮನ್ನು ಸೇಡು ತೀರಿಸಿಕೊಳ್ಳುವುದರಿಂದ ಕಾಪಾಡುತ್ತದೆ. ಅವೆರಡೂ ಒಟ್ಟಿಗಿರಲು ಸಾಧ್ಯವಿಲ್ಲ. ನಾವು ಪ್ರೇಮದ ಬೀಜ ಬಿತ್ತಿದರೆ ಅದರಿಂದ ಪ್ರೀತಿಯ ಮರವೇ ಬೆಳೆದು ಅನುಕಂಪ ಎಂಬ ಹೂವು ಬಿಡುತ್ತದೆ.

ಭಯ ಹಾಗೂ ಪ್ರತೀಕಾರ ಬುದ್ಧಿಯಿಂದ ನಾವೇನಾದರೂ ಮುಳ್ಳಿನ ಪೊದೆಯನ್ನುಂಟು ಮಾಡಿದರೆ ಅದರಿಂದ ಎಂದೂ ಸಹ ರುಚಿಯಾದ ದ್ರಾಕ್ಷಿಯನ್ನು ತೆಗೆದುಕೊಳ್ಳಲಾಗುವುದಿಲ್ಲ. ಹಾಗೆಯೇ ನಾವು ರಯಾನ್ ಬಟ್ಟೆಯಿಂದ ಉಣ್ಣೆ ಅಥವಾ ಜರಿ ಬಟ್ಟೆಯನ್ನು ನೇಯಲಾಗುವುದಿಲ್ಲ.

ಕ್ಷಮಿಸುವುದು ಅದನ್ನು ಮರೆಯುವುದು ಎನ್ನುವುದೇ ಸಾಧು ಸಂತರ ಮಾರ್ಗ ಮತ್ತು ಯಾರು ಅವರನ್ನು ಹಿಂಬಾಲಿಸುವರೋ ಅವರ ಮಾರ್ಗ. ಅಹಂಕಾರವೆಂಬ ಬೆಂಕಿಯು ಅವನನ್ನೇ ಸುಡುತ್ತದೆ.

ಯಾರು ಕ್ಷಮಾಗುಣವನ್ನು ಹೊಂದಿರುವರೋ ಅವರು ಎಂದೂ ಸಹ ನಾವು ಒಳ್ಳೆಯವರೆಂದು ಸಾರುವುದಿಲ್ಲ, ಬೇರೆಯವರನ್ನು ಕ್ಷಮಿಸಿ ಅದನ್ನು ಮರೆಯುವವನು ನಿಜಕ್ಕೂ ಶಕ್ತಿಶಾಲಿ.

ಮಾನವನ ಜೀವಿತ ಅತ್ಯಂತ ಅಲ್ಪ ಕಾಲವಾಗಿದ್ದರಿಂದ ನಾವು ಸಮಯ ದುರುಪಯೋಗ ಮಾಡಿಕೊಳ್ಳಲಾಗುವುದಿಲ್ಲ. ಆದರಿಂದ ಬೇರೆಯವರು ತಾನು ಮಾಡಿದ ಕೇಡನ್ನು ನೆನಪಿಸಿಕೊಳ್ಳಬಾರದು.ಅವನು ಅದರಿಂದ ಮುಂದೆ ಸರಿಯಬೇಕು.

ಹೇಗೆ ಒಂದೇ ನಾಣ್ಯಕ್ಕೆ ಎರಡು ಮುಖಗಳಿರುವುದೋ ಹಾಗೆಯೇ ಕ್ಷಮೆಗೂ ಎರಡು ಮುಖಗಳಿವೆ. ಅದು ಅಸಮರ್ಥತೆ ಎಂದು ಎಣಿಸುವ ಸಾಧ್ಯತೆಯೂ ಇರುತ್ತದೆ. ನಮ್ಮ ಹಿಂದಿನವರು ಅದನ್ನು ಬಹಳ ಬೇಗನೆ ತಿಳಿದು ಕಂಡುಹಿಡಿದಿದ್ದರು. ಕ್ಷಮಿಸುವುದು ಕೆಲವು ಸಲ ಒಳಿತನ್ನುಂಟುಮಾಡಿದರೂ ಸಹ ಎಂದೆಂದೂ ಹಾಗೆಯೇ ಆಗುವುದೆಂದು ಹೇಳಲಾಗುವುದಿಲ್ಲ. ನನಿತ್ಯಂ ಶ್ರೇಯಸೀ ಕ್ಷಮಾ[25] ಎಂದು ಮಹಾಭಾರತ ಆದೇಶ ನೀಡುತ್ತದೆ. ಪೃಥ್ವೀರಾಜ ಚೌಹಾನನು ಇಪ್ಪತ್ತೊಂದು ಬಾರಿ ಮಹಮ್ಮದ್ ಘೋರಿಯನ್ನು ಕ್ಷಮಿಸಿದ್ದರೂ ಸಹ ಅದು ಘೋರಿಯ ಹೃದಯವನ್ನು ಪರಿವರ್ತಿಸಲಿಲ್ಲ. ಅವನು ಇಪ್ಪತ್ತೆರಡನೇ ಬಾರಿ ಪೃಥ್ವೀರಾಜನನ್ನು ಹಿಡಿದಾಗ ಆಗ ಅವನು ಕಣ್ಣನ್ನು ಕಳೆದುಕೊಂಡ. ಆದ್ದರಿಂದ ಕ್ಷಮೆಯನ್ನು ಸರಿಯಾದ ಆಯ್ಕೆಯ ಮೂಲಕವೇ ಎಲ್ಲರನ್ನೂ ಕ್ಷಮಿಸುತ್ತಾ ಹೋಗುವನೋ ಅವನು ತನ್ನ ಹಳ್ಳವನ್ನು ತಾನೇ ತೋಡಿಕೊಂಡಂತಾಗುತ್ತದೆ. ಅಂತಹವನು ತನ್ನ ಸೇವಕರಿಂದ, ಶತ್ರುಗಳಿಂದ, ತನ್ನ ಬಗ್ಗೆ ಅನಾಸಕ್ತರಾಗಿರುವವರಿಂದ ಅವಹೇಳನಕ್ಕೆ ಕಾರಣನಾಗುತ್ತಾನೆ. ಅಂತಹವನ ಹೆಂಡತಿಯ ಬಗ್ಗೆಯೂ ಬೇರೆಯವರು ಕಣ್ಣುಹಾಕಲು ಹೇಸುವುದಿಲ್ಲ. ಆಗ ಅವಳು ಕಿಂಕರ್ತವ್ಯತಾ ಮೂಢಳಾಗಿ ಮನಬಂದಂತೆ ಮಾಡುತ್ತಾಳೆ.

ಅಥಾಸ್ಯ ದಾರಾನಿಚ್ಛಂತಿ ಪರಿಭೂಯಕ್ಷಮಾವತಃ ।
ದಾರಾಶ್ಚಾಸ್ಯ ಪ್ರವರ್ತಂತೇ ಯಥಾಕಾಮಂ ಅಚೇತಸಃ ॥[26]

ಕ್ಷಮೆಯಿಂದ ಅವನು ತನಗೆ ತಾನೇ ಶಾಂತಿಯನ್ನು ತಂದುಕೊಳ್ಳಬಹುದು. ಆದರೆ ಅದರಿಂದ ತನ್ನ ಶತ್ರುವಿನ ಹೃದಯ ಪರಿವರ್ತನೆ ಮಾಡಬಹುದೆಂದು ಭಾವಿಸಿದರೆ ಅವನು ಮೂರ್ಖರ ಸ್ವರ್ಗದಲ್ಲಿರುತ್ತಾನೆ. ಅದು ಒಂದು ಲಕ್ಷದಲ್ಲಿ ಒಂದಿರಬಹುದು. ಅದನ್ನು ಶಕ್ತಿಯಿಲ್ಲದವರೆಂದೂ ಪರಿಗಣಿಸಬಹುದು. ಅದು ಕೆಟ್ಟ ಮನುಷ್ಯನಿಗೆ ಮತ್ತು ಕೆಟ್ಟದ್ದನ್ನು ಮಾಡಲು ಪ್ರೇರೇಪಣೆಯನ್ನು ನೀಡಬಹುದು. ಒಬ್ಬ ಆತಂಕವಾದಿಯನ್ನು ಕ್ಷಮಿಸಿದರೆ, ಅವನೂ ಸಹ ದುಷ್ಕೃತ್ಯದಲ್ಲಿ ತೊಡಗುತ್ತಾನೆ. ಸೆರೆಮನೆಯಿಂದ ಹೊರಬಂದು ಯಾರಿಗೆ ಅಂತಃಸಾಕ್ಷಿ ಸತ್ತಿಲ್ಲವೋ ಅವರಲ್ಲಿ ಮಾತ್ರವೇ ಕ್ಷಮೆ ಕೆಲಸಮಾಡುವುದು. ಮಿಕ್ಕವರಿಗೆ ಅದು ಲೋಪ ದೋಷಕ್ಕೆ ಕಾರಣವಾಗಬಹುದು. ಅದು ರಾಜತಂತ್ರವಾಗಿ ಫಲಿಸುವುದಿಲ್ಲ.

ಆದ್ದರಿಂದ, ಅಂತಿಮವಾಗಿ ಕ್ಷಮೆಯು ಶಕ್ತಿಯಿಂದಲೇ ಶೋಭಿಸುತ್ತದೆ. ಅದು ತಪ್ಪಿತಸ್ಥರಿಗೆ ಮನವರಿಕೆ ಮಾಡಿಕೊಡಬೇಕು. ಅವರು ಕ್ಷಮೆ ಹೊಂದಿರುವುದು ನಮ್ಮ ತಪ್ಪಿನಿಂದ ಪಾರಾಗುವುದಕ್ಕೆ ಅಲ್ಲವೆಂದು.

---

**ಆಕರಗಳು**

1) ವನಪರ್ವನ್ 313.88 2) ಅದೇ 33.49 3) ಅದೇ 4) ಅದೇ 33.40 5) 6.14 6) 6.9 7) 1.2.159 8) ಪೂರ್ವ ಅಧ್ಯಾಯ 32.49 9) 2.32 10) ವೈ.ಶಾ.ಪಾ.ಮ. 11.18.19.11.18.19 11) 21 12) ನೀತಿದ್ವಿಷಷ್ಟಿಕಾ 64 13) 1.33.8.9 14) ವಿರಾಟಪರ್ವನ್ 16.42 15) ಅಶ್ವಮೇಧಿಕ ಪರ್ವ, 92 ಸದರನ್ ಆವೃತ್ತಿ 19.11 16) ವಿರಾಟಪರ್ವ 29.37 17) ವನಪರ್ವ 29.25 18) ಅಶ್ವಮೇಧಿಕ ಪರ್ವ 82 19) ಅದೇ. 82. ದಕ್ಷಿಣ ಆವೃತ್ತಿ 19.11 20) ರಾಮಾಯಣ 6.113.28 21) ಅದೇ 6.113.39 22) ಅದೇ 6.113.36 23) ಅದೇ 6.113.37 24)ಅದೇ 6.111.101 25) ವನಪರ್ವ 28.6. 26) ಅದೇ 28.14

# 18. ವಿವೇಕ

ಮಾನವೀಯ ಮೌಲ್ಯಗಳನ್ನು ದೈಹಿಕ, ಮಾನಸಿಕ, ಬೌದ್ಧಿಕ ಹಾಗೂ ತಾತ್ವಿಕ ಎಂದು ವಿಭಜಿಸಬಹುದು. ಬೌದ್ಧಿಕ ಮೌಲ್ಯಗಳಲ್ಲಿ ಒಳ್ಳೆಯದು ಕೆಟ್ಟದ್ದನ್ನು ಬೇರ್ಪಡಿಸುವಂತಹ, ಉಪಯುಕ್ತ, ಅನುಪಯುಕ್ತವನ್ನು ಬೇರ್ಪಡಿಸುವ ಫಲಕಾರಿ ಅಫಲಕಾರಿ ಎಂಬ ವಿವೇಕವುಂಟಾಗುತ್ತದೆ. ವಿವೇಕ ನಮ್ಮ ಜೀವನದ ಎಲ್ಲಾ ಹಂತಗಳಲ್ಲೂ ಎಲ್ಲ ಸಮಯದಲ್ಲೂ ಉಪಯೋಗಿಸಬೇಕು. ಅವಿವೇಕವೇ ಎಲ್ಲಾ ತೊಂದರೆಗಳಿಗೆ ಮೂಲ; ಅವಿವೇಕಃ ಪರಮಾಪದಾಂಪದಂ ಯುಧಿಷ್ಠಿರನಿಗೆ ದ್ರೌಪದಿಯು ಕಿರಾತಾರ್ಜುನೀಯದಲ್ಲಿ ಪ್ರತಿಪಾದಿಸುವಂತೆ. ಯಾರು ಯುಕ್ತಾಯುಕ್ತ ವಿವೇಕದಿಂದ ನಡೆಯುವರೋ ಅಂತಹವರನ್ನು ಗುಣವೇ ಅರಸಿ ಬರುವುದು. ವಿಮೃಶ್ಯಕಾರಿಣಂ - ವೃಣತೇಹಿ ಗುಣಲುಬ್ಧಾಃ ಸ್ವಯವೇವ ಸಂಪದಃ. ಕೇವಲ ವಿವೇಕದಿಂದ ಉಪಯೋಗವಿಲ್ಲ ಅದನ್ನು ಸರಿಯಾದ ಸಮಯಕ್ಕೆ ಸರಿಯಾದ ಕಡೆ ಉಪಯೋಗಿಸಬೇಕು. ಆಗಲೇ ನಮ್ಮ ಇಷ್ಟಾರ್ಥಸಿದ್ಧಿಸುತ್ತದೆ. ಆದ್ದರಿಂದ ಪೂರ್ವಾಗ್ರಹಗಳಿಲ್ಲದೆ ನಮ್ಮ ಮನಸ್ಸನ್ನು ಸರಿಯಾದ ದಾರಿಯಲ್ಲಿ ಉಪಯೋಗಿಸಬೇಕು. ತರ್ಕ ಹಾಗೂ ವಿವೇಕದ ಸರಿಯಾದ ಬೆಸುಗೆಯೇ ಜೀವನದಲ್ಲಿ ಗೆಲುವು ಹಾಗೂ ಕಷ್ಟದಿಂದ ಪಾರಾಗಲು ಬೇಕಾಗಿರುವುದು. ಭಗವಂತನೂ ಇದಕ್ಕೆ ಒತ್ತುಕೊಟ್ಟಿದ್ದಾನೆ. ಅರ್ಜುನನಿಗೆ ದೀರ್ಘವಾದ ಉಪದೇಶ ನೀಡಿದ ನಂತರ ಹೇಳುತ್ತಾನೆ. ವಿಮೃಶ್ಯೈತದಶೇಷಣ ಯಥೇಚ್ಛಸಿ ತಥಾ ಕುರು'' ಚೆನ್ನಾಗಿ ಯೋಚಿಸಿದ ನಂತರ ನಿನಗೆ ಇಷ್ಟಬಂದಂತೆ ಮಾಡು.

ಅರ್ಜುನ ತನ್ನ ತೀರ್ಮಾನ ತಾನೇ ತೆಗೆದುಕೊಳ್ಳಬೇಕೆಂದು ಭಗವಂತ ಅವನಿಗೆ ಸ್ವಾತಂತ್ರ್ಯ ನೀಡಿದ್ದಾನೆ. ಭಗವದಾಜ್ಞೆಯಾದ್ದರಿಂದ ಅದನ್ನು ಅವನು ತಳ್ಳಿ ಹಾಕುವಂತಿಲ್ಲ. ಅವನು ಅದನ್ನು ಯೋಚಿಸಬೇಕು. ಮನನಮಾಡಬೇಕು. ಅನಂತರ ಅದು ಸರಿದೋರಿದರೆ ಅದನ್ನು ಸ್ವೀಕರಿಸಬೇಕು. ನಮ್ಮೆಲ್ಲರ ನಿಲುವೂ ಅದೇ ಆಗಿರಬೇಕು. ಬೇರೆಯವರು ಹೇಳಿದಂತೆ ನಾವು ಮಾಡಬಾರದು. ಪ್ರತಿಯೊಂದು ವಿಷಯದ ಆಳಕ್ಕೂ ಪ್ರವೇಶಿಸಿ, ಬೇರೆಯವರ ನುಡಿಯಲ್ಲೇನಾದರೂ ಸ್ವಾರ್ಥವಿದೆಯೇ ಎಂದು ಯೋಚಿಸಿ ನಂತರವೇ ಅದನ್ನು ಅಂಗೀಕರಿಸಬೇಕು. ಹೊರಗಿನ ಸೂತ್ರಕ್ಕೆ ಅದು ತಲೆದೋರಿದರೂ ಸಹ ವಿವೇಕ ಇಲ್ಲೇ ಕೆಲಸ ಮಾಡುವುದು. ವಿವೇಕಿಯಾದ ಬುದ್ಧಿವಂತನಿಗೆ ಅದು ಕಷ್ಟವಾಗಲಾರದು. ಸಂದೇಹವುಂಟಾದಾಗ, ಅವನ ವಿವೇಕಬುದ್ಧಿಯೇ ಅವನಿಗೆ ಏನು ಮಾಡಬೇಕೆಂದು ತಿಳಿಸುತ್ತದೆ. ಅದೇ ಅವನಿಗೆ ಕೊನೆಯ ನಿರ್ಧಾರವಾಗುತ್ತದೆ.

ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃ ಕರಣ ಪ್ರವೃತ್ತಯಃ[5]

ರಾಮಾಯಣದಲ್ಲಿ ರಾಮ ಇದೇ ವಿವೇಕವನ್ನು ಉಪಯೋಗಿಸಿದ ಆದಿಲ್ಲದಿದ್ದರೆ ಆ ಸಂದರ್ಭದಲ್ಲಿ ತೊಡಕುಂಟಾಗುತ್ತಿತ್ತು. ಭರತ ಪ್ರಜೆಗಳೊಂದಿಗೆ ಚಿತ್ರಕೂಟಕ್ಕೆ ಬಂದು ರಾಮನನ್ನು ಹಿಂದಿರುಗುವಂತೆ ಬೇಡುವುದು. ಲಕ್ಷ್ಮಣ ಆ ಸನ್ನಿವೇಶವನ್ನು ಅನ್ಯಥಾ ಭಾವಿಸಿ,

ರಾಮನನ್ನು ಕೊಂದು ತಾನೇ ಸಿಂಹಾಸನ ಸೇರಬೇಕೆಂಬ ದುರ್ಬುದ್ಧಿ ಭರತನಿಗಿದೆಯೆಂದು ಭಾವಿಸುವುದು. ಲಕ್ಷ್ಮಣ ಭರತನ ಬಗ್ಗೆ ಕೋಪೋದ್ರಿಕ್ತನಾದಾಗ ರಾಮನು ಹೇಳುತ್ತಾನೆ. ಸಹೋದರ ಸಹೋದರರನ್ನು ಕೊಲ್ಲುವುದಿಲ್ಲ, ಹೇಗೆ ಮಕ್ಕಳೇ ತಂದೆಯನ್ನು ಕೊಲ್ಲುವುದಿಲ್ಲವೋ ಹಾಗೆ. ರಾಮನ ವಿವೇಚನೇ ಈ ತೀರ್ಮಾನಕ್ಕೆ ಕಾರಣವಾಯಿತು. ಅದಿಲ್ಲದಿದ್ದರೆ ಆ ಸಂದರ್ಭಕ್ಕೆ ಕೈಮೀರಿ ಹೋಗುತ್ತಿತ್ತು. ಇದೇ ಸಂದರ್ಭವೇ ಹನುಮಂತನಿಗೆ ರಾಮನ ಸಹೋದರನಾದ ವಿಭೀಷಣನನ್ನು ರಾಮನ ಕಡೆ ಸೇರಿಸಿಕೊಳ್ಳುವುದರಲ್ಲಿ ಉಂಟಾಗುತ್ತದೆ. ತನ್ನ ಪರಾಕ್ರಮದ ಬಗ್ಗೆ ವಿಶ್ವಾಸವಿದ್ದಿದ್ದರಿಂದ ಆ ಸಂದರ್ಭಕ್ಕೆ ಅವನು ಬಿಡಲಿಲ್ಲ. ಅವನನ್ನು ಲಂಕಾಧಿಪತಿಯಾಗಿ ಮಾಡಿದ್ದೇ ಮುಂದೆ ರಾಮನೊಡನೆ ಯುದ್ಧದಲ್ಲಿ ಸಹಕರಿಸಿತು.

ರಾಮ ಬಹುತೇಕ ತನ್ನ ವಿವೇಕವನ್ನು ಉಪಯೋಗಿಸಿದಂತೆಯೇ ಸೀತೆ ವಿವೇಕ ಬಲವಿದ್ದುದರಿಂದಲೇ ಅನೇಕ ಕಷ್ಟಕಾರ್ಪಣ್ಯಗಳಿಗೆ ಗುರಿಯಾಗುವಂತಾಯಿತು.

ರಾಮಬಾಣಕ್ಕೆ ತುತ್ತಾಗಿ ಮಾರೀಚ ರಾಮನ ದನಿಯಲ್ಲಿ ಆರ್ತನಾದ ಮಾಡಿದಾಗ ತನ್ನನ್ನು ರಕ್ಷಿಸಲು ನಿಯಮಿಸಿದ್ದ ಲಕ್ಷ್ಮಣನನ್ನು ಹೀಯಾಳಿಸಿ ಭಾವುಕತೆಗೆ ದಾಸಳಾಗಿ ಕಷ್ಟಕ್ಕೀಡಾದಳು. ಅವಳು ಬಲೆಗೆ ಬಿದ್ದಳು. ಅವಳು ಲಕ್ಷ್ಮಣನ ಮಾತಿಗೆ ಬೆಲೆಕೊಡದೇ ಇದ್ದುದು ಮಾತ್ರವಲ್ಲ ಅವನನ್ನೂ ಸಂಶಯದಿಂದ ಕಂಡಳು. ಲಕ್ಷ್ಮಣ ಎಷ್ಟೇ ಹೇಳಿದರೂ ಅವಳು ಕೇಳಲಿಲ್ಲ. ರಾಮ ಲಕ್ಷ್ಮಣರಿಬ್ಬರೂ ಪರ್ಣಶಾಲೆಯಿಂದ ಹೊರಗಿದ್ದುದರಿಂದ ಅವಳು ರಾವಣನಿಗೆ ಬಲಿಯಾದಳು. ಅನಂತರ ಏನಾಯಿತೆನ್ನುವುದು ತಿಳಿದಿರುವ ಘಟನೆಯೇ. ಅದೇ ರೀತಿ ಅವಿವೇಕಕ್ಕೆ ಹಿಂದೆ ಸೀತೆ ತುತ್ತಾದುದೆಂದರೆ ಬಂಗಾರದ ಜಿಂಕೆಯ ಪ್ರಸಂಗದಲ್ಲಿ; ಅದು ರಾಕ್ಷಸಮಾಯೆಯೆಂದೂ ಬಂಗಾರದ ಜಿಂಕೆಯಿರಲು ಸಾಧ್ಯವಿಲ್ಲವೆಂದೂ ರಾಮ ಎಷ್ಟೇ ಹೇಳಿದರೂ ಅವಳು ಹಠ ಬಿಡಲಿಲ್ಲ.

ಅದು ಎಲ್ಲಾ ತೊಂದರೆಗಳಿಗೂ ಕಾರಣವಾಗಿದ್ದೆಂದರೆ ಹದಿನಾಲ್ಕು ವರ್ಷ ವನವಾಸದ ನಂತರ ಆ ಬಂಗಾರದ ಜಿಂಕೆಯನ್ನು ಅಯೋಧ್ಯೆಗೆ ಕರೆದೊಯ್ದು ಎಲ್ಲರಿಗೂ ತೋರಿಸಬೇಕೆಂಬುದೇ ಆಗಿತ್ತು. ನಿಜಕ್ಕೂ ಪರಮಾಪದಾಂ ಪದಂ.

ಆದ್ದರಿಂದಲೇ ವಿವೇಕಿಯಾದವನು ಒಳ್ಳೆಯ ಅಥವಾ ಕೆಟ್ಟದ್ದನ್ನು ಸರಿಯಾಗಿ ಅರಿಯಬೇಕು. ಅವಸರದಿಂದ ಮಾಡಿದ ಕಾರ್ಯಗಳು ದುಃಖವನ್ನುಂಟುಮಾಡುತ್ತದೆ. ಹೇಗೆಂದರೆ ಬದುಕಿರುವವರೆಗೂ ಶತ್ರುಗಳಿರುವಂತೆ :

ಗುಣವದ್ ಅಗುಣವದ್ವಾ ಕುರ್ವತಾ ಕಾರ್ಯಜಾತಂ
ಪರಿಣತಿರವಧಾರ್ಯಾ ಯತ್ನತಃ ಪಂಡಿತೇನ ।
ಅತಿರಭಸಕೃತಾನಾಂ ಕರ್ಮಣಾಂ ಆ ವಿಪತ್ತೇಃ
ಭವತಿ ಹೃದಯದಾಹೀ ಶಲ್ಯತುಲ್ಯೋ ವಿಪಾಕಃ ॥'

ಈ ಮೇಲಿನ ಅಂಶ ಕೇವಲ ಸೀತೆಯ ಬಗ್ಗೆ ಮಾತ್ರವಲ್ಲದೆ ದ್ರೌಪದಿಯ ಬಗ್ಗೆಯೂ ಅನ್ವಯಿಸುತ್ತದೆ. ಸ್ವಯಂವರದಲ್ಲಿ ತಾನು ಸೂತಪುತ್ರನನ್ನು ಮದುವೆಯಾಗುವುದಿಲ್ಲವೆಂದು ನುಡಿದ ದ್ರೌಪದಿಯ ಮಾತೇ ನಮ್ರವಾಗಿ ಪರಿಣಮಿಸುವಂತಾಯಿತು.

ಯಾರಿಗೆ ಕಾರ್ಯದ ಪೂರ್ವಾಪರ ವಿವೇಚನೆಯಿಲ್ಲದಿರುವರೋ ಅಂತಹವರು ಎಂತಹ ದಾರುಣ ಘಟನೆಗಳನ್ನು ಎದುರಿಸಬೇಕಾಗುವುದೆಂಬುದನ್ನು ನೀತಿಗ್ರಂಥಗಳು ನಿರೂಪಿಸುತ್ತವೆ.

ಗುರುಲಾಘವಂ ಅರ್ಥಾನಾಂ ಆರಂಭೇ ಕರ್ಮಣಾಂ ಫಲಂ
ದೋಷಂ ಯೋನ ವಿಜನಾತಿ ಸ ಬಾಲ ಇತಿ ಹೋಚ್ಯತೇ ॥[7]

ಯಾರು ಪರಿಣಾಮವನ್ನು ಯೋಚಿಸದೆ ಬೇರೆ ಕಾರ್ಯಪ್ರವೃತ್ತರಾಗುವರೋ ಹಣ್ಣನ್ನು ಬಿಡದ ಕಿಂಶುಕ ವೃಕ್ಷದಂತೆ ಪಶ್ಚಾತ್ತಾಪ ಪಡಬೇಕಾಗುತ್ತದೆ;

ಅವಿಜ್ಞಾಯ ಫಲಂಯೋಹಿ ಕರ್ಮತ್ವೇ ವಾನುಧಾವತಿ ।
ಸಶೋಚೇತ್ ಫಲವೇಲಾಯಾಮ್ ಯಥಾ ಕಿಂಶುಕ ಸೇವಕಃ ॥[8]

ಸರಿಯಾದ ವಿವೇಕವನ್ನುಪಯೋಗಿಸಲು ಮನಸ್ಸು ನಿರ್ಮಲವಾಗಿರಬೇಕು ಎಂದು ಕಾಮಂದಕನೀತಿಸಾರ ಹೇಳುತ್ತದೆ. ಬುಧ್ಯಾ ಪ್ರಸನ್ನಯಾ[9]. ಮನಸ್ಸು ಯಾವಾಗ ಕೋಪ ಅಥವಾ ಪೂರ್ವಾಗ್ರಹದಿಂದ ಅಥವಾ ಹೊಟ್ಟೆಕಿಚ್ಚಿನಿಂದ ಅಥವಾ ದ್ವೇಷದಿಂದ ಕೂಡಿರುವುದೋ ಆಗ ಅವನು ಸರಿಯಾದ ಮಾರ್ಗದಿಂದ ವಂಚಿತನಾಗುತ್ತಾನೆ. ಕೊನೆಯದಕ್ಕೆ ಉದಾಹರಣೆಯೆಂದರೆ ಪಾಂಡವರಲ್ಲಿ ವಿವೇಕಿಗಳಲ್ಲಿ ವಿವೇಕಿಯಾದಂತಹ ಯುಧಿಷ್ಠಿರ. ಜೂಜೆಂಬ ಚಟಕ್ಕೆ ಬಲಿಯಾಗಿ ತನ್ನ ತಮ್ಮಂದಿರನ್ನು ಮಾತ್ರವಲ್ಲ, ಹೆಂಡತಿಯನ್ನು ಮಾತ್ರವಲ್ಲ, ತನ್ನನ್ನೇ ತಾನು ಬಲಿಕೊಟ್ಟನು. ಧೃತರಾಷ್ಟ್ರನಿಂದ ವಿನಾಯಿತಿ ಸಿಕ್ಕಾಗಲೂ ಸಹ ಅವನು ಮತ್ತೆ ಜೂಜಾಡಿ ತನಗಲ್ಲದೆ, ತನ್ನ ತಮ್ಮಂದಿರಿಗಲ್ಲದೆ ತನ್ನ ಹೆಂಡತಿ ತುಂಬಿದ ಸಭೆಯಲ್ಲಿ ಅವಮಾನಿತಳಾಗಲು ಕಾರಣನಾದ. ಅವನು ಸ್ವಲ್ಪತಾಳ್ಮೆಯಿಂದ ತನ್ನ ಸದ್ ಬುದ್ಧಿಯನ್ನು ಕೇಳಿದ್ದರೆ ಅವನು ಎಲ್ಲರನ್ನೂ ಅವಮಾನದಿಂದ ತಪ್ಪಿಸಬಹುದಿತ್ತು. ಒಂದರ್ಥದಲ್ಲಿ ಈ ವಿವೇಕಿಗಳಲ್ಲಿ ವಿವೇಕಿ, ಸಮಚಿತ್ತವುಳ್ಳವನು ತನ್ನ ಸಮಚಿತ್ತತೆಯನ್ನು ಕಳೆದುಕೊಂಡು ಸಮಗ್ರ ಪಾಂಡವರ ನಾಶಕ್ಕೆ ಕಾರಣನಾದನು. (ಪುಟ-36-37ರಲ್ಲಿ ವಿವರನೋಡಿ) ಕೃಷ್ಣನ ವಿವೇಕವೇ ಪಾಂಡವರನ್ನು ರಕ್ಷಿಸಿತು. ಅವನು ವಿವೇಕವಿಲ್ಲದಿದ್ದರೆ ಮಹಾಭಾರತ ಯುದ್ಧದಲ್ಲಿ ದುರ್ಯೋಧನ ಗೆಲುವನ್ನು ಸಾಧಿಸುತ್ತಿದ್ದ.

ಈ ಮೇಲಿನ ಉದಾಹರಣೆಯಲ್ಲಿ ದೃಷ್ಟಿಯನ್ನು ಕೋಪ ಹಾಗೂ ಉತ್ಸಾಹ ಹೇಗೆ ಮಂಕಾಗಿಸುತ್ತದೆಯೆಂದು ನಿರೂಪಿಸುತ್ತದೆ. ಒಂದು ಸಲ ವಿವೇಕದಿಂದ ವಂಚಿತರಾದರೆ ಹೆಜ್ಜೆ ಹೆಜ್ಜೆಗೂ ಮುಗ್ಗುರಿಸುತ್ತಿರುತ್ತಾರೆ. ವಿವೇಕ ಭ್ರಷ್ಟಾನಾಂ ಭವತಿ ವಿನಿಪಾತಃ ಶತಮುಖಃ[10]

ಆದ್ದರಿಂದ ಮಾತನಾಡುವಾಗಲೂ ಸಹ ಏನನ್ನೋ ಮಾತನ್ನಾಡದೆ ಸರಿಯಾಗಿ ಪೂರ್ವಾಪರ ವಿವೇಕದಿಂದ ಯೋಚಿಸಿಯೇ ಮಾತನಾಡಬೇಕು. ಹಾಗಿಲ್ಲದಿದ್ದರೆ ಕಾಲಾಂತರದಲ್ಲೂ ಕೆಟ್ಟ ಪರಿಣಾಮವಾಗಬಹುದು.

ಸುಚಿಂತ್ಯ ಚೋಕ್ತಂ ಸುವಿಚಾರ್ಯಯತ್ಕೃತಂ
ಸುದೀರ್ಘಕಾಲೇ ಪಿನ ಯಾತಿ ವಿಕ್ರಿಯಾಂ ॥ [11]

ತೀರ್ಮಾನಕ್ಕೆ ಕೂಡಲೇ ಬರಬಾರದೆಂದು ಹೇಳುವುದು ಸುಲಭ. ಸ್ವಲ್ಪ ಸಮಯ ಕೊಟ್ಟು ಯೋಚಿಸಿ, ಚಿಂತಿಸಿ, ಮನನಮಾಡಿ ಅನಂತರವೇ ಕಾರ್ಯೋನ್ಮುಖನಾಗಬೇಕು. ಯಾವಾಗ ಆಸೆ ಕಳಚಿ ಸರಿಯಾದ ಯೋಚನೆ ಮೂಡುತ್ತದೆಯೋ ಆಗ ಅದು ತಾನಾಗಿಯೇ ಆಗುತ್ತದೆ. ಆಗ ಅವನು ಏನು ಮಾಡಿದನೋ ಅಥವಾ ಮಾಡಬೇಕೆಂದಿದ್ದನೋ ಅದನ್ನು ಯೋಚಿಸಿದಾಗ ಪಶ್ಚಾತ್ತಾಪವಿರುವುದಿಲ್ಲ.

ನಾವು ಯಾವುದಾದರೂ ನಿರ್ಧಾರಕ್ಕೆ ಬರುವ ಮುನ್ನ ಬೇರೆಯವರೊಂದಿಗೆ ಆ ವಿಷಯವಾಗಿ ಸಮಾಲೋಚನೆ ಮಾಡಬೇಕು. ತನ್ನಷ್ಟಕ್ಕೆ ತಾನೇ ಯೋಚಿಸಬಾರದು. ನೈಕಶ್ಚಾರ್ಥಾನ್ ವಿಚಿಂತಯೇತ್. ನಮ್ಮ ಭಾವನೆಗಳನ್ನು ಬೇರೆಯವರೊಂದಿಗೆ ಹಂಚಿಕೊಳ್ಳುವಾಗ ಬೇರೆ ಬೇರೆ ವಿಷಯಗಳು ಹೊಳೆಯಬಹುದು. ಹಾಗೆಂದು ನಮ್ಮ ಭಾವನೆಗಳನ್ನು ಬೇರೆಯವರಿಗೆ ಮುಡುಪಾಗಿಯೂ ಇಡಬಾರದು. ಏಕೆಂದರೆ ಅವರಿಗೆ ಒಳ್ಳೆಯ ಇಂಗಿತವಿಲ್ಲದಿರಬಹುದು,ಆದ್ದರಿಂದ ಸರಿಯಾಗಿಯೇ ಹೇಳಲ್ಪಟ್ಟಿದೆ :- ಮೂಢಃ ಪರಪ್ರತ್ಯಯನೇಯ ಬುದ್ಧಿಃ [12]. ವಿವೇಕಿಗಳು ವಿಭಿನ್ನ ವಿಷಯಗಳ ಬಗ್ಗೆ ಸರಿಯಾಗಿ ವಿವೇಚಿಸಿ ಸಂತಃ ಪರೀಕ್ಷ್ಯಾನ್ಯತರದ್ ಭಜಂತೇ. ವಿವೇಕಿಗಳು ವಿವೇಕದಿಂದ ಸರಿಯಾದುದನ್ನೇ ಆರಿಸುತ್ತಾರೆ. ಕ್ಷೀರ ಸ್ವಾಮಿಯ ಪ್ರಕಾರ ದಡ್ಡರ ನಿರ್ಣಯ ಬೇರೆಯವರೇ ತೆಗೆದುಕೊಳ್ಳಬೇಕಾಗುತ್ತದೆ.

ಆದ್ದರಿಂದ ನಮ್ಮೆಲ್ಲಾ ಕ್ರಿಯೆಗಳಿಗೂ ವಿವೇಕವೇ ಮೂಲವಾಗಿರಬೇಕು. ಅಮರ ಅದನ್ನು 'ಪೃಥಗಾತ್ಮತಾ' ಎಂದು ವಿವರಿಸುತ್ತಾನೆ. ಅದು ಕ್ಷೀರಸ್ವಾಮಿಯ ಪ್ರಕಾರ ಪ್ರಕೃತಿ – ಪುರುಷ ವಿವೇಕವೇ- ಭಾವಾನಾಂ ಪೃಥಕ್ ಸ್ವರೂಪತ್ವಂ. ಧಾರಿಣಿ, ಅಮರನ ಅಭಿಪ್ರಾಯವನ್ನೇ ಹೇಳುತ್ತಾಳೆ. ಕೇವಲ ಪದಗಳಲ್ಲಿ ಮಾತ್ರ ವ್ಯತ್ಯಾಸವು. ಅವನ ಪ್ರಕಾರ ಅದು ಪೃಥಕ್ ಭಾವ – ಬೇರ್ಪಡಿಸುವಿಕೆ, ಮಾನಸಿಕ ಚಲನೆ. ಅದನ್ನು ಮನು ರೂಪಕದಿಂದ ಬಣ್ಣಿಸುತ್ತಾನೆ :-

ಸತ್ಯಪೂತಂ ವದೇದ್ ವಾಚಂ ಮನಃ ಪೂತಂ ಸಮಾಚರೇತ್ [13]

ಸತ್ಯದಿಂದ ಪರಿಶುದ್ಧವಾದ ಮಾತನ್ನೇ ಆಡಬೇಕು. ಮನಸ್ಸಿನಿಂದ ಪರಿಶುದ್ಧವಾದುದನ್ನೇ ಆಚರಿಸಬೇಕು.

ಶಬ್ದನಿಷ್ಪತ್ತಿಯೂ ಈ ಅರ್ಥವನ್ನೇ ಸೂಚಿಸುತ್ತದೆ. ವಿವಿಚ್ ಇಂದ ಬಂದ ಶಬ್ದ ವಿ ಎಂಬ ಪ್ರತ್ಯಯದಿಂದ ಪೃಥಗ್‌ಭಾವ ಎಂದು ಆಗುತ್ತದೆ. ಆದ್ದರಿಂದ ವಿವೇಕ ಎಂದರೆ ವಿಶೇಷೇಣ ವೇಕಃ - ಜಾಗರೂಕವಾಗಿ ಮಾಡಿದ ವಿವೇಕ. ಅದೇ ಒಳ್ಳೆಯದು, ಕೆಟ್ಟದ್ದು ಗುಣ-ಅವಗುಣಗಳಿಂದ, ಬೇಕಾದದ್ದು ಬೇಡವಾದದ್ದು, ಮಾಡುವಂತಹದು ಮಾಡದಿರುವುದರಿಂದ ಬೇರ್ಪಡಿಸುತ್ತದೆ. ಈ ಮಾರ್ಗವನ್ನೇ ಶಾಸ್ತ್ರಗಳು ಅನುಮೋದಿಸುತ್ತದೆ. ಚರಕ ಹೇಳುವಂತೆ ಪರೀಕ್ಷ್ಯಕಾರಿಣೋ ಹಿ ಕುಶಲಾ ಭವಂತಿ[14]. ಪರೀಕ್ಷೆ ಮಾಡಿ ಕೆಲಸ ಮಾಡುವವರೇ ಕುಶಲರು. ಇದನ್ನು ಅವನು ರೋಗಿಗಳ ವಿಷಯದಲ್ಲಿ ಹೇಳುತ್ತಾನೆ. ಅವರನ್ನೇ ಮೊದಲು ಪರೀಕ್ಷಿಸಬೇಕು.

ನಾಪರೀಕ್ಷಿತಂ ಅಭಿವಿಶೀತ ಸಮ್ಯಕ್ ಪ್ರಯೋಗನಿಮಿತ್ತಾ ಹಿ ।
ಸರ್ವಕರ್ಮಣಾಂ ಸಿದ್ಧಿರಿಷ್ಟಾ ವ್ಯಪಶ್ಚಾ ಸಮ್ಯಕ್ ಪ್ರಯೋಗ ನಿಮಿತ್ತಾ ॥

ಚರಕ ಹೇಳಿರುವುದು ಕೇವಲ ವೈದ್ಯರ ಬಗ್ಗೆ ಮಾತ್ರವಲ್ಲದೆ ಎಲ್ಲರ ಬಗ್ಗೆಯೂ ಅನ್ವಯಿಸುತ್ತದೆ. ಪ್ರತಿಯೊಬ್ಬರೂ ಪರೀಕ್ಷಕಾರಿಯಾಗಿರಬೇಕು. ಆದರಿಂದಲೇ ಕಾರ್ಯಸಿದ್ಧಿ ಉಂಟಾಗುತ್ತದೆ. ಈ ಪರೀಕ್ಷ್ಯಕಾರಿತಾ ವಿವೇಕದಿಂದುಂಟಾಗುತ್ತದೆ. ಇದನ್ನು ಕಾಳಿದಾಸನು ಶಕುಂತಲೆಯ ತಿರಸ್ಕಾರದ ಪ್ರಸಂಗದಲ್ಲಿ ವಿವರಿಸುತ್ತಾನೆ. ಶಾಙ್ಗ್ರರವನು ಹೊರಗಿನವನೊಡನೆ ಬೆಳೆಸಿದ ಸ್ನೇಹವೇ ಇದಕ್ಕೆ ಕಾರಣವೆಂದು ಆಸ್ಥಾನದಲ್ಲಿ ನುಡಿಯುತ್ತಾನೆ.

ಅತಃ ಪರೀಕ್ಷ್ಯ ಕರ್ತವ್ಯಂ ವಿಶೇಷಾತ್ ಸಂಗತಂ ರಹಃ ।
ಅಜ್ಞಾತ ಹೃದಯೇಷ್ವೇವಂ ವೈರೀಭವತಿ ಸೌಹೃದಂ ॥ [15]

ಆದ್ದರಿಂದ ಅವಿವೇಕ ಕ್ರಿಯೆಯು ಅವರನ್ನೇ ಸುಡುತ್ತದೆ. ಇತ್ಥಂ ಆತ್ಮಕೃತಂ ಚಾಪಲಂ ದಹತಿ[16]. ಆದ್ದರಿಂದ ಸರಿಯಾಗಿ ಪರೀಕ್ಷೆಗೊಳಪಡಿಸಿಯೇ ಹೊರಗಿನವನೊಂದಿಗೆ ಸಂಬಂಧವನ್ನು ಬೆಳೆಸಬೇಕು. ಯಾರಿಗೆ ಪರಸ್ಪರ ಹೃದಯಗಳು ಗೊತ್ತಾಗಿಲ್ಲವೋ ಅವರಲ್ಲಿ ಸ್ನೇಹವೂ ವೈರದಲ್ಲಿ ಪರಿಣಮಿಸುತ್ತದೆ.

ಕಾಳಿದಾಸನ ಈ ಸಲಹೆ ಆಗಿನ ಕಾಲಕ್ಕೆ ಎಷ್ಟು ಪ್ರಸ್ತುತವೋ ಈಗಲೂ ಅಷ್ಟೇ. ಯುವಕರು ಅದನ್ನು ಗಮನಿಸಿದರೆ ಅವರು ಅಜ್ಞಾನದಲ್ಲಿ ಪ್ರೇಮಕ್ಕೆ ಸಿಲುಕಿ ತಮ್ಮ ತಂದೆ ತಾಯಿಯರ, ಪೋಷಕರ ವಿರುದ್ಧವಾಗಿ ಅವರು ನಂತರ ಅನುಭವಿಸುವ ದುಃಖವನ್ನು ದೂರಮಾಡಿಕೊಳ್ಳಬಹುದು.

ವಿವೇಕವು ಸರಿಯಾದ ಮನಸ್ಸನ್ನಪೇಕ್ಷಿಸುತ್ತದೆ. ಪ್ರತಿಯೊಂದು ವಿಷಯದ ಆಳಕ್ಕೂ ಇಳಿದು ನಂತರವೇ ನಿರ್ಧಾರಕ್ಕೆಗೊಳ್ಳಬೇಕು. ಈ ಗ್ರಂಥಕರ್ತರು ತಾವು ಹಿಂದೆ ಓದಿದಂತಹ ಒಂದು ಕಥೆಯನ್ನು ಸ್ಮರಿಸಲಿಚ್ಛಿಸುತ್ತಾರೆ. ಆ ಕಥೆಯ ಹೆಸರೆಂದರೆ ''ಅಕ್ಕಿಯ ಐದು ಕಾಳುಗಳು'' ರಾಜಗೃಹದಲ್ಲಿ ಧನ್ಯನೆಂಬ ಶ್ರೀಮಂತ ವರ್ತಕನಿದ್ದ. ಅವನಿಗೆ ಉಜ್ಝಿತಾ,

ಭೋಗವತಿ, ರಕ್ಷಿತಾ, ರೋಹಿಣಿ ಎಂಬ ನಾಲ್ವರು ಸೊಸೆಯರಿದ್ದರು. ಒಂದು ಬಾರಿ ನನಗೆ ಆಗಬಾರದ್ದು ಆಗುವುದಕ್ಕೆ ಮುಂಚೆ ಅವರಿಗೊಂದು ಪಾಠಕಲಿಸಬೇಕೆಂದು ಅವನಿಗನಿಸಿತು. ಅವನು ಒಂದು ಹಬ್ಬ ಹಮ್ಮಿಕೊಂಡು ಅಲ್ಲಿ ಎಲ್ಲಾ ಬಾಂಧವರನ್ನು ಆಮಂತ್ರಿಸಿದನು. ಎಲ್ಲರೂ ಊಟಮಾಡಿದ ನಂತರ ಅವನು ತನ್ನ ನಾಲ್ಕು ಮಂದಿ ಸೊಸೆಯರನ್ನು ಕರೆದು ಅವರಿಗೆ ಅಕ್ಕಿಯ ಐದು ಕಾಳನ್ನು ನೀಡಿ ಅದನ್ನು ಜೋಪಾನವಾಗಿ ಇಡುವಂತೆಯೂ ಅವನು ಕೇಳಿದಾಗ ಹಿಂದಿರಿಗಿಸುವಂತೆಯೂ ಹೇಳಿದ. ಮೊದಲನೆಯವಳು ತನ್ನ ಮಾವನ ಧಾನ್ಯದ ರಾಶಿಯಿಂದ ಯಾವುದಾದರೂ ಐದು ಅಕ್ಕಿಕಾಳನ್ನು ತೆಗೆದುಕೊಟ್ಟರಾಯಿತೆಂದು ಭಾವಿಸಿ ಆ ಕಾಳನ್ನು ಎಸೆದಳು. ಎರಡನೆಯವಳು ಹಾಗೇ ಯೋಚಿಸಿ ಹಾಗೇ ಮಾಡಿದಳು. ಮೂರನೆಯವಳು ಆ ಧಾನ್ಯದ ಕಾಳಿನಲ್ಲೇನೊ ವಿಶೇಷವಿರಬೇಕೆಂದು ಭಾವಿಸಿ ಒಂದು ಒಡವೆಗಳ ಪೆಟ್ಟಿಗೆಯಲ್ಲಿ ಅದನ್ನು ಭದ್ರವಾಗಿರಿಸಿದಳು. ನಾಲ್ಕನೆಯವಳೂ ಅದೇ ಉದ್ಯೋಗದಿಂದಿದ್ದರೂ ಸಹ ಅದನ್ನು ಬಿತ್ತಿದಳು. ನೀರಿನಿಂದ ಅದು ಗಿಡವಾಯಿತು. ಅದು ಕ್ರಮೇಣ ವೃದ್ಧಿಯಾಗುತ್ತಾ ಬಂದಿತು. ಅದನ್ನು ಒಂದು ಮಣ್ಣಿನ ಗಡಿಗೆಯಲ್ಲಿಟ್ಟಳು. ಸ್ವಲ್ಪ ವರ್ಷಗಳ ನಂತರ ಆ ವ್ಯಾಪಾರಿಯು ತನ್ನ ಕಾಳನ್ನು ಹಿಂಪಡೆಯಲು ಕೇಳಿದಾಗ ಮೊದಲ ಇಬ್ಬರು ಸೊಸೆಯರಿಗೆ ಅವನು ಕೊಟ್ಟ ಕಾಳನ್ನು ಹಿಂದಿರುಗಿಸಲು ಇರಲಿಲ್ಲ. ಮೂರನೆಯವಳ ಬಳಿ ಅದಿತ್ತು ಆದರೆ, ನಾಲ್ಕನೆಯವಳಲ್ಲಿ ಅದರೊಂದಿಗೆ ಅದು ಬೆಳೆದು ಅನೇಕವಾದದ್ದು ಇತ್ತು. ವ್ಯಾಪಾರಿಯು ಪಾಠ ಕಲಿಸಿದ್ದ. ನಿಮ್ಮ ವಿವೇಕದಿಂದ ನೀವು ದೊಡ್ಡ ಸಂಪತ್ತನ್ನೇ ಗಳಿಸಬಹುದೆಂದು.

ವಿವೇಕವು ಕೇವಲ ಜೀವನವನ್ನು ಚೆನ್ನಾಗಿ ನಡೆಸಲು ಮಾತ್ರವಲ್ಲದೆ ನಮ್ಮ ಆಧ್ಯಾತ್ಮಿಕ ಉನ್ನತಿಗೂ ಸಹಕಾರವಾಗುತ್ತದೆ. ವಿವೇಕದಿಂದಿರುವವರು ಪ್ರಪಂಚದೊಂದಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುವುದಿಲ್ಲ - ಕಿಂವಾ ವಿಮೋಹಾಯ ವಿವೇಕಿನಾಂ ಸ್ಯಾತ್[17]. ಅವರ ಪ್ರಕಾರ ಯಾವುದು ಸಂತೋಷವೋ ಅದೇ ಸುಖ :- ಶಾಸ್ತ್ರ ಶಿಷ್ಯಾನಾಂ ವಿವೇಕಂ ಸುಖಮಾತ್ರಂ ದುಃಖಮೇವೇತಿ ವಿನಿಶ್ಚಯಃ[18] ಹೇಗೆ ಪ್ರಾಪಂಚಿಕ ಸುಖಗಳು ಸುಖಗಳಲ್ಲವೋ ಅವು ಮಾನವನನ್ನು ಕರ್ಮದಲ್ಲಿ ಬಂಧಿಸುತ್ತದೆ. ಅದರಿಂದ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳಾಗುತ್ತದೆ. ಅದರ ಪರಿಣಾಮವಾಗಿ ಜನನ ಮರಣಗಳು ಉಂಟಾಗುತ್ತದೆ. ಅವರು ಸ್ವರ್ಗಕ್ಕೂ ಆಸೆ ಪಡುವುದಿಲ್ಲ. ಅವರ ಧ್ಯೇಯ ಕೇವಲ ಮೋಕ್ಷವೇ ಆಗಿರುತ್ತದೆ. ಅದನ್ನು ಹೇಗಾದರೂ ಗಳಿಸಬೇಕೆಂದು ಬಯಸುತ್ತಾರೆ. ಅವರು ಸ್ವರ್ಗವನ್ನು ಕೇವಲ ಬಿಚ್ಚುತ್ತಿರುವ ಹಾವಿನ ಹೆಡೆಯಂತೆ ಭಾವಿಸುತ್ತಾರೆ :-

ವಿವೇಕಿನಸ್ತು ಆಯತಿಂ ಆಲೋಚಯಂತಃ ಸ್ವರ್ಗಮಪಿ
ಕುಪಿತ ಫಣಿಫಣಮಂಡಲ ಛಾಯಾಪ್ರತಿಮ ಇತ್ಯಪಜಹಾತಿ ।।[19]

ವಿವೇಕಿಗಳು ವಿಭಿನ್ನ ವಿಚಾರಗಳಿಗೆ ಗಮನನೀಡುವುದರಿಂದ ನಾನಾರ್ಥಾವಮರ್ಶನಂ ವಿಮರ್ಶಃ[20] ಅವರು ಸಂಕುಚಿತ ಬುದ್ಧಿಯುಳ್ಳವರಾಗಿರುವುದಿಲ್ಲ. ಅವರ ವಿಶಾಲ ದೃಷ್ಟಿಯೇ ಅವರನ್ನು ಮೃದುವಾಗಿ ಮಾಡುತ್ತದೆ - ಅಕ್ಷಿಪತ್ರಕಲ್ಪಾ ಹಿತೇ[21] (ವಿವೇಕಿನಃ) ಅವರು ಕಣ್ಣಿನ ರೆಪ್ಪೆಗಳಂತೆ.

ವಿದ್ಯಾಪರಿಣಯನದ ಪ್ರಕಾರ ವಿವೇಕವೇ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣ :-

ವಿದ್ಯುತ್ತಾಂಡವಡಂಬರಂ ಜಗದಿದಂ ಮೃತ್ಯೋರ್ಮುಖಾನ್ನಿರ್ಗತಂ।
ಸತ್ಯಜ್ಞಾನಸುಖೈಕರೂಪಂ ಅಮಲಂ ಬ್ರಹ್ಮೈವ ತತ್‌ಶಾಶ್ವತಮ್ ॥
ತತ್ ಪ್ರಾಪ್ತಾವಯಂ ಅಭ್ಯುಪಾಯ ಇತಿ ಚ ಪ್ರಜ್ಞಾನು ಸಂಶೀಲನಾತ್
ಅಂತಸ್ತೋಷವಿಕಾಸವಕ್ತ್ರಕಮಲಃ ಸೋಯಂ ವಿವೇಕಃ ಸುಧೀಃ ॥

ಮಿಂಚಿನ ಮಿಂಚನ್ನು ಹೋಲುವ ವಿಶ್ವ ಸಾವಿನಂಚಿನಲ್ಲಿದೆ. ಬ್ರಹ್ಮನಿಗೆ ಮಾತ್ರವೇ ಸತ್ಯ, ಜ್ಞಾನ, ಆನಂದ, ಶುದ್ಧ, ಅವಿನಾಶಿಯಾದ ರೂಪವಿದೆ. ಈ ವಿವೇಕವೇ ಆಂತರಿಕಾನಂದದಿಂದ ಕಮಲದಂತೆ ವಿಕಸಿಸಿದಾಗ ಜ್ಞಾನಾನುಭವಗಳಿಂದ ಸಾಕ್ಷಾತ್ಕಾರವಾಗುತ್ತದೆ.

ಪ್ರಾಪಂಚಿಕ ಹಂತದಲ್ಲಿ ಕಷ್ಟದಲ್ಲಿ ಸಿಲುಕಿರುವವನನ್ನು ಪಾರುಮಾಡಲು ವಿವೇಕ ಸಹಕರಿಸುತ್ತದೆ. ಆದರೆ ಅದು ಆತ್ಮೋದ್ಧಾರದಿಂದ ಆತ್ಮಸಾಕ್ಷಾತ್ಕಾರದೆಡೆಗೆ ಕೊಂಡೊಯ್ಯುತ್ತದೆ.

---

**ಆಕರಗಳು**

1) 2.30 2) ಅದೇ. 3) ಅದೇ. 4) ಭಗವದ್ಗೀತಾ.18.63 5) ಅಭಿಜ್ಞಾನಶಾಕುಂತಲ.1.20 6) ನೀತಿಶತಕ.91 7) ರಾಮಾಯಣ.2.63.7 8) ಅದೇ.2.63.9. 9) 12.11 10) ನೀತಿಶತಕ.10 11) ಹಿತೋಪದೇಶ.1.22 12) 1.2. 13)6.46 14) ಪಂಚತಂತ್ರ. ಅಪರೀಕ್ಷಿತಕಾರಕ.93 15) ಅಭಿಜ್ಞಾನ ಶಾಕುಂತಲ.5.24 16) ಅದೇ.5.24 17) ಧರ್ಮಶರ್ಮಾಭ್ಯುದಯ.4.61. 18) ನ್ಯಾಯವಾರ್ತಿಕತಾತ್ಪರ್ಯಟೀಕಾ.6.594 19)ಅದೇ.ಪು.8 20)ನ್ಯಾಯವಾರ್ತಿಕ.ಪು.87 21) ನ್ಯಾಯವಾರ್ತಿಕತಾತ್ಪರ್ಯಟೀಕಾ. ಪು.594 22) 6.16

# 19. ಪರೋಪಕಾರ

ಮಾನವ ಜೀವಿತದ ಒಳ್ಳೆಯ ಸಂದರ್ಭವೆಂದರೆ ತಾನು ತನಗಷ್ಟೇ ಜೀವಿಸದೇ ಇರುವುದು. ಏಕೆಂದರೆ ಅದು ಪ್ರಾಣಿ ಜೀವನ. ಅವನು ಈ ಜೀವನದಿಂದ ಮುಂದೆ ಬಂದು ಬೇರೆಯವರಿಗೆ ಸಹಕರಿಸಬೇಕು, ಸಹಾಯ ಮಾಡಬೇಕು ಅವರಿಗೆ ಬೇಕಾದ ಸಹಾನುಭೂತಿಯನ್ನೂ ತೋರಬೇಕು. ಅದು ಹಾಗಿರಬೇಕು. ಹಾಗಿದ್ದಾಗ ಅವನನ್ನು ಭೌತಿಕವಾಗಿ ಹಾಗೂ ಮಾನಸಿಕವಾಗಿ ಅವನನ್ನು ಉದಾತ್ತೀಕರಿಸಿ ಅವನನ್ನು ವಿಸ್ತಾರವಾದ ವಿಶ್ವದೊಡನೆ ಸಂಪರ್ಕಿಸುತ್ತದೆ. ಆಗ ಅವನು ವಿಶ್ವವನ್ನು ತನ್ನ ವಿಸ್ತೃತರೂಪವೆಂದು ಭಾವಿಸುವನು. ಆಗ ಅವನ ಜನ್ಮಸಾಫಲ್ಯ ಉಂಟಾಗುತ್ತದೆ. ಪರಹಿತಸಂಪಾದನಂಚ ಜನ್ಮ ಫಲಂ [1]. ಹಾಗಿರುವಂತಹ ಮಹಾತ್ಮರಲ್ಲಿ ಆಗುಣ ತಾನಾಗಿಯೇ ಹೊರಬರುತ್ತದೆ. ಸಂತಃ ಸ್ವಯಂ ಪರಹಿತೇ ವಿಹಿತಾಭಿಯೋಗಾಃ[2]. ಅದೇ ಅದರ ಒಳಿತನ್ನು ಗುರುತಿಸುವ ಸಾಧನ. ಅದೇ ಒಳ್ಳೆಯವರನ್ನು ಹಣಬಂದಾಗ ಗರ್ವಪಡದಂತೆ ಮಾಡುತ್ತದೆ – ಅನುದ್ಧತಾಃ ಸತ್ಪುರುಷಾ ಸಮೃದ್ಧಿಭಿಃ. ಬೇರೆಯವರಿಗೆ ಸಹಾಯ ಮಾಡುವುದು ಅವರ ಜೀವಿತದ ಅಂಗವಾಗುತ್ತದೆ – ಸ್ವಭಾವ ಏವೈಷ ಪರೋಪಕಾರಿಣಾಮ್[3].

ಒಬ್ಬ ವಿದ್ಯಾವಂತನಾಗಿದ್ದರೆ, ಅವನ ವಿದ್ಯೆಯಿಂದ ಬೇರೆಯವರಿಗೆ ಉಪಕಾರವಾಗಬೇಕು :– ಸಾ ವೈದುಷೀ ಫಲಂ ಯಸ್ಯ ನ ಪರೋಪ ಕೃತೇಃ ಪರಂ[4]. ಈ ಗುಣವನ್ನು ವೈಜ್ಞಾನಿಕ ಹಾಗೂ ತಾಂತ್ರಿಕ ಅನ್ವೇಷಣೆಗಳಲ್ಲಿ ಕಾಣಬಹುದು. ವೈದ್ಯಾನ್ವೇಷಣೆಗಳೂ ಹಗಲಿರುಳೂ ಶ್ರಮಿಸಿ ರೋಗಿಗಳ ರೋಗಮುಕ್ತ ಔಷಧಗಳನ್ನು ಕಂಡುಹಿಡಿಯುವ ಕಾರ್ಯ ಕೇವಲ ಅವರಿಗೋಸ್ಕರ ಅವರು ಮಾಡುತ್ತಿಲ್ಲ. ಅವರು ಮನುಕುಲದ ಏಳಿಗೆಗೇ ಶ್ರಮಿಸುತ್ತಾರೆ. ವಿಜ್ಞಾನಿಗಳ ವಿಷಯದಲ್ಲೂ ಅದು ಸತ್ಯವೇ ಏಕೆಂದರೆ ಅವರು ತಮ್ಮ ಪ್ರಯೋಗಾಲಯಗಳಲ್ಲಿ ಗಂಟೆಗಟ್ಟಲೆ ದುಡಿದು ಸಾಮಾನ್ಯರ ಜೀವಿತವನ್ನು ಹಸನು ಮಾಡುತ್ತಾರೆ.

ಬೇರೆಯವರಿಗೆ ಒಳಿತನ್ನು ಬಯಸುವುದು ತಮ್ಮ ಒಳಿತನ್ನೂ ಮಾಡಿಕೊಂಡಂತೆಯೇ ಸರಿ. ಅವರೇ ಸತ್ಪುರುಷರು. ಸತ್ಪುರುಷರು ಬೇರೆಯವರಿಗೆ ಒಳಿತನ್ನು ಮಾಡುವರು. ಅವರ ಹಣ ಬೇರೆಯವರಿಗಾಗಿಯೇ ಇರುತ್ತದೆ. ಅವರನ್ನೇ ನದಿಗಳೊಂದಿಗೆ ಹೋಲಿಸುತ್ತಾರೆ. ಅದು ಸ್ವತಃ ತಮ್ಮ ನೀರನ್ನು ಕುಡಿಯದೆ ಇರುವುದು, ಮರಗಳೂ ತಮ್ಮ ಹಣ್ಣನ್ನು ತಾವೇ ತಿನ್ನುವುದಿಲ್ಲ ಅಥವಾ ಮೋಡಗಳೂ ಸಹ ಬೆಳೆದಂತಹ ಧಾನ್ಯಗಳನ್ನು ತಾವೇ ಉಪಯೋಗಿಸುವುದಿಲ್ಲ:–

ಪಿಬಂತಿ ನದ್ಯಃ ಸ್ವಯಮೇವ ನಾಂಭಃ
ಖಾದಂತಿ ನ ಸ್ವಾದು ಫಲಾನಿ ವೃಕ್ಷಾಃ ।
ಪಯೋಧರಾಃ ಸಸ್ಯಂ ಅದಂತಿ ನೈವ
ಪರೋಪಕಾರಾಯ ಸತಾಂ ವಿಭೂತಯಃ ॥[5]

ಆದ್ದರಿಂದ ಒಳ್ಳೆಯತನ ಬೆಳೆಸಿಕೊಂಡು ಬೇರೆಯವರಿಗೂ ಒಳ್ಳೆಯದನ್ನು ಮಾಡಬೇಕು. ಇದನ್ನು ಪ್ರತಿಯೊಬ್ಬನೂ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಹದಿನೆಂಟು ಪುರಾಣಗಳ ಸಾರವೆಂದರೆ ಪರೋಪಕಾರವೇ ಪುಣ್ಯ ಪರಪೀಡನವೇ ಪಾಪ :- ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ.

ಪರೋಪಕಾರ ಮಾಡಲು ದೃಢಸಂಕಲ್ಪವಿರಬೇಕು. ಆದರೆ ಸಂಕುಚಿತ ಬುದ್ಧಿಯುಳ್ಳವರು ಕೇವಲ ಸ್ವಾರ್ಥವನ್ನೇ ಬಯಸುವರು. ತನ್ನನ್ನು ತನ್ನತನದಿಂದ ಹೊರಬರಲು ಸ್ಥೈರ್ಯಬೇಕು ಹಾಗೂ ದೃಢಸಂಕಲ್ಪವಿರಬೇಕು. ಬೇರೆಯವರಿಗೆ ಪರೋಪಕಾರ ಮಾಡುವಾಗ ತನಗೇ ಅಪಕಾರವಾಗಬಹುದು. ತನ್ನ ಪ್ರಾಣಕ್ಕೇ ಹಾನಿಯಾಗಬಹುದು. ಬಡತನ ಹಾಗೂ ಕಷ್ಟ ತಾನೇ ತನ್ನ ಮೇಲೆ ಹೇರಿಸಿಕೊಳ್ಳಬಹುದು. ಹಾಗಿದ್ದಾಗ್ಯೂ ಯಾರಾದರೂ ಸತತವಾಗಿ ಪ್ರಯತ್ನಿಸಿದರೆ ಅದು ಅವರ ಮನೋದಾರ್ಢ್ಯವನ್ನು ಸೂಚಿಸುತ್ತದೆ. ಒಳ್ಳೆಯದನ್ನು ಬೇರೆಯವರಿಗೆ ಮಾಡುವಾಗ ಅವರನ್ನು ಕೆಟ್ಟತನದಿಂದ ಹಿಂದಿರುಗಿಸಲೂಬಹುದು. ಆದಕ್ಕಾಗಿ ಅವನು ಕರ್ಕಶಶಬ್ದಗಳನ್ನೂ ಬಳಸಬೇಕಾಗಬಹುದು. ಆದರೆ ಅವನು ಅದರಿಂದ ಹಿಂಜರಿಯಬಾರದು.

ಧೀರಃ ಸದಾ ರಚಯತೇ ಹಿ ಪರೋಪಕಾರಂ
ವಾಕ್ಯಂ ಕಠೋರಮಪಿ ತಸ್ಯ ದಯಾರ್ದ್ರಗರ್ಭಂ।
ನಿರ್ವಾತತೋಯನಿವಹೈಃ ಜಲಧಿರ್ವಿಸೃಷ್ಟಾ
ವರ್ಷೋಪಲಾ ದದತಿ ಶೀತಲವಾರಿಗರ್ಭಂ ॥[6]

ಮನೋದಾರ್ಢ್ಯವಿರುವವರು ಯಾವಾಗಲೂ ಬೇರೆಯವರಿಗೆ ಒಳ್ಳೆಯದನ್ನೇ ಮಾಡುವರು. ಅವರಲ್ಲಿರುವ ಕಠಿಣ ಪದಗಳಲ್ಲೂ ದಯೆಯಿರುತ್ತದೆ. ಆನೆಕಲ್ಲು ಮಳೆಸುರಿಸಿ ತಮ್ಮ ನೀರಿನ ಅಂಶವನ್ನು ಕಳೆದುಕೊಂಡಂತಹ ಮೋಡಗಳು ತಂಪಾದ ನೀರಿನಿಂದ ಕೂಡಿರುತ್ತದೆ.

ಸಂಸ್ಕೃತಿಯುಳ್ಳವರ ಗುಣವೆಂದರೆ ಪರೋಪಕಾರ. ಅವರು ಹೊರಹೋಗಿ ತಮ್ಮ ಐಶ್ವರ್ಯವನ್ನು ಬಡವರೊಂದಿಗೆ ಹಂಚಿಕೊಳ್ಳುತ್ತಾರೆ. ಅದರಿಂದ ಪ್ರತಿಯಾಗಿ ನಾಶವಿಲ್ಲದ ಯಶಸ್ಸನ್ನು ಪಡೆಯುತ್ತಾರೆ. ಕಾಳಿದಾಸ ಹೇಳುವಂತೆ –ಚಂದ್ರನ ಕಲೆಗಳನ್ನು ದೇವತೆಗಳು ಕಲೆಯಾದ ಕಲೆಯಂತೆ ಕಬಳಿಸುವಂತೆ ಅದು ಅದರಿಂದ ಸಮೃದ್ಧಿಯನ್ನೇ ಪಡೆಯುತ್ತದೆ – ಪರ್ಯಾಯ ಪೀತಸ್ಯ ಸುರೈಃ ಹಿಮಾಂಶೋಃ ಕಲಾಕ್ಷಯಃ ಶ್ಲಾಘ್ಯತರೋ ಹಿ ವೃದ್ಧೇಃ[7]. ಮಹಾತ್ಮರು ತಾವು ಬೇರೆಯವರಿಗೆ ಮಾಡಿದ ಉಪಕಾರವನ್ನು ಹೇಳುವುದಿಲ್ಲ ಅದರಿಂದ ಅವರಿಗೆ ಅಹಂಕಾರವುಂಟಾಗಬಹುದೆಂದು ಅವರು ತಮ್ಮನ್ನು ಹಿಂದೆಯೇ ಇಟ್ಟುಕೊಂಡು ಬೇರೆಯವರಿಗೆ ಒಳಿತನ್ನು ಮಾಡುತ್ತಾರೆ. ಈಶ್ವರ ಚಂದ್ರ ವಿದ್ಯಾಸಾಗರರ ಜೀವನದಲ್ಲಿ ನಡೆದ ಘಟನೆಯನ್ನೇ ಇಲ್ಲಿ ಉದ್ಧರಿಸಬಹುದು. ಅವರಿಗೆ ಬೆಳಿಗ್ಗೆ ಸುತ್ತಾಡಲು ಹೋಗುವ

ಅಭ್ಯಾಸವಿತ್ತು. ಒಂದು ದಿನ ಬೆಳಗ್ಗೆ ಒಬ್ಬ ತನ್ನ ದುರ್ದೈವದ ಬಗ್ಗೆ ಅಳುತ್ತಿರುವುದನ್ನು ನೋಡಿದ.

ವಿದ್ಯಾಸಾಗರರು ಅವನ ಬಳಿ ಬಂದು ಅವನ ಅಳುವಿಗೆ ಕಾರಣ ಕೇಳಿದರು. ಅದಕ್ಕೆ ಅವನು ಅವರನ್ನು ಲೆಕ್ಕಿಸದೆ ತಮ್ಮ ಕೆಲಸ ತಾವು ನೋಡುವಂತೆ ಹೇಳಿದರು. ವಿದ್ಯಾಸಾಗರ ಪೀಡಿಸಿದಾಗ ಅವನು ಮತ್ತೂ ಸಹ ತಿರಸ್ಕಾರದಿಂದಿದ್ದ. ನಿನಗೆ ನನ್ನ ಸಹಾಯ ಮಾಡಲು ಹಣವಿದೆಯೇ ನನ್ನನ್ನು ನನ್ನ ಪಾಲಿಗೆ ಬಿಡಿ. ಅದಕ್ಕೆ ಅವನು ನುಡಿದ. ನಾನು ನನ್ನ ಮನೆಯನ್ನು ಮಗಳ ಮದುವೆಗಾಗಿ ಅಡವಿಟ್ಟಿದ್ದೇನೆ. ಆ ಹಣಕೊಡಲಾರದೆ ಈಗ ಮನೆಯು ಹರಾಜಿನಲ್ಲಿದೆ, ನ್ಯಾಯಾಲಯದ ಆದೇಶದಂತೆ ಮರುದಿನ ಹರಾಜು ಹಾಕುವವನು ಸಕಾಲಕ್ಕೆ ಬಂದು ಹೇಳಿದ - ಈಗ ನಿನ್ನ ಮನೆ ಹರಾಜಾಗಬೇಕಿಲ್ಲ ಎಂದು ಆಗ ಅವನಿಗನಿಸಿತು. ಹಿಂದಿನ ದಿನ ತನ್ನನ್ನು ಅಷ್ಟಾಗಿ ಪೀಡಿಸಿದವನೇ ಈ ಹಣಕೊಟ್ಟು ತನ್ನನ್ನು ಸಹಕರಿಸಿರಬೇಕೆಂದು ಅನ್ಯಾಯವಾಗಿ ನಾನು ಅವನ ಬಗ್ಗೆ ಅಷ್ಟು ಕಠೋರವಾಗಿ ವರ್ತಿಸಬಾರದಿತ್ತು ಎಂದು.

ಇದು ನಿಜವಾದ ಅರ್ಥದಲ್ಲಿ ಪರೋಪಕಾರ.

ಬೇರೆಯವರನ್ನು ನಮ್ಮಂತೆಯೇ ಎಂದು ಒಪ್ಪಿಕೊಂಡಾಗ ಮಾತ್ರವೇ ಸಹಾಯ ಮಾಡಲು ಸಾಧ್ಯ. ತನ್ನಷ್ಟಕ್ಕೆ ತಾನಿದ್ದರೆ ತನ್ನನ್ನು ಅಷ್ಟಕ್ಕೆ ಸೀಮಿತಗೊಳಿಸಿಕೊಂಡರೆ. ಅಥವಾ ಸಂಬಂಧಿಕರೊಂದಿಗೆ ಮಾತ್ರವೇ ಹಾಗೆ ನಡೆದುಕೊಂಡಂತೆ ಆಗ ನಮ್ಮ ದೃಷ್ಟಿಕೋನ ಸಂಕುಚಿತವಾಗುತ್ತದೆ. ದೂರದೃಷ್ಟಿಕೋನವಿಲ್ಲದಿದ್ದರೆ ಪರೋಪಕಾರ ಸಾಧ್ಯವಿಲ್ಲ. ಅವರು ವಿಶಾಲವಾಗಿ ತನ್ನನ್ನು ರೂಪಿಸಿಕೊಂಡಾಗಲೇ ಬೇರೆಯವರು ತಮ್ಮ ಕಷ್ಟಗಳಿಂದ ಪಾರಾಗಬಹುದು. ಅವರ ಎಲ್ಲಾ ಬಯಕೆಗಳೂ ಈಡೇರಬಹುದು. ಅವರು ಎಲ್ಲೆಡೆ ಸಂತೋಷವನ್ನು ಪಡೆಯಬಹುದು :-

ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।
ಸರ್ವಃ ಕಾಮಾನವಾಪ್ನೋತು ಸರ್ವಃ ಸರ್ವತ್ರ ನಂದತು ।।[8]

---

ಆಕರಗಳು

1) ಕುಟ್ಟನೀಮತ 5.724 2) ವಿಕ್ರಮಾರ್ಕಚರಿತ.11 3) ನೀತಿಶತಕ.71 4) ಶ್ರೀಕಂಠಚರಿತ. 25.115 5) ನೀತಿಶತಕ.66 6) ಸೂಕ್ತಿಮುಕ್ತಾವಳೀ.125 7) ರಘುವಂಶ.5.16 8) ವಿಕ್ರಮೋರ್ವಶೀಯ.5.25

# 20. ತಿತಿಕ್ಷಾ

ಪರೋಪಕಾರದೊಂದಿಗೆ ಸರಿದೋರುವ ಮತ್ತೊಂದು ಮೌಲ್ಯ ಎಂದರೆ ತಿತಿಕ್ಷೆ. ಬೇರೆಯವರು ತನಗೆ ಮಾಡಿದ ಕೆಟ್ಟದ್ದನ್ನು ಅಪ್ರತೀಕಾರನಾಗಿ ಸಹಿಸಿಕೊಳ್ಳುವುದು ಎಂದು ಅದನ್ನು ನಿರೂಪಿಸಬಹುದು. ಇದಕ್ಕೆ ನೈತಿಕತೆಯ ಬಲಬೇಕು. ಸಾಮಾನ್ಯವಾಗಿ ಮುಯ್ಯಿಗೆ ಮುಯ್ಯಿ ನಮ್ಮ ಮತ. ಹಾಗೆ ಮಾಡದಿರುವುದು ನಿಜಕ್ಕೂ ಒಳ್ಳೆಯಗುಣ. ಅದರಿಂದ ಅನೇಕ ಒಳಿತುಗಳೂ ಉಂಟಾಗಬಹುದು. ಅದಕ್ಕೆ ಸರಿಸಮಾನವಾದುದು ಯಾವುದೂ ಇಲ್ಲ - ನತಿತಿಕ್ಷಾ ಸಮಮಸ್ತಿ ಸಾಧನಂ [1]. ಪ್ರತಿಕ್ರಿಯಿಸಲು ಶಕ್ತವಾಗಿದ್ದರೂ, ಶಿಕ್ಷೆವಿಧಿಸಲು ಸಮರ್ಥನೇ ಆಗಿದ್ದರೂ, ಸಂಬಂಧವನ್ನು ಸಂಪಾದಿಸುವುದು ಹೇಳಬೇಕಾದರೆ.

ತಿತಿಕ್ಷಾಕವಚೇನೈಕಃ ಸರ್ವಂ ಜಯತಿ ಸಂವೃತಃ2

ಸಹನೆಯಿಂದ ಅವನು ಎಲ್ಲವನ್ನೂ ಗೆಲ್ಲುತ್ತಾನೆ. ಎಲ್ಲಿ ಎಂದರೆ ಬೇರೆಯವರ ದ್ವೇಷವೆಂದಷ್ಟೇ ಅಲ್ಲ ತನ್ನ ಕೋಪ, ಪ್ರತೀಕಾರ ಬುದ್ಧಿಯೂ ಹೌದು. ತಮಗಾದ ಅನ್ಯಾಯ, ಅಪಕೀರ್ತಿಗೆ ಸ್ಪಂದಿಸುವುದೇ, ಸಾಮಾನ್ಯವಾಗಿ ಇದಕ್ಕೊಂದು ಉದಾಹರಣೆ ನೀಡಬಹುದು. ಒಮ್ಮೆ ತುಕಾರಾಮನ ಹೆಂಡತಿ ಅವನ ಬಳಿ ಕೋಪಗೊಂಡಳು ಮತ್ತು ಕಬ್ಬಿನ ಜಲ್ಲೆಯಿಂದ ಅವನನ್ನು ಹೊಡೆದಳು. ತುಕಾರಾಮನು ಆ ಜಲ್ಲೆಯನ್ನು ಇಬ್ಭಾಗಮಾಡಿ, ಒಂದು ಭಾಗವನ್ನು ತನ್ನ ಹೆಂಡತಿಗೆ ಕೊಟ್ಟು ಇನ್ನೊಂದು ಭಾಗ ತಾನು ಕಚ್ಚಲು ತೊಡಗಿದಾಗ ಅವಳಿಗೆ ನಾಚಿಕೆಯಾಗಿ ತನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟಳು. ಮಹಾತ್ಮಾಗಾಂಧೀ ಬ್ರಿಟೀಷರ ವಿರುದ್ಧ ಹೋರಾಡುತ್ತಿದ್ದರೂ ಅವರ ಬಗ್ಗೆ ಕೆಟ್ಟ ಅಭಿಪ್ರಾಯ ಹೊಂದಿದವರಾಗಿರಲಿಲ್ಲ. ತಿತಿಕ್ಷೆಯು ತನು, ಮನ, ಉಪರತಿಗಳ ಸಹಕಾರದಿಂದ ಆತ್ಮ ಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ –ತಸ್ಮಾದೇವಂವಿತ್ ಶಾಂತೋ ದಾಂತಃ ಉಪರತಃ ತಿತಿಕ್ಷುಃ ಸಮರತಿರ್ಭೂತ್ವಾ ಆತ್ಮನ್ಯೇವ ಮಾತ್ಮಾನಂ ಪಶ್ಯೇತ್.

ಕ್ಷಮೆಯೆಂಬುದು ತಿತಿಕ್ಷೆಗಿರುವ ಮತ್ತೊಂದು ಹೆಸರು. ವಾಲ್ಮೀಕಿ ರಾಮಾಯಣ3 ಅದನ್ನು ಅತ್ಯಂತ ದೊಡ್ಡದಾದ ಉಡುಗೊರೆ ಎಂದು ನಿರೂಪಿಸುತ್ತದೆ.

---

ಆಕರಗಳು

1)ಕಿರಾತಾರ್ಜುನೀಯ.2.43 2)ಸುಭಾಷಿತ ನೀವೀ.7.6. 3)5-55-6.

# 21. ಉದ್ಯೋಗ, ಉದ್ಯಮ

ಜ್ಞಾನವು ದೃಢಸಂಕಲ್ಪದ ಹಿನ್ನಲೆಯನ್ನು ಬಯಸುತ್ತದೆ. ತನ್ನ ಭಾವನೆಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ಅಂದುಕೊಂಡಾಗಲೂ ಹಾಗೆ ಮಾಡಲು ಆಗದಿರಬಹುದು. ಆದ್ದರಿಂದ ದೃಢವಾದ ಸಂಕಲ್ಪದ ಅಗತ್ಯವಿರುತ್ತದೆ.

ಎಲ್ಲಾ ಮಾನವೀಯ ಕ್ರಿಯೆಗಳಿಗೂ ಕ್ರಮ ಹಾಗೂ ಉಪಕ್ರಮ ಆಗತ್ಯವಾದುದು. ಪ್ರಕೃತಿಯು ವಿಧಿಸಿರುವಂತೆ ಮಾನವ ಒಂದು ಕ್ಷಣವೂ ಸಹ ಸುಮ್ಮನೆ ನಿಷ್ಕ್ರಿಯವಾಗಿರಲಾರ:- ನ ಜಾತು ತಿಷ್ಠತ್ಯಕರ್ಮಕೃತ್[1]. ಅವನು ಅವಶ್ಯವಾಗಿ ಯಾವುದಾದರೂ ಕ್ರಿಯೆಯಲ್ಲಿ ತೊಡಗಿಸಿಕೊಂಡಿರುತ್ತಾನೆ :-

ಕಾರ್ಯತೇಹ್ಯವಶಂ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ2.

ತಿನ್ನುವುದು, ಕುಡಿಯುವುದು, ಮಾತನಾಡುವುದು, ನಡೆಯುವುದು, ನಿದ್ರಿಸುವುದು ಮೊದಲಾದ ಸಹಜ ಕ್ರಿಯೆಗಳು ಸ್ವಾಭಾವಿಕವಾಗಿಯೇ ನಮ್ಮ ಶ್ರಮವಿಲ್ಲದೇ ನಡೆಯುತ್ತಿರುತ್ತದೆ. ಈ ಕ್ರಿಯೆಯಿಂದಲೇ ಸಮಸ್ತ ಸಂಸ್ಕೃತ ಸಾಹಿತ್ಯವನ್ನು ಉದಾತ್ತೀಕರಿಸಲಾಗಿದೆ. ಉದ್ಯೋಗ, ಉದ್ಯಮ ಅಥವಾ ಅಭಿಯೋಗ ಮಾನವನಿಗೆ ಹಣವನ್ನು ನೀಡುತ್ತದೆ ಮತ್ತು ತನ್ನನ್ನು ತಾನು ತೊಡಗಿಸಿಕೊಳ್ಳುವಂತೆ ಮಾಡುತ್ತದೆ. ಉದ್ಯೋಗಿನಂ ಪುರುಷ ಸಿಂಹಮುಪೈತಿ ಲಕ್ಷ್ಮೀಃ. ಇದರಿಂದಲೇ ಅವನು ಎಲ್ಲವನ್ನೂ ಪಡೆಯಲು ಸಾಧ್ಯವಾಗುತ್ತದೆ ಕೇವಲ ಪವಿತ್ರ ಆಲೋಚನೆಗಳಿಂದಲ್ಲ. ಉದ್ಯಮೇನ ಹಿ ಸಿಧ್ಯಂತಿ ಕಾರ್ಯಾಣಿ ನ ಮನೋರಥೈಃ. ಸಿಂಹ ಮಲಗಿ ನಿದ್ರಿಸುತ್ತಿರುವಾಗ ಜಿಂಕೆಯು ತಾನೇ ಬಂದು ಅದರ ಬಾಯಲ್ಲಿ ಬೀಳುವುದಿಲ್ಲ :-

ನಹಿಸುಪ್ತಸ್ಯ ಸಿಂಹಸ್ಯ ಪ್ರವಿಶಂತಿ ಮುಖೇಮೃಗಾಃ ॥[4]

ಆದ್ದರಿಂದ ಶ್ರಮ, ಉಪಕ್ರಮ, ತೊಡಗಿಸಿಕೊಳ್ಳುವಿಕೆಗೆ ಒತ್ತುಕೊಡಲಾಗಿದೆ ವೈದಿಕ ಸಾಹಿತ್ಯದಲ್ಲಿ. ದೇವತೆಗಳಿಗೂ ಸಹ ಕಷ್ಟಪಡದ ಮಾನವರೊಂದಿಗೆ ಸ್ನೇಹ ಬಯಸುವುದಿಲ್ಲ ನ ಋತೇಶ್ರಾಂತಸ್ಯ ಸಖ್ಯಾಯದೇವಾಃ[5]. ದೇವತೆಗಳು ಶ್ರಮವಹಿಸುವವರನ್ನು ಕಾಪಾಡುವರೆಂಬುದು ಸುಳ್ಳಲ್ಲ

ನಮ್ಮಶಾಶ್ರಾಂತಂ ಯದವಂತಿ ದೇವಾಃ[6]

ಶ್ರಮವಹಿಸದವರ ಬಳಿ ಸಿರಿ ಬರುವುದಿಲ್ಲ. ಯಾವುದೋ ಒಂದು ಬಾರಿ ಮಾಡಿದ ಪ್ರಯತ್ನ ಫಲ ನೀಡುವುದಿಲ್ಲ. ಆದರೆ ಅದನ್ನು ಎಡಬಿಡದೆ ಮಾಡುವ ನೈರಂತರ್ಯವೇ ಸಹಕಾರಿಯಾಗುತ್ತದೆ. ಇದರಿಂದಲೇ ಅತ್ಯಂತ ಕಠಿಣಕ್ರಿಯೆಗಳೂ ಸಾಕಾರಗೊಳ್ಳಬಹುದು. ಒಂದೇ ಸಮನೆ ನೀರು ಬೀಳುತ್ತಿದ್ದರೆ ಕಲ್ಲೂ ಸಹ ಮೃದುವಾಗಬಹುದು.

ದುರ್ಲಭಾನ್ಯಪಿ ಸಿಧ್ಯಂತಿ ಕಾರ್ಯಾಣಿ ಪ್ರೋದ್ಯಮೇನ ಹಿ ।
ಶಿಲಾಪಿತನುತಾಂ ಯಾತಿ ಪ್ರಪಾತೇ ನರ್ಣಸೋ ಮುಹುಃ ॥[7]

ಒಂದು ಪ್ರಾಚೀನ ಘಟನೆ ಇದನ್ನು ಸ್ಪಷ್ಟೀಕರಿಸುತ್ತದೆ. ಬಂಗಾಳದ ಬ್ರಾಹ್ಮಣನಾದ ಭೋಪದೇವ ತನ್ನ ಬುದ್ಧಿಹೀನತೆಯಿಂದ ಗುರುವಿನಿಂದ ನಿಂದನೆಗೊಳಗಾದ. ಅನೇಕ ಸಲ ಹೇಳಿದರೂ ಅವನು ಪಾಠಕಲಿಯಲು ಅಸಮರ್ಥನಾಗಿದ್ದ. ಅದರಿಂದ ಗುರು ಅವನನ್ನು ಗುರುಕುಲದಿಂದ ಓಡಿಸಿದ. ಅವನು ಹೊರಗೆ ಒಂದು ಬಾವಿ ಹಾಗೂ ತೂತಾದ ಗಡಿಗೆಯನ್ನು ಕಂಡ. ಆ ಮಡಕೆಯಿಂದ ನೀರನ್ನು ತರುತ್ತಿದ್ದ ಹೆಂಗಸರನ್ನು ಕೇಳಿದಾಗ ಅದು ಮತ್ತೆ ಮತ್ತೆ ಹಗ್ಗದಿಂದ ಎಳೆಯುವುದರಿಂದ ಮಡಕೆಯಲ್ಲಿ ತೂತಾಗಿದೆಯೆಂದರು. ಆಗ ಅವನಿಗೆ ಅನಿಸಿತು – ಇದು ನಿರ್ಜೀವ ವಸ್ತುವಿಗೇ ಆದರೆ, ನನಗೇಕೆ ಆಗಬಾರದು ಎಂದು. ಇದು ಜೀವನದಲ್ಲಿ ಅವನ ದೃಷ್ಟಿಯನ್ನೇ ಬದಲಾಯಿಸಿತು. ಅವನು ಗುರುಕುಲಕ್ಕೆ ಹಿಂದಿರುಗಿ ತನ್ನ ಓದನ್ನು ನಿರಂತರವಾಗಿ ಅಭ್ಯಾಸ ಮಾಡಿದ. ಆಗ ಅದು ಅವನ ಮನಸ್ಸಿನ ಅಂತರಾಳದಲ್ಲಿಳಿಯಿತು. ಇದರಿಂದ ಗುರುಗಳ ವಿಶ್ವಾಸಕ್ಕೂ ಪಾತ್ರನಾದ ಮತ್ತು ಅಂದಿನ ಶತಮಾನದ ಅತ್ಯಂತ ಶ್ರೇಷ್ಠ ಮೇಧಾವಿಯಾದ. ಆದ್ದರಿಂದ ಸತತ ಅಭ್ಯಾಸ ಗೆಲುವಿಗೆ ಕಾರಣವಾಗುತ್ತದೆ.

ಅಶ್ವಘೋಷ ಮತ್ತೊಂದು ಶ್ಲೋಕದ ಮುಖಾಂತರ ಇದೇ ಸಂದರ್ಭವನ್ನೇ ಪ್ರತಿಪಾದಿಸುತ್ತಾನೆ. ಯಾರು ಕಟ್ಟಿಗೆಗಳನ್ನು ಉಜ್ಜುವುದನ್ನು ಬೆಂಕಿ ಬರುವವರೆಗೂ ನಿಲ್ಲಿಸುವುದಿಲ್ಲವೋ ಅದೇ ರೀತಿ ಆಧ್ಯಾತ್ಮಿಕ ಸಾಧನೆಯೂ ಸಹ :-

ಅರಣಿಮಂಥನೇ ಜಾತುಯೋ ವಿರಂತುಂನ ಚೇಷ್ಟತೇ ।
ಸ ಏವ ಲಭತೇ ವಹ್ನಿಮ್ ಏವಂ ಸಿದ್ಧೇರಪಿ ಸ್ಥಿತಿಃ ॥[8]

ಸ್ವಭಾವತಃ ಗಟ್ಟಿಯಿಲ್ಲವಾದರೂ ಸಹ ಸತತವಾದ ಅಭ್ಯಾಸವೇ ಕಾರ್ಯದಲ್ಲಿ ಸಿದ್ಧಿಯನ್ನುಂಟುಮಾಡಬಹುದು. ಒಂದು ಹಳೆಯ ಸುಭಾಷಿತದ ಪ್ರಕಾರ ಒಂದು ಇರುವೆ ತನ್ನ ನಡಿಗೆಯಲ್ಲಿ ನಿಧಾನವಾಗಿದ್ದರೂ ಸಾವಿರಾರು ಯೋಜನೆಗಳನ್ನು ಚಲಿಸಬಹುದು. ಆದರೆ ಸುಮ್ಮನೆ ಕುಳಿತಿರುವ ಗರುಡ ಒಂದು ಹೆಜ್ಜೆಯನ್ನು ಮುಂದುವರಿಯಲಾರದು :-

ಯೋಜನಾನಂ ಸಹಸ್ರಾಣಿ ಯಾತಿಗಚ್ಛನ್ ಪಿಪೀಲಿಕಾ ।
ಅಗಚ್ಛನ್ ವೈನತೇಯೋಽಪಿ ಪದಮೇಕಂನ ಗಚ್ಛತಿ ॥[9]

ತನಗೆ ತನ್ನ ಕಾರ್ಯದಲ್ಲಿ ಸಫಲತೆ ದೊರೆಯದಿದ್ದರೂ ಸಹ ನಮ್ಮ ಉದ್ಯಮವನ್ನು ಬಿಡಬಾರದು. "ಅದು ನನ್ನ ದುರ್ದೈವ" ಎನ್ನುವುದು ಸರಿಯಲ್ಲ. ಯಾವುದು ಬರಲೇಬೇಕೋ ಅದು ಬಂದೇ ಬರುತ್ತದೆ. ದೈವವು ನನಗೆ ವಿಧಿಸಿರುವುದನ್ನು ಅನುಭವಿಸಲೇ ಬೇಕು ಎಂಬ ಮಾನಸಿಕ ಭಾವನೆಗಳು ನಮ್ಮನ್ನು ಮುಂದಕ್ಕೆ ಕರೆದೊಯ್ಯುವುದಿಲ್ಲ. ದೈವ ಅಥವಾ ಅದರ ಅಭಾವ, ಮಾನವ ತನ್ನ ಪ್ರಯತ್ನಮಾಡಿಯೇ ಮಾಡಬೇಕು. ಯಾರೂ ಸಹ ಪ್ರಯತ್ನವಿಲ್ಲದೆ ಕಾಳುಗಳಿಂದ ಎಣ್ಣೆಯನ್ನು ತೆಗೆಯಲು ಸಾಧ್ಯವಿಲ್ಲ.

ನದ್ಯೈವಮಪಿ ಸಂಚಿಂತ್ಯ ತ್ಯಜೇದುದ್ಯೋಗಮಾತ್ಮನಃ ।
ಅನುದ್ಯೋಗೇನ ತೈಲಾನಿ ತಿಲೇಭ್ಯೋ ನಾಪ್ತು ಮರ್ಹತಿ ॥ [10]

ಕಪ್ಪೆಗಳು ಕೊಳಕ್ಕೆ, ಹಕ್ಕಿಗಳು ತುಂಬಿದ ಸರೋವರಕ್ಕೆ ಸೇರುವಂತೆ ಶ್ರಮವಹಿಸಿದವರಿಗೆ ಕಾರ್ಯಸಿದ್ಧಿಯಾಗುತ್ತದೆ :-

ನೀಪಾನಾಮಿವ ಮಂಡೂಕಾಃ ಸರಃ ಪೂರ್ಣಂ ಇವಾಂಡಜಾಃ ।
ಸೋದ್ಯೋಗಂ ನರಮಾಯಾಂತಿ ವಿವಶಾಃ ಸರ್ವಸಂಪದಃ ॥ [11]

ಯಾರು ಶ್ರಮವನ್ನು ಮಿತ್ರನಂತೆ, ಅವಹೇಳನವನ್ನು ಶತ್ರುವಂತೆ ನೋಡುವರೋ ಅಂತಹವರು ಬಹಳ ಸಾಧಿಸುತ್ತಾರೆ :-

ಉದ್ಯಮೋ ಮಿತ್ರವದ್ ಗ್ರಾಹ್ಯಃ ಪ್ರಮಾದಂ ಶತ್ರುವತ್ತ್ಯಜೇತ್ ।
ಉದ್ಯಮೇನ ಪರಾಸಿದ್ಧಿಃ [12] ....

ಕೇವಲ ಶ್ರಮವಹಿಸುವುದು ಮಾತ್ರವಲ್ಲ, ಬೇಗ ಆ ಕೆಲಸ ಮಾಡಬೇಕು (ಸಮಯ ಹಾನಿಯಾಗಬಾರದು) ಆಗಲೇ ಅವನು ಕಾರ್ಯವನ್ನುಸಾಧಿಸುತ್ತಾನೆ :-

ಕಾರ್ಯೇಷ್ವವಶ್ಯಕಾರ್ಯೇಷು ಸಿದ್ಧಯೇ ಕ್ಷಿಪ್ರಕಾರಿತಾ । [13]

---

ಆಕರಗಳು

1) ಗೀತಾ.3.5 2) ಅದೇ. 3) ಪಂಚತಂತ್ರ.2.137 4) ಕವಿತಾಮೃತಕೂಪ.57. 5) ಋಗ್ವೇದ.4.33.11 6) ಅದೇ 7) ಬುದ್ಧಚರಿತ.26.63 8) ಅದೇ.26.64. 9) ಮಾರ್ಕಂಡೇಯಪುರಾಣ.18.39 10) ಹಿತೋಪದೇಶ.ಪ್ರಸ್ತಾವನಾ.32 11) ಹಿತೋಪದೇಶ.167 12) ಬುದ್ಧಚರಿತ.26.73 13) ಕುಮಾರಸಂಭವ.10.25

# 22. ಸಂತೋಷ

ಸಂತೋಷ ಎಂದರೆ ಸಮಾಧಾನ. ಸಮಾಧಾನದಿಂದಲೇ ಅತಿಯಾಸೆಯನ್ನು ಗೆಲ್ಲಬಹುದು. ತನಗಿರುವುದರಿಂದ ತೃಪ್ತಿ. ಅದರಿಂದ ಮನಸ್ಸಿಗೆ ಶಾಂತಿ. ಅದೇ ಅತ್ಯಂತ ಮಹತ್ವವುಳ್ಳದ್ದು:-

ಸದಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ।
ಶರ್ಕರಾಕಂಠಕಾದಿಭ್ಯೋ ಯತ್ರೋಪಾನಾತ್ಪದಂ ಶಿವಂ ॥[1]

ಯಾರಿಗೆ ಮನಸ್ಸಮಾಧಾನವಿದೆಯೋ ಅವರಿಗೆ ಎಲ್ಲ ಕಾಲಕ್ಕೂ ಎಲ್ಲ ದಿಕ್ಕುಗಳೂ ಸಂತೋಷವನ್ನು ಕೊಡುತ್ತದೆ ಹೇಗೆ ಪಾದತ್ರಾಣ ಹಾಕಿಕೊಂಡವನಿಗೆ ಕಲ್ಲು ಮುಳ್ಳುಗಳಿಂದ ರಕ್ಷಣೆ ದೊರೆಯುವುದೋ ಹಾಗೆ :-

ಒಬ್ಬ ಅತ್ಯಂತ ಹಣವಂತನಾಗಿದ್ದರೂ ತನ್ನ ಹಣ ಬೇರೆಯವರೊಡನೆ ಹಂಚಿಕೊಳ್ಳದೆ, ತಾನೂ ಅನುಭವಿಸದೆ ಅತ್ಯಂತ ಜಿಪುಣನಾಗಿರಬಹುದು. ಆದ್ದರಿಂದ ನಿಜವಾದ ಸಿರಿತನ ಮಾನಸಿಕ ಉದಾರತೆಯಿಂದಲೇ ಉಂಟಾಗುತ್ತದೆ. ಅದೇ ಅತ್ಯಂತ ಪ್ರಶಸ್ತವಾದುದು :-

ಆಢ್ಯತ್ವಂ ನಾಮ ತದಿದಂ
ನತದ್ ಧನವತ್ವಂ ಯದಕಿಂಚನಸಮಂ ಮತಮ್ ॥[2]

ಸಂತೋಷವೇ ಅತ್ಯಂತ ದೊಡ್ಡ ನಿಧಿ - ಪರಂ ನಿಧಾನಂ ಮಿಕ್ಕೆಲ್ಲಾ ನಿಧಿಗಳೂ ಇದರ ಮುಂದೆ ಕ್ಷಣಿಕ, ಕ್ಷಯಾಂತಾಃ -ಕ್ಷಯವುಳ್ಳದ್ದು ಎಂದು ವರ್ಣಿಸಲಾಗಿದೆ. ಅವು ಬಂದುಹೋಗುತ್ತವೆ ಆದರೆ ಸಂತೋಷ ಹಾಗಲ್ಲ. ಈ ಗುಣ ಮಾನಸಿಕ ಆರೋಗ್ಯವನ್ನು ಸೂಚಿಸುತ್ತದೆ. ಅದು ಪಡೆದ ನಂತರ ಲೌಕಿಕ ಸಂಪತ್ತಿಗಾಗಿ ಅವನು ಬಯಸುವುದಿಲ್ಲ. ಏಕೆಂದರೆ ಅದು ಅವನಿಗೆ ನಿಜವಾದ ಸಂತೋಷವನ್ನು ನೀಡಲಾರದು.

ಸಂತೋಷ ಮನಃಶಾಂತಿಯಿಂದ ಮಾತ್ರವೇ ಬರುತ್ತದೆ. ಪದ್ಮಪುರಾಣ ಸರಿಯಾಗಿಯೇ ಹೇಳುತ್ತದೆ :-

ಸಂತೋಷಾಮೃತ ತೃಪ್ತಾನಾಂ ಯತ್ಸುಖಂ ಶಾಂತಚೇತಸಾಮ್ ।
ಕುತಸ್ತದ್ ಧನಲುಬ್ಧಾನಾಂ ಇತಶ್ಚೇತಶ್ಚಧಾವತಾಂ ॥[3]

ಯಾರು ಹಣದ ದುರಾಸೆಯಿಂದ ಅತ್ತಿಂದಿತ್ತ ಓಡುವರೋ ಹೇಗೆ ಅವರಿಂದ ಸಂತೋಷ ಅನುಭವಿಸಲಾದೀತು? ಯಾರು ಮನಃಶಾಂತಿ ಪಡೆದಿರುವರೋ ಅವರಿಗೆ ಅಮೃತದಂತಹ ಸಮಾಧಾನವಿರುತ್ತದೆ.

ಮಾನವನಿಗೆ ವಿಹಿತವಾಗಿರುವ 5 ನಿಯಮಗಳಲ್ಲಿ (ಇದು ಮಾಡಲೇ ಬೇಕಾದುದಲ್ಲ ಆದರೆ ಯಮ ಹಾಗಲ್ಲ) ಸಂತೋಷವೆಂದರೆ ಯಾವುದು ಸಿಗುವುದಿಲ್ಲವೋ ಅದಕ್ಕಿಂತಲೂ ಹೆಚ್ಚು ಬಯಸದಿರುವುದು :- ಸನ್ನಿಹಿತಸಾಧನಾದ್ ಅಧಿಕಸ್ಯಾನುಪಾದಿತ್ಸಾ. ಅದು ಮಾನಸಿಕ ಸ್ಥಿತಿಯಾಗಿದ್ದು ಅವನಿಗೆ ಸಹಜವಾಗಿರಬಹುದು ಒಳ್ಳೆಯವರಲ್ಲಿ. ಅಂದರೆ

ಕಡಿಮೆಯಾದ ಆಸೆಗಳೆಂದರ್ಥ. ನಮಗೆ ಇರುವಷ್ಟರಲ್ಲಿ ತೃಪ್ತಿಯಿಂದಿರುವುದು. ಅತ್ಯಂತ ಹೆಚ್ಚಿನ ಹಣದಿಂದಷ್ಟೇ ಕಡಿಮೆ ಹಣದಿಂದಲೂ ತೃಪ್ತನಾಗಿರುವುದು. ಇದರಿಂದ ಹಣವಂತರ ಬಗ್ಗೆ ದುರಾಸೆಯಲ್ಲಿ ದಾಸರಾಗುತ್ತಾರೆ. ಅಥವಾ ಹಣವಂತನಾದ ಪಕ್ಕದ ಮನೆಯವನ ಜೀವನ ಶೈಲಿಯ ಬಗ್ಗೆ ಬೇಸರಗೊಳ್ಳದಿರುವುದು. ವಿವೇಕಿಯಾದವನು ಸರಿಯಾಗಿಯೇ ಹೇಳಿರುವನು. ದೈವವೇ ಕಿರೀಟವನ್ನು ಕೊಡುವುದಾದರೆ, ಅದು ಸಮಾಧಾನದ ಮೂಲಕ ಅದನ್ನು ಕೊಡುತ್ತದೆ. ಯಾರು ಆಸೆಗಳಿಂದ ಕೂಡಿರುವರೋ ಅವರಿಗೆ ನೂರು ಮೈಲಿಯೂ ಸಹ ದೂರವಲ್ಲ ಆದರೆ ಸಮಾಧಾನಗೊಳ್ಳುವವನಿಗೆ ಅವನ ಕೈಯಲ್ಲೇ ಆ ಪದಾರ್ಥವಿದ್ದರೂ ಅವನಿಗೇನೂ ಅನ್ನಿಸುವುದಿಲ್ಲ.

ನಯೋಜನಶತಂ ದೂರಂ ಬಾಧ್ಯಮಾನಸ್ಯ ತೃಷ್ಣಯಾ ।
ಸಂತುಷ್ಟಸ್ಯಕರಪ್ರಾಪ್ತೇಪ್ಯರ್ಥೇಭವತಿ ನಾದರಃ ॥[4]

ಅವರು ತಮ್ಮನ್ನು ತಾವು ಉಸಿರಿನಿಂದಿರಲು ಎಷ್ಟು ಬೇಕೋ ಅಷ್ಟೇ ಅವರದ್ದು. ಯಾರು ಅದಕ್ಕಿಂತ ಹೆಚ್ಚಾಗಿ ಅಪೇಕ್ಷಿಸುವರೋ ಅವರು ಕಳ್ಳರು ಶಿಕ್ಷಾರ್ಹರು :-

ಯಾವದ್ ಭ್ರಿಯೇತ್ ಜಠರಂ ತಾವತ್‌ಸ್ವತ್ವಂ ಹಿ ದೇಹಿನಾಮ್ ।
ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥[5]

ಪ್ರಕೃತಿಯು ಎಲ್ಲರಿಗೂ ಬೇಕಾಗುವಷ್ಟು ನೀಡಿದೆ. ಯಾರು ಅದಕ್ಕಿಂತಲೂ ಹೆಚ್ಚನ್ನಪೇಕ್ಷಿಸುವರೋ ಅವರು ದುಃಖವನ್ನೂ ನೋವನ್ನೂ ಅನುಭವಿಸುವರು. ಅಂತಹ ಅಧಿಕವುಳ್ಳವರು ತಮ್ಮ ಸಂಪತ್ತನ್ನು ಬೇರೆಯವರಿಗೆ ಹಂಚಬೇಕು. ಯಾರಿಗೆ ಅವರಷ್ಟೂ ಇಲ್ಲವೋ ಯಾರಿಗೆ ಪಡೆಯುವ ಹಕ್ಕಿದೆಯೋ – ಅಂತಹವರ ಮನಸ್ಸಿನಲ್ಲಿ ಅಸಹಜವಾದ ಸುಖವಿರುತ್ತದೆ ಸೌಖ್ಯಮಮಲಂ. ದುಃಖವಿರುವುದಿಲ್ಲ ನದುಃಖಂ ಮಾನಿಸಕ ತೊಂದರೆಯಿರುವುದಿಲ್ಲ – ತತಃ , ಶತ್ರುಗಳಿರುವುದಿಲ್ಲ ನರಿಪವಃ.[6]

ಈ ಸಂತೋಷದ ಬಗ್ಗೆ ಇರುವ ಚರ್ಚೆಯನ್ನು ಸಂತೋಷದ ವ್ಯಾಖ್ಯೆಯೊಂದಿಗೇ ಪರಿಸಮಾಪ್ತಿಗೊಳಿಸಬಹುದು. ಅದು ಸಂಸ್ಕೃತ ಸಾಹಿತ್ಯದಲ್ಲೇ ಅಪೂರ್ವವಾಗಿದ್ದು ಜಾಬಾಲ ಯೋಗ ನೀಡುತ್ತದೆ :-

ಯದೃಚ್ಛಾಲಾಭತೋ ನಿತ್ಯಂ ಪ್ರೀತಿರ್ಯಾ ಜಾಯತೇನೃಣಾಮ್ ।
ತತ್ಸಂತೋಷಂವಿದುಃ ಪ್ರಾಜ್ಞಾಃ ಪರಿಜ್ಞಾನೈಕ ತತ್ಪರಾಃ ॥[7]

ಯಾರು ಯಾದೃಚ್ಛಿಕವಾಗಿ ಬಂದದ್ದರಲ್ಲಿ ಸಂತೋಷವನ್ನು ಕಾಣುವರೋ, ವಿವೇಕಿಗಳು ಕೇವಲ ಜ್ಞಾನಾಕಾಂಕ್ಷಿಗಳಾಗಿರುವರೇ ಅದಕ್ಕೆ ಸಂತೋಷವೆಂದು ಹೆಸರು.

---

ಆಕರಗಳು

1) ಶ್ರೀಮದ್‌ಭಾಗವತಪುರಾಣ.7.15.7. 2) ನೀತಿಕಲ್ಪತರು.74.8. 3) 5.19.260 4) ಹಿತೋಪದೇಶ.1.148 5) ಶ್ರೀಮದ್ ಭಾಗವತ ಪುರಾಣ.8.14.8. 6) ಮನೋದೂತ.87. 7) 2.5.

# 23. ಶೌಚ

ಅತ್ರಿ ನಿರೂಪಿಸಿರುವಂತೆ ಹತ್ತು ನಿಯಮಗಳಲ್ಲಿ ಶೌಚವೂ ಒಂದು :-

ಶೌಚಂ ಇಜ್ಯಾ ತಪೋದಾನಂ ಸ್ವಾಧ್ಯಾಯೋಪಸ್ಥಾನ ನಿಗ್ರಹಃ ।
ವ್ರತ ಮೌನೋಪವಾಸಂಚ ಸ್ನಾನಂಚ ನಿಯಮಾ ದಶ ॥[1]

ವರ್ಜವಾಗಿರುವ ತಿಂಡಿಯನ್ನು ತಿನ್ನದಿರುವುದು, ಮರ್ಯಾದೆ ಕಳೆದುಕೊಂಡವರ ಬಗ್ಗೆ ಸಂಪರ್ಕವಿಲ್ಲದಿರುವುದು ಸನ್ನಡತೆಯನ್ನು ಪಾಲಿಸುವುದೇ ಶೌಚ :-

ಅಭಕ್ಷ್ಯ ಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತಃ ।
ಆಚಾರೇಚ ವ್ಯವಸ್ಥಾನಂ ಶೌಚಮೇತತ್ ಪ್ರಕೀರ್ತಿತಂ ॥[2]

ಚಾಣಕ್ಯರಾಜನೀತಿಶಾಸ್ತ್ರದ ಪ್ರಕಾರ ಶೌಚವು ಐದು ರೀತಿ. ಸರ್ವಭೂತ ದಯೆ, ಇಂದ್ರಿಯನಿಗ್ರಹ, ಸತ್ಯ, ಮಾನಸಿಕ ನುಡಿ ಹಾಗೂ ಜಲಶುದ್ಧಿ :-

ಸರ್ವಭೂತದಯಾಶೌಚಂ ಶೌಚಮಿಂದ್ರಿಯನಿಗ್ರಹಃ ।
ಸತ್ಯಂ ಶೌಚಂ ಮನಃ ಶೌಚಂ ಜಲಶುದ್ಧಿಶ್ಚಪಂಚಮಂ ॥[3]

ಸಾರವತ್ತಾಗಿ ಹೇಳಬೇಕಾದರೆ ಅದನ್ನು ಮೂರಾಗಿ ವಿಭಜಿಸಬಹುದು - ದೈಹಿಕ, ಮಾನಸಿಕ ಹಾಗೂ ಭೌತಿಕ :-

ಸ್ವದೇಹಮಲ ನಿರ್ಮೋಕ್ಷೋ ಮೃಜ್ಜಲಾಭ್ಯಾಂ ಮಹಾರ್ಣವೇ ।
ಅಹಂ ಶುದ್ಧಮಿತಿ ಜ್ಞಾನಂ ಶೌಚ ಮಾಹುರ್ಮನೀಷಿಣಃ ॥[4]

ಎಲೈ ಮುನಿಯೇ, ಜ್ಞಾನಿಗಳ ಪ್ರಕಾರ ಬಾಹ್ಯಶುದ್ಧಿಯೆಂದರೆ ದೇಹವನ್ನು ಮೃತ್ತಿಕೆ ನೀರಿನಿಂದ ಶುದ್ಧಿಗೊಳಿಸುವುದು, ದೀರ್ಘವಾಗಿ ಚಿಂತಿಸುವುದು ಮಾನಸಿಕಶುದ್ಧಿ, ತಾನು ಶುದ್ಧನೆಂದು ಭಾವಿಸುವುದು ಭೌತಿಕಶುದ್ಧಿ.

ಇವೆಲ್ಲದರಲ್ಲಿ ಜ್ಞಾನಶುದ್ಧಿಯೇ ಶ್ರೇಷ್ಠವಾದುದು. ಆದ್ದರಿಂದ ಅದನ್ನು ಸರಿಯಾಗಿ ಅನುಸರಿಸಬೇಕು. ಬಾಹ್ಯಶುದ್ಧಿ ಸರಿ ಆದರೆ ಆಂತರಿಕ ಶುದ್ಧಿ ಅದರಿಂದ ಕೂಡಿರಬೇಕು.

ಬಾಹ್ಯಶೌಚೇನಯುಕ್ತಃ ಸನ್‌ಸ್ತಥಾ ಚಾಭ್ಯಂತರಂ ಚರೇತ್ ॥[5]

ಬಾಹ್ಯಶುದ್ಧಿಯಾದನಂತರ ಅಂತಃಶುಚಿಯನ್ನು ಮಾಡಿಕೊಳ್ಳಬೇಕು.

ಬಾಹ್ಯಶುಚಿ ಮೊದಲು ಬರುತ್ತದೆ. ಶುದ್ಧಿಯೆಂದರೆ ಅದೇ ಸಾಮಾನ್ಯಾರ್ಥದಲ್ಲಿ ಅದು ಎಷ್ಟೇ ಕೆಳಮಟ್ಟದ್ದಾದರೂ ಸಹ. ಭಾರತೀಯ ಪರಂಪರೆ ಸ್ನಾನಕ್ಕೆ ಅತೀವ ಮಹತ್ವ ನೀಡುತ್ತದೆ. ಇದೇ ಮಾನವನನ್ನು ಶುಚಿಯಾಗಿಡುತ್ತದೆ, ರಾತ್ರಿ ನಿದ್ದೆಯ ನಂತರ ಅಥವಾ

ತೂಗಡಿಕೆಯ ನಂತರ, ಅಥವಾ ಬೆಳಗಿನ ಶ್ರಮದ ನಂತರ. ಭಾರತದಂತಹ ದೇಶದಲ್ಲಿ ಬಿಸಿಲಿನ ಬೇಗೆ ಹೆಚ್ಚಿರುವುದರಿಂದ ಹೆಚ್ಚಾಗಿ ಬೆವರುವುದರಿಂದ ಸ್ನಾನದ ಅವಶ್ಯಕತೆ ಹೆಚ್ಚಿರುತ್ತದೆ. ಸ್ನಾನ ಅಥವಾ ಈಜುಕೊಳದಲ್ಲಿ ಈಜು, ನದಿಯಸ್ನಾನ ಇತ್ಯಾದಿಗಳು ನಮ್ಮ ಸೋಮಾರಿತನವನ್ನು ತೆಗೆಯುತ್ತದೆ. ಅದರಿಂದ ಹೆಚ್ಚಾಗಿ ಚುರುಕಾಗಿರುವಂತೆ ಮಾಡುತ್ತದೆ. ಆದ್ದರಿಂದಲೇ ಹೇಳಿರುವುದು ಸಾವಿರ ವಿಷಯಗಳನ್ನು ಮರೆಮಾಡಿದರೂ ಸಹ ಸ್ನಾನವನ್ನು ಬಿಡಬಾರದು ಎಂದು. ಶತಂ ವಿಹಾಯ ಭೋಕ್ತವ್ಯಂ ಸಹಸ್ರಂ ಸ್ನಾನಮಾಚರೇತ್ ಆದ್ದರಿಂದಲೇ ಮೂಲಸ್ವರೂಪವು ಸ್ನಾನದೊಂದಿಗೆ ಕಲೆತಿರುವುದರಿಂದ ವಿಭಿನ್ನ ಪದಗಳಾಗಿ ಪ್ರಯೋಗಿಸುತ್ತಾರೆ. ಸ್ನಾತಕ, ಅಭಿಷೇಕ,ಪಾರಾವಾರ, ಸಾರಿಣಾ, ಅನುಕೂಲಾ, ಪ್ರತಿಕೂಲ, ಅನೂಪಾ, ಪ್ರತೀತ, ಕೇವಲ ಸ್ನಾನಕ್ಕೆ ಸೀಮಿತವಾಗಿರುತ್ತದೆ. ಅದಕ್ಕೆ ನೀರಿನ ಅವಶ್ಯಕತೆ ಹೆಚ್ಚಾಗಿರುತ್ತದೆ.

ದೇಹಶುದ್ಧಿಯಾದ ನಂತರ ಮುಂದಿನ ಹಂತವೇ ಮನಃಶುದ್ಧಿ ಮಾನಸಿಕಶುದ್ಧಿಯಿಂದ ಬುದ್ಧಿಯು ವಿಕಸಿಸುತ್ತದೆ. ಆಗ ಆತ್ಮಸಾಕ್ಷಾತ್ಕಾರ ಉಂಟಾಗುತ್ತದೆ. ಹಿಂದಿನ ಗ್ರಂಥಗಳು ನಿರೂಪಿಸಿರುವಂತೆ ತದನಂತರದ ಹೆಜ್ಜೆಗಳನ್ನು ಗಮನಿಸಬೇಕು ಮತ್ತು ದೈಹಿಕ ಶುದ್ಧಿಗೇ ಸೀಮಿತಗೊಳಿಸಿಕೊಳ್ಳಬಾರದು ಅದು ಎಷ್ಟೇ ಮುಖ್ಯವಾದರೂ ಅದೇ ಕೊನೆಯಲ್ಲಿ ನಾವು ಜ್ಞಾನಶುದ್ಧಿಯೆಂಬ ಅಂತಿಮ ಹಂತವನ್ನು ತಲುಪಬೇಕು ಎಂದು ಜಾಬಾಲಯೋಗ ಹೇಳುತ್ತದೆ.

ಜ್ಞಾನಶೌಚಂ ಪರಿತ್ಯಜ್ಯ ಬಾಹ್ಯೇಯೋರಮತೇ ನರಃ ।
ಸ ಮೂಢಃ ಕಾಂಚನಂ ತ್ಯಕ್ತ್ವಾ ಲೋಷ್ಠಂಗೃಹ್ಣಾತಿ ಸುವ್ರತ ॥[6]

ಎಲೈ ಸುವ್ರತನೇ, ಯಾರು ಬಾಹ್ಯಶುದ್ಧಿಯಲ್ಲೇ ತಮ್ಮನ್ನು ತಾವು ತೊಡಗಿಸಿಕೊಳ್ಳುವರೋ ಜ್ಞಾನಶುದ್ಧಿಯನ್ನು ಬಿಟ್ಟು ಅಂತಹವರು ಮೂರ್ಖತನದಿಂದ ಬಂಗಾರದ ಬದಲಾಗಿ ಒಂದು ಮಣ್ಣಿನ ಹೆಂಟೆಯನ್ನು ತೆಗೆದಂತಾಗುತ್ತದೆ.

ಮಾನವ ಅಶುಚಿಯಾಗಿದ್ದರೆ ಆಗ ಅವನಿಗೆ ಅಶುಚಿಯಾದುದೇ ಮನಸ್ಸಲ್ಲೂ ಉಂಟಾಗುತ್ತದೆ. ಆಗ ಅವನ ದೇಹಶುದ್ಧಿಗೆ ಬೆಲೆಯಿರುವುದಿಲ್ಲ. ಅವನು ಸ್ನಾನದಿಂದ ದೇಹಶುದ್ಧಿ ಪಡೆದಿದ್ದರೂ ಸಹ ಎಲ್ಲಾ ಆರೋಗ್ಯ ನಿಯಮ ಪಾಲಿಸಿದ್ದರೂ ಸಹ ಅವನು ಮಾನಸಿಕವಾಗಿ ಅಶುಚಿಯಾಗಿಯೇ ಇರುತ್ತಾನೆ.

ಅದನ್ನೇ ಲಿಂಗಪುರಾಣ ಸಾರುತ್ತದೆ - ನಿಜವಾದ ಬ್ರಾಹ್ಮಣರು ಕೇವಲ ನೀರಿನಿಂದ ಶುದ್ಧಿಯಾಗುವರೇನು? ಆದ್ದರಿಂದ ಯಾವಾಗಲೂ ಅಂತಃ ಶುದ್ಧಿ ಬೆಳೆಸಿಕೊಳ್ಳಬೇಕು.

ಸದಾವಗಾಹಾಯ ಸಲಿಲೇ ವಿಶುದ್ಧಃಕಿಂ ದ್ವಿಜೋತ್ತಮಃ ।
ತಸ್ಮಾದ್ ಆಭ್ಯಂತರಂ ಶೌಚಂ ಸದಾಕಾರ್ಯಂ ವಿಧಾನತಃ ॥[7]

ಆಂತರಿಕ ಶುಚಿಯ ವಿವರಣೆಯೆಂದರೆ :-

ಸಾಮುಖ್ಯಾತ್ ಅಭಿಸಂಪ್ರೀತಿಃ ಅರ್ಥಿನಾಂ ದರ್ಶನೇ ಸದಾ ।
ಸತ್ಕೃತಿಶ್ಚಾನಸೂಯಾ ಚ ತದಾ ಶುದ್ಧಿರಿತಿ ಸ್ಮೃತಾ ॥8

ನಗುಮುಖದಿಂದಿರುವುದು, ಬೇರೆಯವರನ್ನು ಸ್ವಾಗತಿಸುವುದು, ಅವರನ್ನು ಗೌರವಿಸುವುದು ಹಾಗೂ ಕೆಟ್ಟ ಭಾವನೆ ಮಾಡದಿರುವುದು. ಬೋಧಾಯನ ಧರ್ಮಸೂತ್ರ ವಿವರಿಸುವಂತೆ ಯಾವುದರಿಂದ ಯಾವುದು ಶುದ್ಧವಾಗುವುದೆಂದರೆ :-

ಅದ್ಭಿಃ ಶುಧ್ಯಂತಿ ಗಾತ್ರಾಣಿ ಬುದ್ಧಿರ್ಜ್ಞಾನೇನ ಶುಧ್ಯತಿ ।
ಅಹಿಂಸಯಾಚ ಭೂತಾತ್ಮಾ ಮನಃ ಸತ್ಯೇನ ಶುಧ್ಯತಿ ॥[9]

ಮೂಳೆಗಳು ನೀರಿನಿಂದ, ಬುದ್ಧಿಯು ಜ್ಞಾನದಿಂದ, ಆತ್ಮವು ಅಹಿಂಸೆಯಿಂದ ಮನಸ್ಸು ಸತ್ಯದಿಂದ ಶುದ್ಧವಾಗುತ್ತದೆ. (ಮನುಸ್ಮೃತಿಯ ಪ್ರಕಾರ ಜ್ಞಾನದಿಂದ ಆಚಾರ ಶುದ್ಧವಾಗುತ್ತದೆ)

ಶುದ್ಧಿಯೆನ್ನುವುದು ಕೆಲವರಿಗಾಗಿಯೇ ಮಾಡಿಸಿದಂತಿರುತ್ತದೆ. ಭೂಮಿಯ ಕೆಳಗಿರುವ ನೀರು. ಪತಿವ್ರತೆಯಾದ ಮಡದಿ, ಪ್ರಜಾಹಿತ ಬಯಸುವ ರಾಜ ಹಾಗೂ ತೃಪ್ತನಾದ ಬ್ರಾಹ್ಮಣ ಶುದ್ಧರು :-

ಶುಚಿ ಭೂಮಿಗತಂ ತೋಯಂ ಶುಚಿರ್ನಾರೀ ಪತಿವ್ರತಾ ।
ಶುಚಿ ಕ್ಷೇಮಂಕರೋರಾಜಾ ಸಂತೋಷೀ ಬ್ರಾಹ್ಮಣಃ ಶುಚಿಃ ॥[10]

ಈಗ ಭ್ರಷ್ಟಾಚಾರದ ಬಗ್ಗೆ ಬಹಳ ಮಾತಿದೆ. ಭಾರತದಲ್ಲಿ ಹಿಂದಿನ ಜ್ಞಾನಿಗಳು ಹಣದ ವಿಷಯದಲ್ಲಿ ಶುದ್ಧಿಯನ್ನು ಚೆನ್ನಾಗಿ ಅರಿತಿದ್ದರು. ಯಾರು ಹಣದಿಂದ ಶುಚಿಗಳೋ ಅವರು ಶುಚಿಗಳು.

ಯೋ ಅರ್ಥೇ ಶುಚಿಃ ಸ ಶುಚಿಃ [11]

---

ಆಕರಗಳು

1) ಅತ್ರಿಸಂಹಿತಾ.49 2) ಭವಿಷ್ಯಪುರಾಣ.1.2.160 3) 2.40 4) ಜಾಬಾಲಯೋಗ.1.22 5) ಲಿಂಗಪುರಾಣ.8.32 6) 1.22 7) 8.35 8) ಸ್ಕಾಂದಪುರಾಣ.ಮಾ.ಕ.4.6. 9) 1.5.1. 10) ಚಾಣಕ್ಯನೀತಿ.2.37 11) ಮನುಸ್ಮೃತಿ.5.106.

# 24. ಶೀಲ

ಪರೋಪಕಾರ, ತಿತಿಕ್ಷಾ, ಕ್ಷಮಾ, ದಯೆ, ಇಂದ್ರಿಯನಿಗ್ರಹ, ಧೃತಿ, ಶೌಚ, ಮೃದುಭಾಷಿತ ಮೊದಲಾದ ಭಾರತೀಯರ ಮಾನವೀಯ ಮೌಲ್ಯಗಳು ಶೀಲಕ್ಕೆ ತಳಹದಿಯಾಗುತ್ತದೆ. ಎಲ್ಲಾ ಒಳ್ಳೆಯಗುಣಗಳನ್ನು ರಕ್ಷಿಸುವುದೇ ಶೀಲ.

ಶೀಲ ಎಂಬುದು ಪ್ರಹೇಳಿಕೆಯಂತಿದ್ದು ಎಲ್ಲವನ್ನೂ ತನ್ನಲ್ಲಿ ಸೇರ್ಪಡೆ ಮಾಡಿಕೊಳ್ಳುವ ಸಾಮರ್ಥ್ಯವಿರುವಂತಹದು ಎಂದು ಭರ್ತೃಹರಿ ತನ್ನ ನೀತಿಶತಕದಲ್ಲಿ ನಿರೂಪಿಸುತ್ತಾನೆ.

ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್ಸಂಯಮೋ
ಜ್ಞಾನಸ್ಯೋಪಶಮಃ ಶ್ರುತಸ್ಯ ವಿನಯೋ ವಿತ್ತಸ್ಯಪಾತ್ರೇವ್ಯಯಃ ।
ಅಕ್ರೋಧಸ್ತಪಸಃ ಕ್ಷಮಾಪ್ರಭವಿತುಃ ಧರ್ಮಸ್ಯ ನಿರ್ವ್ಯಾಜತಾ
ಸರ್ವೇಷಾಮಪಿ ಸರ್ವಕಾರಣಮಿದಂ ಶೀಲಂ ಪರಂ ಭೂಷಣಂ ॥

ಸಿರಿ ಸಂಪತ್ತಿಗೆ ಸೌಜನ್ಯವೇ ಭೂಷಣ. ಮಾತಿನಲ್ಲಿ ಹತೋಟಿಯಿರುವುದು ಶೌರ್ಯಕ್ಕೆ ಭೂಷಣ; ಜ್ಞಾನಕ್ಕೆ ಚಿತ್ತಶಾಂತಿ; ವಿದ್ಯೆಗೆ ವಿನಯ; ಹಣಕ್ಕೆ ಸತ್ಪಾತ್ರರಲ್ಲಿ ಖರ್ಚು ಮಾಡುವಿಕೆ; ತಪಸ್ಸಿಗೆ ಸಿಟ್ಟಿಲ್ಲದಿರುವಿಕೆ; ಪ್ರಭುತ್ವಕ್ಕೆ ಕ್ಷಮೆ; ಧರ್ಮಕ್ಕೆ ಕಪಟವಿಲ್ಲದಿರುವಿಕೆ, ಆದರೆ ಈ ಎಲ್ಲಕ್ಕೂ ಮೂಲಕಾರಣವಾಗಿರುವ ನಡತೆ ಅತಿಶ್ರೇಷ್ಠವಾದ ಆಭರಣ.

ಈ ಅಂಶವನ್ನೇ ವಿಭೂಷಣಂ ಶೀಲಸಮಂ ನಚಾನ್ಯಾ[2] ಎಂಬ ಹೇಳಿಕೆ ಸ್ಪಷ್ಟೀಕರಿಸುತ್ತದೆ:- ಶೀಲಕ್ಕಿಂತ ಒಳ್ಳೆಯ ಆಭರಣವಿಲ್ಲ.

ಆದ್ದರಿಂದಲೇ ಶೀಲವನ್ನು ಭಾರತೀಯ ಪರಂಪರೆಯಲ್ಲಿ ಉತ್ತುಂಗಕ್ಕೇರಿಸುವುದು. ಶೀಲವನ್ನು ಅಳವಡಿಸಿಕೊಂಡವನೇ ನಿಜವಾದ ಅರ್ಥದಲ್ಲಿ ಬದುಕಿದಂತೆ ; ಶೀಲಸ್ಯ ಪಾಲನಂ ಕುರ್ವನ್ ಯೋಜೀವತಿಸ ಜೀವತಿ[3]. ಅದು ಕಾಡಿನಲ್ಲಿ ಮಾರ್ಗದರ್ಶಿ – ಶೀಲಂ ಹಿ ಶರಣಂ ಸೌಮ್ಯ ಕಾಂತಾರ ಇವ ದೇಶಿಕಃ[4]

ಶೀಲವು ಪಾಪವೆಂಬ ಮಲವನ್ನು ಶುದ್ಧಿಗೊಳಿಸುವಂತೆಯೇ ಸಾಂಸಾರಿಕ ಮಲವನ್ನೂ ತೆಗೆದುಹಾಕುತ್ತದೆ. ಅದು ಸದ್ಗುಣವನ್ನುಂಟು ಮಾಡಿ, ಯಶಸ್ಸನ್ನು ಹರಡಿ, ದೇವತೆಗಳನ್ನೂ ತಗ್ಗಿಸಿ, ಅಡಚಣೆಗಳನ್ನು ತೆಗೆದುಹಾಕಿ, ಸ್ವರ್ಗವನ್ನೂ ತಂದುಕೊಡುತ್ತದೆ ಮತ್ತು ಸುಲಭವಾಗಿ ಮೋಕ್ಷವನ್ನು ಕರುಣಿಸುತ್ತದೆ.

ಶೀಲ ಎಂದರೆ ವಾಚಾ, ಕಾಯಾ, ಮಾನಸಿಕವಾಗಿ ಕೆಟ್ಟದ್ದಿಲ್ಲದೆ ಅನುಕಂಪ ಹಾಗೂ ದಾನದಿಂದ ಕೂಡಿರುವುದು :-

ಅದ್ರೋಹಂ ಸರ್ವಭೂತೇಷು ಕರ್ಮಣಾ ಮನಸಾ ಗಿರಾ ।
ಅನುಗ್ರಹಶ್ಚ ದಾನಂ ಚ ಶೀಲಮೇತತ್ ಪ್ರಶಸ್ಯತೇ ॥[5]

ಯಾರಿಗೆ ಶೀಲವಿಲ್ಲವೋ ಅಂತಹವರಿಗೆ ಜ್ಞಾನ, ವಿದ್ಯೆ, ತಪಸ್ಸು, ಸಿರಿ, ಯಶಸ್ಸು ಎಲ್ಲವೂ ಆನೆಗೆ ಸ್ನಾನದಂತೆ :-

ವಿದ್ಯಾಶ್ರುತಂ ತಪೋ ವಾಪ್ಯೈಶ್ವರ್ಯಂ ವಾ ಯಶಃ ಪ್ರಕರ್ಷೋವಾ ।
ಶೀಲರಹಿತಸ್ಯ ಪುಂಸೋ ದ್ವಿರದಸ್ನಾನೋಪಮಂ ಭವತಿ ॥[9]

ಈ ಹಂತದಲ್ಲಿ ಇಷ್ಟೆಲ್ಲಾ ಉದಾತ್ತೀಕರಿಸುವಂತಹ ಈ ಶೀಲವೆಂದರೇನು ಎಂದು ಸ್ವಲ್ಪ ಚಿಂತಿಸಬೇಕು. ಅಮರಕೋಶ ಎರಡು ಸ್ಥಳಗಳಲ್ಲಿ ಅದನ್ನು ವಿವರಿಸುತ್ತದೆ. ಒಂದೆಡೆ ಅದನ್ನು ಶುದ್ಧವಾದ ನಡತೆಯೆಂದು ವಿವರಿಸುತ್ತದೆ. ಶೌಚಂತು ಚರಿತೇಶೀಲಂ ಮತ್ತೊಂದೆಡೆ ಸದಾಚಾರವೆಂದು - ಶೀಲಂ ಸ್ವಭಾವೇ ಸದ್‌ವೃತ್ತೇ. ಶೀಲ ಸದಾಚಾರಕ್ಕಿಂತ ಮಿಗಿಲಾದುದು. ಅದು ಮಾನವನ ಆಂತರಿಕ ಗುಣ. ಅದರಿಂದ ಅವನಿಗೆ ಚಾರಿತ್ರಿಕ ಶಕ್ತಿಯನ್ನು ಒದಗಿಸುತ್ತದೆ. ಅದನ್ನು ಉಲ್ಲೇಖಿಸುವುದು, ಭಾಷಾಂತರಿಸುವುದು ಸುಲಭವಲ್ಲ. ಕೇವಲ ಅನುಭವಕ್ಕೆ ಸಿಗುವ ಪದಗಳಿಗೆ ಸಿಗದಂತಹದು ಅದು. ಸನ್ನಡತೆ ಎನ್ನುವುದು ಶೀಲದ ವ್ಯಾಪಕಾರ್ಥವನ್ನು ವಿವರಿಸಲು ಅಸಮರ್ಥವಾಗುತ್ತದೆ. ಅದೇ ಅವನನ್ನು ಸುಲಭವಾಗಿ ಸಂಧಿಸಲು ಕಾರಣವಾಗುತ್ತದೆ-ಅಭಿಗಮ್ಯ. ದಾಟಲಾದದ್ದು - ಅಧೃಷ್ಯ. ಅದು ಅಸಂಖ್ಯಾತ ಗುಣಗಳಿಂದ ಬಂದಿರುವ ಆಂತರಿಕಶಕ್ತಿ ಮಾನವನನ್ನು ಸನ್ಮಾರ್ಗದತ್ತ ಕರೆದೊಯ್ಯುತ್ತದೆ. ಕೆಟ್ಟದ್ದರಿಂದ ರಕ್ಷಿಸುತ್ತದೆ. ಅದೇ ಮಾನವರಿಗೆ ಮಾನಸಿಕ ಸಮತೋಲವನ್ನೊದಗಿಸುತ್ತದೆ. ಅದರಿಂದ ಪರಸ್ಪರ ವಿರುದ್ಧವಾದ ಸನ್ನಿವೇಶಗಳಲ್ಲಿ ಮಾನವ ಸರಿಯಗಿ ನಡೆದುಕೊಳ್ಳುವ ಸಾಧ್ಯವಾಗುತ್ತದೆ. ಸಂಪತ್ತಿನಲ್ಲಿ, ವಿಪತ್ತಿನಲ್ಲಿ ಮಹಾತ್ಮರು ಏಕರೂಪವಾಗಿರುತ್ತಾರೆ. ಸಂಪತ್ತೌಚ ವಿಪತ್ತೌಚ ಮಹತಾಮೇಕರೂಪತಾ. ಸೂರ್ಯ ಹುಟ್ಟುವಾಗಲೂ ಕೆಂಪಗಿರುತ್ತದೆ. ಅಸ್ತವಾದಾಗಲೂ ಕೆಂಪಗಿರುತ್ತದೆ - ಉದಯನ್ ಸವಿತಾ ರಕ್ತಃ ರಕ್ತಮೇವಾಸ್ತಿಮೇತಿಚ. ಪಟ್ಟಾಭಿಷಿಕ್ತನಾಗುವೆನೆಂದಾಗಲಾಗಲೀ, ಕಾಡಿಗೆ ಹೋಗಬೇಕೆಂದಾಗಲಾಗಲೀ ರಾಮನ ಮುಖದಲ್ಲಿ ಯಾವ ವಿಕಾರವೂ ಇರಲಿಲ್ಲ - ನಾಲಕ್ಷಯತ ರಾಮಸ್ಯ ಕಂಚಿದಾಕಾರಮಾನನೇ ರಾಜ್ಯತೊರೆದು ಕಾಡಿಗೆ ತೆರಳುವಾಗಲೂ ರಾಮನ ಮನಸ್ಸಿನಲ್ಲಿ ಯಾವುದೇ ರೀತಿಯ ದುಃಖವಿರಲಿಲ್ಲ:-

ನ ವನಂಗಂತುಕಾಮಸ್ಯ ತ್ಯಜತಶ್ಚವಸುಂಧರಾಮ್ ।
ಸರ್ವಲೋಕಾತಿಗಸ್ಯೇವ ಲಕ್ಷ್ಯತೇ ಚಿತ್ತವಿಕ್ರಿಯಾ ॥[10]

ಈ ಗುಣವೇ ಅವನ ಅಲೌಕಿಕ ಗುಣವು. ಎಲ್ಲಿ ಭೂತಗಳು ಸಂಚರಿಸಲು ಅಂಜುವುದೋ ಅಲ್ಲಿದೇವತೆಗಳು ನಿರ್ಭಯವಾಗಿ ನಡೆಯುತ್ತಾರೆ.

ಮಹಾಭಾರತದಲ್ಲಿ ಒಮ್ಮೆ ಭೀಷ್ಮನನ್ನು ಕುರಿತು ಯುಧಿಷ್ಠಿರ ಕೇಳಿದ. ಏತಕ್ಕೆ ಧರ್ಮದ ವಿವರಣೆ ನೀಡುವಾಗ ಪ್ರತಿಯೊಬ್ಬರೂ ಸಹ ಶೀಲದ ಬಗ್ಗೆ ಹೇಳುತ್ತಾರೆ. ಅದಕ್ಕೆ ಭೀಷ್ಮ ಹೇಳುತ್ತಾನೆ ಅದೇ ಪ್ರಶ್ನೆಯನ್ನು ದುರ್ಯೋಧನ ತನ್ನ ತಂದೆಯಾದ ಧೃತರಾಷ್ಟ್ರನಿಗೆ ಕೇಳಿದ್ದ,

ಆಗ ದುರ್ಯೋಧನ ಇಂದ್ರಪ್ರಸ್ಥದಲ್ಲಿ ತನ್ನ ಅತ್ಯಧಿಕ ಸಂಪತ್ತಿನಿಂದ ಈರ್ಷೆಗೊಳಗಾಗಿದ್ದ. ಅದಕ್ಕೆ ಧೃತರಾಷ್ಟ್ರ ಹೇಳಿದ್ದ – ಶೀಲದಿಂದ ವಿಶ್ವವನ್ನೇ ಜಯಿಸಬಹುದು. ಈ ಶ್ಲೋಕ ಅದರ ಪ್ರಾಮುಖ್ಯತೆ ತಿಳಿಸುತ್ತದೆ :–

ಶೀಲೇನಹಿ ತ್ರಯೋಲೋಕಾಃ ಶಕ್ಯಾ ಜೇತುಂನ ಸಂಶಯಃ ।
ನಹಿಕಿಂಚಿದಸಾಧ್ಯಂ ವೈ ಲೋಕೇಶೀಲವತಾಂ ಭುವಿ ॥[11]

ಶೀಲದಿಂದ ವಿಶ್ವವನ್ನೇ ಜಯಿಸಬಹುದೆಂಬುದರಲ್ಲಿ ಸಂಶಯವಿಲ್ಲ ಶೀಲಹೊಂದಿದವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ಮತ್ತೂ ಮುಂದುವರೆಸಿ ಪ್ರಹ್ಲಾದ ಮತ್ತು ಇಂದ್ರನ ಕಥೆಯನ್ನು ಅವನು ಹೇಳುತ್ತಾನೆ. ಶೀಲದಿಂದಲೇ ಪ್ರಹ್ಲಾದ ಇಂದ್ರನಿಂದ ಸ್ವರ್ಗವನ್ನೂ ಗೆದ್ದ ಅದರಿಂದ ಬೃಹಸ್ಪತಿಯಲ್ಲಿ ಅವನಿಗೆ ಜ್ಞಾನವುಂಟಾಯಿತು. ಆ ಜ್ಞಾನದಿಂದಲೇ ಕ್ಷುಬ್ಧವಾದ ಮನಸ್ಸು ಶಾಂತವಾಯಿತು. ಇಂದ್ರ ಇನ್ನೂ ಬೇಕೆಂದಾಗ ಬೃಹಸ್ಪತಿ ಶುಕ್ರಾಚಾರ್ಯರ ಬಳಿಗೆ ಹೋಗೆಂದನು. ಅವನನ್ನು ಕುರಿತು ಹೋದಾಗ ಇಂದ್ರನಿಗೆ ಶೀಲಧಾರೆಯೆರೆಯುವಂತೆ ಪ್ರಹ್ಲಾದನಿಗೆ ಹೇಳಿದ. ಅವನು ಅದರಂತೆಯೇ ಮಾಡಿದ. ಒಂದಾದ ನಂತರ ಒಂದು ಗುಣದಂತೆ ಸತ್ಯ, ತೇಜಸ್, ಬಲಗಳು ಪ್ರಹ್ಲಾದನ ದೇಹದಿಂದ ಬಂದು ಇಂದ್ರನನ್ನು ಸೇರಿದವು. ಶೀಲಹೋದದ್ದರಿಂದ ರಾಜ್ಯವೂ ಸಹ ಪ್ರಹ್ಲಾದನನ್ನು ತ್ಯಜಿಸಿತು. ಏಕೆ ಹೋಗುವೆಯೆಂದು ಕೇಳಿದಾಗ ಶೀಲ ಹೇಳಿತು :–

ಶೀಲೇನಹಿ ತ್ರಯೇಲೋಕಾ ತ್ವಯಾ ಸಧರ್ಮಜ್ಞಾ ನಿರ್ಜಿತಾಃ ।
ಸದ್ ವಿಜ್ಞಾಯ ಸುರೇಂದ್ರೇಣ ತವಶೀಲಂ ಹೃತಂ ಪ್ರಭೋ ॥[12]

ಎಲೈ ಧರ್ಮಾತ್ಮನೇ, ನೀನು ಶೀಲದಿಂದ ಮೂರು ಲೋಕಗಳನ್ನೂ ಗೆದ್ದಿದ್ದೆ. ಅದನ್ನು ತಿಳಿದ ಇಂದ್ರ ನಿನ್ನಿಂದ ಶೀಲವನ್ನಪಹರಿಸಿದ.

ಆದ್ದರಿಂದಲೇ ಶೀಲವೇ ನಿಜವಾದ ಆಭರಣ – ಪರಂಭೂಷಣಂ ಪ್ರಾಪಂಚಿಕವಾದ ಆಭರಣಗಳು ತಾತ್ಕಾಲಿಕವಾಗಿದ್ದು ನಾಶವಾಗುವುದು. ಆದರೆ ಶೀಲವೇ ಶಾಶ್ವತವಾದುದು. ಮಿಕ್ಕೆಲ್ಲಾಗುಣಗಳೂ ಸೇರಿದರೂ ಸಹ ಶೀಲಕ್ಕೆ ಸಮಬರುವುದಿಲ್ಲ.

ಶೀಲವನ್ನು ವೃತ್ತ ಎಂದೂ ಕರೆಯುವುದುಂಟು. ಅದನ್ನು ಜೀವನಕ್ಕೆ ತರಲು ಅತ್ಯಧಿಕವಾದ ಪ್ರಾಮುಖ್ಯತೆ ನೀಡಲಾಗಿದೆ. ಅದನ್ನು ಹಣದೊಂದಿಗೆ ಜೋಪಾನವಾಗಿರಿಸಬೇಕು. (ನಿತ್ಯ ಎನ್ನುವುದು ವೃತ್ತ ಎಂಬುದಕ್ಕೆ ಭಾಷಿಕವಾಗಿ ಹತ್ತಿರವಾಗಿದ್ದರೂ ಸಹ ಅರ್ಥ ದೃಷ್ಟಿಯಿಂದ ಅತ್ಯಂತ ದೂರವಾಗಿದೆ) ಹಣಹೋದರೆ ಏನೂ ಹೋದಂತಲ್ಲ ಆದರೆ ವೃತ್ತಕ್ಕೆ ಅತ್ಯಂತ ಹತ್ತಿರವಿರುವ ನಡತೆ ಹೋದರೆ ಎಲ್ಲವೂ ಹೋದಂತೆಯೇ ಸರಿ.

ವೃತ್ತಂ ಯತ್ನೇನ ಸಂರಕ್ಷ್ಯಂ ವಿತ್ತಮಾಯಾತಿ ಯಾತಿ ಚ ।
ಅಕ್ಷೀಣೋ ವಿತ್ತತಃ ಕ್ಷೀಣೋ ವೃತ್ತಸ್ತು ಹತೋ ಹತಃ ॥13

ಹಿಂದೆಯೇ ಹೇಳಿರುವಂತೆ ಒಂದು ವಾಕ್ಯದಲ್ಲಿ ಶೀಲವನ್ನು ನಿರೂಪಿಸಲಾಗುವುದಿಲ್ಲ. ಆಕಾಶವು ಆಕಾಶದಂತೆ, ಸಾಗರ ಸಾಗರದಂತೆ ಎಂದು ಹೇಳುವ ಹಾಗೆಯೇ ಶೀಲವು ಶೀಲದಂತಿದೆ :- ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ಶೀಲದಿಂದ ಕೂಡಿರುವವನೊಂದಿಗಿರುವುದೇ ಒಂದು ಭಾಗ್ಯ. ಸರಿಯಾಗಿಯೇ ಹೇಳಲ್ಪಟ್ಟಿದೆ.

ಕಿಂ ಮಧುನಾ ಕಿಂ ವಿಧುನಾ ಕಿಂ ಸುಧಯಾ ಕಿಂ ಚ ವಸುಧಯಾ ।
ಯದಿ ಹೃದಯಹಾರಿಚರಿತಃ ಪುರುಷಃ ಪುನರೇತಿ ನಯನಯೋರಯನಂ ॥[14]

ಜೇನುತುಪ್ಪದಿಂದೇನು, ಚಂದ್ರನಿಂದೇನು, ಅಮೃತದಿಂದೇನು, ಸಮಸ್ತ ಭೂಮಿಯಿಂದೇನು, ಸರಿಯಾದ ಶೀಲವುಳ್ಳವರ ಕಣ್ಣಿಗೆ ನಾವು ಗೋಚರಿಸಿದರೆ ಸಾಕು :-

---

ಆಕರಗಳು

1) 80ನೇ ಶ್ಲೋಕ 2) ಪಂಚತಂತ್ರ.2.155 3) ಪದ್ಮಪುರಾಣ.46.95 4) ಸುಂದರಕಾಂಡ.34.47 5) ಮಹಾಭಾರತ.ಶಾಂತಿಪರ್ವ.124.66 6) ನೀತಿದ್ವಿಷಷ್ಟಿಕಾ. 33 7) 16.26 8) ಅದೇ.3.2.202 9) ನರಾಭರಣ.26 10) ರಾಮಾಯಣ.2.9.36 11) ಶಾಂತಿಪರ್ವ.12.4.15 12) ಅದೇ.124.61 13) ಉದ್ಯೋಗಪರ್ವ.66.10 ವಿಕ್ರಮಾರ್ಕಚರಿತ.17. 14) ಜನಪ್ರಿಯ ಸುಭಾಷಿತ.

# 25. ಅಸ್ತೇಯ (ಕದಿಯದಿರುವುದು)

ಮನುಸ್ಮೃತಿಯ ವ್ಯಾಖ್ಯಾನಕಾರನಾದ ಕುಲ್ಲೂಕಭಟ್ಟ ಧರ್ಮದ ಹತ್ತು ಗುಣಗಳನ್ನು ವಿವರಿಸುವಾಗ ಬೇರೆಯವರ ಸಿರಿಯನ್ನು ಅನ್ಯಾಯವಾಗಿ ತಾನು ಪಡೆಯುವಂತಹ ಕ್ರಿಯೆಯನ್ನು ಅಸ್ತೇಯ ಎಂದು ವಿವರಿಸುತ್ತಾನೆ. ''ಅನ್ಯಾಯೇನ ಪರಧನಾದಿಗ್ರಹಣಂ ಅಸ್ತೇಯಮ್''[1] ತದಭಾವೋ ಅಸ್ತೇಯಂ'' ಅದಕ್ಕೆ ವಿರುದ್ಧವಾಗಿರುವುದೇ ಸ್ತೇಯ. ಈ ಪದದ ವಿವರಣೆ ಬೇರೆ ಕೃತಿಗಳಲ್ಲೂ ಅದೇ ರೀತಿ ಇದೆ. ಲಿಂಗಪುರಾಣದ ಪ್ರಕಾರ ಬೇರೆಯವರ ಮನಸ್ಸಿನ ಆಲೋಚನೆಗಳನ್ನು ನಾವು ಅಳವಡಿಸಿಕೊಳ್ಳದಿರುವುದು, ಮಾನಸಿಕವಾಗಿ, ವಾಚಿಕವಾಗಿ ಹಾಗೂ ಕಾಯಕವಾಗಿ ಯಾವುದಿದೆಯೋ ಅದು ಅಸ್ತೇಯ.

ಅನಾದಾನಂ ಪರಸ್ವಾನಾಂ ಆಪದ್ಯಪಿ ವಿಚಾರತಃ ।
ಮನಸಾ ಕರ್ಮಣಾ ವಾಚಾ ತದಸ್ತೇಯಂ ಸಮಾಸತಃ ॥[2]

ಜಾಬಾಲಯೋಗದ ಪ್ರಕಾರ ಬೇರೆಯವರಿಗೆ ಸೇರಿದಂತಹ ಹುಲ್ಲು, ಬೆಲೆಬಾಳುವ ವಸ್ತುಗಳು, ಬಂಗಾರ ಅಥವಾ ಮುತ್ತನ್ನು ಕುರಿತು ಮನಸ್ಸು ದೂರಮಾಡುವುದು.

ಅನ್ಯದೀಯೇ ತೃಣೇ ರತ್ನೇ ಕಾಂಚನೇ ಮಕ್ತಿಕೇಽಪಿವಾ।
ಮನಸೋ ವಿನಿವೃತ್ತಿರ್ಯಾದ್ ಅಸ್ತೇಯಂ ವಿದುರ್ಬುಧಾಃ ॥[3]

ಅದೇ ಕೃತಿ ಮುಂದಿನ ಶ್ಲೋಕದಲ್ಲಿ ತಾತ್ತ್ವಿಕ ವಿವರಣೆ ನೀಡುತ್ತದೆ :

ಆತ್ಮನ್ಯನಾತ್ಮಭಾವೇನ ವ್ಯವಹಾರ ವಿವರ್ಜಿತಂ ।
ಯದ್ ತದಸ್ತೇಯಮಿತ್ಯುಕ್ತಂ ಆತ್ಮವಿದ್ಭಿಃ ಮಹಾಮತೇ ॥

ಎಲೈ ಮಹಾನುಭವಿಗಳೇ, ಆತ್ಮಜಾಗೃತಿಯ ಮೂಲಕ ದೇಹದ ಅಶಾಶ್ವತೆಯನ್ನು ಪರಿಗಣಿಸಿ ಆತ್ಮನಲ್ಲೇ ನೆಲೆಸುವುದು ಅಸ್ತೇಯ.

ಯೋಗಶಾಸ್ತ್ರದ ಪ್ರಕಾರ ಅಸ್ತೇಯವೆಂದರೆ ಸ್ಥಿರವಾಗಿರುವುದು, ಕದಿಯದಿರುವುದು, ತಮಗೆ ಇಲ್ಲದಿರುವುದನ್ನು ತೆಗೆದುಕೊಳ್ಳದಿರುವುದು ಹಣ ಎಂಬುದು ಬಾಹ್ಯವಾದುದು. ಯಾರು ಹಣವನ್ನು ತೆಗೆದುಕೊಂಡು ಹೋಗುವರೋ ಅವರನ್ನು ಕೊಲ್ಲುವರು.

ಅನಾದನಂ ಅದತ್ತಾಸ್ಯೇಯ ವ್ರತಂ ಉದೀರಿತಂ ।
ಬಾಹ್ಯಾಃ ಪ್ರಾಣಾಃ ನೃಣಾಮರ್ಥೋ ಹಂತಾ ತಂ ಹತಾಹಿತೇ ॥[4]

ಅದೇ ಕೃತಿಯೇ ಇನ್ನೊಂದೆಡೆ ನಿರೂಪಿಸುವಂತೆ ವಿವೇಕಿಯಾದವನು ಯಾವುದು ಆಕಸ್ಮಾತ್ತಾಗಿ ಕೆಳಗೆ ಬಿದ್ದಿದೆಯೋ ಅದನ್ನು ಯಾವುದೇ ಕಾರಣಕ್ಕೂ ತೆಗೆದುಕೊಳ್ಳಬಾರದು, ಇಟ್ಟದ್ದನ್ನಾಗಲೀ ಬೇರೆಯವರದಾಗಲೀ ತನಗೆ ಕೊಡದಿರುವುದು.

ಯಾರು ಬೇರೆಯವರಿಗೆ ಸಂಬಂಧಪಟ್ಟಿದ್ದನ್ನು ಕದಿಯುತ್ತಾರೋ ಅದರಿಂದ ಈ ಲೋಕ, ಪರಲೋಕ, ಧರ್ಮ, ತಾಳ್ಮೆ, ಸ್ಥಿರತೆ ಹಾಗೂ ಬುದ್ಧಿ ಎಲ್ಲವೂ ಕದಿಯಲ್ಪಡುತ್ತದೆ.

ಅಯಂ ಲೋಕಃ ಪರಲೋಕೋ ಧರ್ಮೋ ಧೈರ್ಯಂ ಧೃತಿರ್ಮತಿಃ ।
ಮುಷ್ಣತಾ ಪರಕೀಯಸ್ವಂ ಮುಷಿತಂ ಸರ್ವಂ ಅಪ್ಯಧಃ ॥[5]

ಯಾರಿಗೆ ಶುದ್ಧ ಮನಸ್ಸಿದೆಯೋ, ಬೇರೆಯವರಿಗೆ ಸೇರಿದ್ದನ್ನು ತೆಗೆದುಕೊಂಡು ಹೋಗುವುದಿಲ್ಲವೋ ಅವರನ್ನು ಹುಡುಕಿಕೊಂಡು ತಾವಾಗಿಯೇ ಬೆಲೆಬಾಳುವ ವಸ್ತುಗಳು ಬರುತ್ತದೆ. ಕಷ್ಟಗಳು ಅವರಿಂದ ದೂರವಾಗುತ್ತದೆ. ಅವರ ಕೀರ್ತಿ ಎಲ್ಲೆಡೆ ಹರಡುತ್ತದೆ, ಸ್ವರ್ಗ ಸುಖಗಳೆಲ್ಲಾ ಅವರದಾಗುತ್ತದೆ. ಏಕೆಂದರೆ ಅವರು ಬೇರೆಯವರ ವಸ್ತುಗಳನ್ನು ಅಪೇಕ್ಷಿಸುವುದಿಲ್ಲ.

ಪರಾರ್ಥಗ್ರಹಣೇ ಯೇಷಾಂ ನಿಯಮಃ ಶುದ್ಧಚೇತಸಾಂ
ಅಭ್ಯಾಯಾಂತಿ ಶ್ರಿಯ ಸ್ತೇಷಾಂ ಸ್ವಯಮೇವ ಸ್ವಯಂವರಾಃ ।
ಅನರ್ಥಾ ದೂರತೋಯಾಂತಿ ಸಾಧುವಾದಃ ಪ್ರವರ್ತತೇ
ಸ್ವರ್ಗಸೌಖ್ಯಾನಿ ಢೌಕಂತೇ ಸ್ಫುಟಮಸ್ತೇಯಚಾರಿಣಾಮ್ ॥[6]

ಯಾರು ಅಹಿಂಸೆಗೆ ಬದ್ಧರಾಗಿರುವರೋ ಅವರು ಮಾನಸಿಕ, ವಾಚಿಕ ಹಾಗೂ ದೈಹಿಕ ಕಳ್ಳತನದಿಂದ ದೂರವಿರಬೇಕು - ಹೇಯಂ ಸ್ತೇಯಂ ತ್ರಿಧಾರಾದ್ಧಂ ಅಹಿಂಸಾವಿಷ್ಟಚೇತಸಾಮ್[7].

ಒಬ್ಬರು ಬೇರೊಬ್ಬರ ಹಣವನ್ನು ಕದಿಯಬಾರದೆಂದು ಅದು ಹುಲ್ಲೇ ಆಗಿರಬಹುದೆಂದೂ ಹೇಳಿಕೆಯಿದೆ :- ಪಲಾಲ ಮಾತ್ರ ಮಪಿ ಪರದ್ರವ್ಯಂ ನ ಹರ್ತವ್ಯಂ[8].

ತಂದೆ ತಾಯಂದಿರು ಮಕ್ಕಳು ಹೇಗಿದ್ದರೂ ಅವರನ್ನು ಪರಿಗ್ರಹಿಸಿಬಹುದು ಆದರೆ ಕಳ್ಳ ಮಕ್ಕಳನ್ನಲ್ಲ:-

ದೋಷಾಂತರಜುಷಾಂ ಜಾತು ಮಾತಾಪಿತ್ರಾದಯೋ ನರಂ ।
ಸಂಗೃಣಂತಿನತು ಸ್ತೇಯಮಪಿ ಕೃಷ್ಣಮುಖಂ ನರಮ್ ॥[9]

ಈ ಜನ್ಮದಲ್ಲಿ ಮಾಡಿದ ಕಳ್ಳತವನೇ ಮುಂದಿನ ಜನ್ಮಾಂತರಗಳಲ್ಲಿ ಖೂನಿ ಮಾಡುವುದು ಕೆಡುಕನ್ನು ಮಾಡಬೇಕಾಗುತ್ತದೆ .

ವಧಾದಿಕುರುತೇ ಜನ್ಮನ್ಯಸ್ಮಿನ್ ಸ್ತೇಯಮನುಷ್ಠಿತಮ್ ।
ಕರ್ತುಃ ಪರತ್ರ ದುಃಖಾನಿ ವಿವಿಧಾನಿ ಕುಯೋನಿಷು ॥[10]

ಕಳ್ಳತನ ಏಕೆ ಅಷ್ಟು ಕೆಟ್ಟದ್ದು? ಏಕೆಂದರೆ ಕೊಲೆಮಾಡಿದವನು ಕೇವಲ ಕ್ಷಣಕಾಲ ಮಾತ್ರ ನರಳುವನು. ಆದರೆ ಅವನ ಮಕ್ಕಳು ಹಾಗೂ ಮೊಮ್ಮಕ್ಕಳು ತಮ್ಮ ಜೀವಿತಾವಧಿ ಯಿರುವವರೆಗೂ ಕಳ್ಳರ ವಂಶದಲ್ಲಿ ಜನಿಸಿದವರೆಂಬ ಅಪಕೀರ್ತಿಗೆ ಪಾತ್ರರಾಗುತ್ತಾರೆ.

ಏಕಸ್ಸೈವ ಕ್ಷಣಂ ದುಃಖಂ ಮಾರ್ಯಮಾಣಸ್ಯ ಜಾಯತೇ ।
ಸುಪುತ್ರ ಪೌತ್ರಸ್ಯ ಪುನಃ ಯಾವಜ್ಜೀವಂ ಹೃತೇ ಧನೇ ॥[11]

ನಮ್ಮ ಭಾರತದ ಸುದೀರ್ಘ ಇತಿಹಾಸದಲ್ಲಿ ರಾಜರು ತಮ್ಮ ಆಸ್ಥಾನದಲ್ಲಿ ಯಾವ ಕಳ್ಳರೂ ಇಲ್ಲ ಎಂದು ಹೇಳಿಕೆ ಕೊಟ್ಟಿದ್ದುಂಟು – ನಮೇಸ್ತೇನೋ ಜನಪದೇ – ನಿಜಕ್ಕೂ ಸಾಹಸದ ಮಾತು. ಛಾಂದೋಗ್ಯೋಪನಿಷತ್ತಿನಲ್ಲಿ[12] ಕೇಕಯ ರಾಜನಾದ ಅಶ್ವಪತಿ ಉದ್ದಾಲಕನೊಂದಿಗೆ ಬಂದಿದ್ದಂತಹ ಮುನಿಗಳಿಗೆ ಆಶ್ವಾಸನೆ ಕೊಟ್ಟ ವೈಶ್ವಾನರ ವಿದ್ಯೆಯನ್ನು ಕಲಿಯಲು (ನನಗಿಷ್ಟ ಬಂದ ರೀತಿಯಲ್ಲಿ ಮಾಡಲು ಸಹಕರಿಸಿದವರನ್ನು ಕುರಿತು) ನನ್ನ ಯಾವುದೇ ಪ್ರಜೆಯೂ ಕಳ್ಳತನ ಮಾಡುವುದಿಲ್ಲ. ಯಾರೂ ನನ್ನಲ್ಲಿ ಜಿಪುಣರಿಲ್ಲ. ಯಾರೂ ಕುರುಡರಿಲ್ಲ, ಅಗ್ನಿಕಾರ್ಯ ಮಾಡದಿರುವವರು ಯಾರೂ ಇಲ್ಲ. ನಡತೆಗೆಟ್ಟ ಗಂಡಸರೂ ಇಲ್ಲ ಹೆಂಗಸರೂ ಇಲ್ಲ. ಈ ಹಿಂದಿನ ಭಾರತದ ವರ್ಣನೆ ಚೀನಾದೇಶದ ಯಾತ್ರಿಕನಾದ ಫಾಯಿಯಾನನ ಹೇಳಿಕೆಯನ್ನುಸಮರ್ಥಿಸುತ್ತದೆ – ಭಾರತದಲ್ಲಿಕಳ್ಳರಿಲ್ಲ. ಕೊಲೆಗಡುಕರಿಲ್ಲ. ಸಮಗ್ರ ಭಾರತದ ತನ್ನ ಪರ್ಯಟನದಲ್ಲಿ ಅಂತಹ ಸನ್ನಿವೇಶ ತನಗೆಂದೂ ಎದುರಾಗಲಿಲ್ಲ. ಅವನು ತನ್ನ ಆತ್ಮಕಥೆಯಲ್ಲಿ ಬರೆದಿರುವಂತೆ ಇಲ್ಲಿ ಜನರು ತಮ್ಮ ಮನೆಗಳಿಗೆ ಬೀಗವನ್ನು ಸಹ ಹಾಕುತ್ತಿರಲಿಲ್ಲ.

ತಸ್ಕರ ಎಂಬ ಪದ ಕಳ್ಳರಿಗೆ ನೀಡಿರುವ ಬೆಂಬಲ. ಸಂಸ್ಕೃತದಲ್ಲಿ ಚೋರ ಎಂದರೆ ಕಳ್ಳ. ''ಅವನು ಹಾಗೆ ಮಾಡುತ್ತಾನೆ'' ಎನ್ನುವುದು ಪದ ನಿಷ್ಪತ್ತಿ ''ತತ್ಕರೋತೀತಿ ತಸ್ಕರಃ'' – ಯಾವುದು ಬಾಯಲ್ಲಿ ಹೇಳುವುದೂ ಹೇಯವೋ ಅದು ಎಂದು ಪದವೇ ಅದರ ಬಗ್ಗೆ ಇರುವ ತಿರಸ್ಕಾರ ಸೂಚಿಸುತ್ತದೆ. ಸಮಯ ಬದಲಾಯಿತು. ಈಗ ಇರುವ ಭಾರತ ಅಶ್ವಪತಿ, ಉಪನಿಷತ್ ಫಾಯಿಯಾನನ ಕಾಲದ ಭಾರತವಲ್ಲ. ಕಳ್ಳತನವಿದೆ, ಮನೆಯ ಲೂಟಿಯಿದೆ. ಕಳ್ಳತನ, ಲೂಟಿ ಒಂದು ಕಲೆಯಾಗಿ ಪರಿಣಮಿಸಿದೆ. ಇದಕ್ಕೆ ಮೃಚ್ಛಕಟಿಕದಲ್ಲಿ ದಾಖಲೆಯಿದೆ. ಕಳ್ಳತನದ ದೃಶ್ಯದಲ್ಲಿ ಹಂತಹಂತವಾಗಿ ಇದು ನಿರೂಪಿತವಾಗಿದೆ. ನಾಟಕದ ನಾಯಕನಾದ ಚಾರುದತ್ತನ ಮನೆಯಲ್ಲಿ ಕನ್ನಹಾಕಿ ಶರ್ವಿಳಕ ಒಳಬಂದಾಗ. ಹೆಜ್ಜೆಯ ಶಬ್ದ ಕೇಳಿಬರುತ್ತದೆ. ಅವನು ಪ್ರಾಂಗಣಕ್ಕೆ ಬಂದಾಗ ಅವನು ಹೋಗಬೇಕಾದ ಬಾಗಿಲು ಶಬ್ದಮಾಡುತ್ತದೆ. ಬಾಗಿಲ ಹಿಂದೆ ಕಾದು ನಿಂತು ಇಬ್ಬರು ನಿದ್ರಿಸುತ್ತಿರುವುದನ್ನು ನೋಡಿ ಅವರು ನಿಜವಾಗಿಯೂ ನಿದ್ರಿಸುತ್ತಿರುವರೆಂದು ಖಚಿತಪಡಿಸಿಕೊಳ್ಳಲು ಒಂದು ಕೈಗೊಂಬೆಯನ್ನು ಬಿಡುತ್ತಾನೆ.

ಪ್ರಾಂಗಣದಲ್ಲಿ ಕೇವಲ ಸಂಗೀತದ ವಾದ್ಯಗಳು ಇರುವುದನ್ನು ನೋಡಿ ಅವರು ಬಡವರೆಂದು ನಿರ್ಧರಿಸುತ್ತಾನೆ. ಅದನ್ನು ಖಚಿತಪಡಿಸಿಕೊಳ್ಳಲು ಮಾಯಾ ಬೀಜಗಳನ್ನು ವಿಸ್ತರಿಸುತ್ತಾನೆ. ಅದು ವಿಕಾಸಗೊಳ್ಳದಿರುವುದನ್ನು ನೋಡಿ ಅವರು ನಿಜಕ್ಕೂ ಬಡವರೆಂದು ನಿರ್ಧರಿಸುತ್ತಾನೆ. ಈ ಹೊತ್ತಿಗೆ ವಿದೂಷಕನು ಚಾರುದತ್ತನಿಗೆ ಆಭರಣಗಳ ಗಂಟನ್ನು ನೀಡುತ್ತಿರುವನೆಂದು ಭಾವಿಸಿ ಕಳ್ಳನಿಗೆ ನೀಡಿದಾಗ ಅವನು ಅಲ್ಲಿಂದ ಪರಾರಿಯಾಗುತ್ತಾನೆ.

ಇಂತಹ ಕೃತ್ಯಗಳಿಗೆ ಕುಮಾರ ಕಾರ್ತಿಕೇಯನೇ ಅಧಿದೇವತೆಯೆಂದೂ ಅವನಿಗೆ ಪ್ರಾರ್ಥನೆ ಸಲ್ಲಿಸದರೆ ತಾವು ತಮ್ಮ ಕೃತ್ಯದಲ್ಲಿ ಸಫಲರಾಗುವರೆಂಬ ಭಾವನೆಯಿದೆ. ಈ ಚೋರರಲ್ಲಿ ಆಚಾರ್ಯ ಕನಕಶಕ್ತಿ ಅವರು ನಾಲ್ಕು ರೀತಿಯಾದ ಕಳ್ಳತನವನ್ನು ನಿರೂಪಿಸಿದ್ದಾರೆ - ಸಂಧಿಭೇದ ಮಿಕ್ಕ ಆಚಾರ್ಯರೆಂದರೆ ಭಾಸ್ಕರನಂದಿನ್ ಮತ್ತು ಯೋಗಾಚಾರ್ಯ. ಯೋಗಾಚಾರ್ಯನು ತನ್ನ ಗುರುವಾಗಿ ಕಳ್ಳನನ್ನೇ ಭಾವಿಸಿದ್ದನೆಂದೂ ಅವನಿಂದ ಒಂದು ಮುಲಾಮನ್ನು ಸ್ವೀಕರಿಸಿದ್ದನೆಂದೂ ಅದನ್ನು ಹಚ್ಚಿಕೊಂಡರೆ ಅವನು ಅದೃಶ್ಯನಾಗುತ್ತಿದ್ದನೆಂದೂ, ಆಯುಧದಿಂದ ಯಾರಾದರೂ ಅವರನ್ನು ಛೇಧಿಸಿದರೂ ಅವರು ಅದಕ್ಕೆ ನಿರೋಧಕರಾಗುತ್ತಿದ್ದರು. ಕಳ್ಳತನದಲ್ಲೂ ಕೆಲವು ನಿಯಮಗಳನ್ನು ಪರಿಪಾಲಿಸಬೇಕಿತ್ತು. ಕಳ್ಳನು ಬ್ರಾಹ್ಮಣನ ಆಸ್ತಿ ಮುಟ್ಟುವಂತಿರಲಿಲ್ಲ.

ಅನಂತರ ಕಾಲದಲ್ಲಿ ಕಳ್ಳರು ಹೆಚ್ಚಾದರೆಂಬುದಕ್ಕೆ ಮಾಹಿತಿಯಿದೆ. ಹಾಗಿಲ್ಲದಿದ್ದರೆ ವಿದ್ಯೆಯೇ ಹಣ. ಅದನ್ನು ಕಳ್ಳನಾಗಲೀ ರಾಜನಾಗಲೀ ತೆಗೆದುಕೊಂಡು ಹೋಗುವುದಕ್ಕಾಗುವುದಿಲ್ಲ : ನ ಚೋರಹಾರ್ಯಂ ನಚರಾಜಹಾರ್ಯಂ ಆದ್ದರಿಂದ ಅದೇ ಅತ್ಯುತ್ಕೃಷ್ಟವಾದ ಹಣ. ವಿದ್ಯಾಧನಂ ಸರ್ವಧನ ಪ್ರಧಾನಂ. ಕದಿಯುವುದು, ದರೋಡೆ ಮಾಡುವುದು, ಮುಂತಾದ ಕೆಟ್ಟ ಕೃತ್ಯಗಳು ಸಮಾಜದಲ್ಲಿ ಪ್ರವೇಶಿಸಿದ್ದರೂ ಸಹ ಅದರಿಂದ ಹೊರಗಿರಬೇಕೆಂಬ ವಿಷಯಕ್ಕೆ ಒತ್ತುಕೊಡಲಾಗಿತ್ತು. ಅಸ್ತೇಯವೆಂಬುದು ಧರ್ಮದ ಹತ್ತು ಅಂಗಗಳಲ್ಲೊಂದು ಅದನ್ನು ಹಿಂದೆಯೇ ತಿಳಿಸಲಾಗಿದೆ. ಸಮಾಜದ ಆಕೃತಿಗೆ ಧರ್ಮವೇ ಮೂಲ. ಅದನ್ನೇ ಪ್ರತಿಯೊಬ್ಬರೂ ಅಳವಡಿಸಿಕೊಳ್ಳಬೇಕು.

---


**ಆಕರಗಳು**

1) ಮನುಸ್ಮೃತಿ.10.63 2) 8.15 3) 1.11 4) 1.22 5) ಯೋಗಸೂತ್ರ.2.67 6) ಅದೇ.2.74-75 7) ಧರ್ಮಾಮೃತ.4.49 8) ಚಾಣಕ್ಯಸೂತ್ರಾಣಿ.268 9) ಧರ್ಮಾಮೃತ.4.560 10) ಪದ್ಮಪುರಾಣ.14.189 11)ಯೋಗಶಾಸ್ತ್ರ.2.68 12) 5.15.5

# 26. ಮಾತೃಪಿತೃಭಕ್ತಿ

ಭಾರತೀಯತೆಯಿಂದ ಕೂಡಿರುವ ಮಾನವೀಯ ಮೌಲ್ಯವೆಂದರೆ ತಂದೆತಾಯಿಗಳಿಗೆ ಗೌರವಸಲ್ಲಿಸುವುದು. ಉಪನಿಷತ್ತು ಹೇಳುವಂತೆ ಮಾತೃದೇವೋಭವ, ಪಿತೃದೇವೋಭವ - ತಾಯಿಯನ್ನು ದೇವರಂತೆ ಕಾಣು, ತಂದೆಯನ್ನು ದೇವರಂತೆ ಕಾಣು. ಹೇಗೆ ಮಂದಿರದಲ್ಲಿ ಅಲ್ಲಿರುವ ದೇವರಿಗೆ ಪ್ರದಕ್ಷಿಣೆ ಬರಲಾಗುತ್ತದೆಯೋ ಹಾಗೆಯೇ ತಾಯಿ, ತಂದೆಯರಿಗೂ ಗೌರವವನ್ನು ಸಲ್ಲಿಸಬೇಕು. ಒಂದು ಸಾಂಪ್ರದಾಯಿಕ ಶ್ಲೋಕದಂತೆ ತಂದೆತಾಯಿಗಳಿಗೆ ಪ್ರದಕ್ಷಿಣೆ ಮಾಡಿದವನು ಭೂಮಿಯೊಂದಿಗೆ ಏಳು ದ್ವೀಪಗಳಿಗೂ ಪ್ರದಕ್ಷಿಣೆ ಮಾಡಿದಂತೆಯೇ ಸರಿ :-

**ಮಾತರಂ ಪಿತರಂ ಚಾಪಿ ಯೋ ಹಿ ಕುರ್ಯಾತ್ ಪ್ರದಕ್ಷಿಣಮ್ ।**
**ಪ್ರದಕ್ಷಿಣಕೃತಾ ತೇನ ಸಪ್ತದ್ವೀಪಾ ವಸುಂಧಾರಾ ॥**

ಅದರಿಂದ ತಿಳಿಯುವುದೇನೆಂದರೆ ಅವನು ಎಲ್ಲಾ ಯಾತ್ರಾ ಸ್ಥಳಗಳನ್ನೂ ಸುತ್ತಿದಂತೆಯೇ, ಭೂಮಿಯೇ ಅದಕ್ಕೆ ಆಕರ. ಕಾರ್ತಿಕೇಯ ಹಾಗೂ ಗಣೇಶರ ನಡುವೆ ಪೈಪೋಟಿಯಿತ್ತೆಂದೂ ಯಾರು ಭೂಮಿಯನ್ನು ಬೇಗ ಸುತ್ತುವರೋ ಎಂಬ ವಿಷಯದಲ್ಲಿ. ಕಾರ್ತಿಕೇಯ ಭೂಮಿಯನ್ನೇ ಸುತ್ತಲು ಮೊದಲು ಮಾಡಿದಾಗ, ಗಣೇಶ ಅತ್ಯಂತ ಬುದ್ಧಿವಂತಿಕೆಯಿಂದ ತನ್ನ ತಾಯಿ ತಂದೆಯರನ್ನು ಸುತ್ತಿದನು. ಅವನ ಇಂಗಿತವೂ ಭೂಮಿಗೆ ಪ್ರದಕ್ಷಿಣೆ ಮಾಡುವುದೇ ಆಗಿತ್ತು. ತಂದೆತಾಯಿಯರನ್ನು ಪ್ರದಕ್ಷಿಣೆ ಮಾಡುವುದು ಭೂಮಿಯನ್ನು ಸುತ್ತುವುದಕ್ಕಿಂತ ಕಡಿಮೆ ಸಮಯವಾಯಿತು. ಗಣೇಶ ಪಂದ್ಯದಲ್ಲಿ ಗೆದ್ದ.

ಶ್ರವಣ ಕುಮಾರನಿಗೆ ತಂದೆ ತಾಯಿಗಳ ಬಗ್ಗೆ ಇದ್ದ ಗೌರವ ಭಾರತೀಯ ಪರಂಪರೆಯಲ್ಲಿ ಸುತ್ತಾಡುತ್ತಿದೆ. ಅವನು ತನ್ನ ಮುದಿ ಕುರುಡಾದ ತಂದೆ ತಾಯಿಯಂದಿರ ಜೊತೆ ಸುತ್ತಾಡುತ್ತಿದ್ದನೆಂದು ಹೇಳಲಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಅದಕ್ಕೇನೂ ಮಾಹಿತಿಯಿಲ್ಲ. ಅಲ್ಲಿ ಬರುವ ಘಟನೆಯೆಂದರೆ ಅಯೋಧ್ಯೆಯ ರಾಜನಾದ ದಶರಥ ತನ್ನ ಪ್ರಿಯಪುತ್ರನಾದ ರಾಮನನ್ನು ವನವಾಸಕ್ಕೆ ಕಳುಹಿಸಬೇಕಾಯಿತು. ಅದು ತನ್ನ ಸ್ವಯಂ ಕೃತಾಪರಾಧವೆಂದು ದಶರಥನೇ ತಿಳಿಸುತ್ತಾನೆ. ಒಳ್ಳೆಯದಾಗಲೀ, ಕೆಟ್ಟದಾಗಲೀ, ಮಾಡಿದ ಕಾರ್ಯಕ್ಕೆ ಫಲವನ್ನನುಭವಿಸಲೇಬೇಕು. ಅವನು ಯೌವನದಲ್ಲಿದ್ದಾಗ ಬೇಟೆಗೋಸ್ಕರ ಕಾಡಿಗೆ ಹೋದ. ಆ ವಯಸ್ಸಿನಲ್ಲೇ ಅವನು ಶಬ್ದವೇದಿ ವಿದ್ಯೆಯಲ್ಲಿ ನಿಪುಣನಾಗಿದ್ದ. ಒಂದುದಿನ ಮುಂಜಾನೆ, ಕತ್ತಲಲ್ಲಿ ಅವನು ಬೇಟೆಗೆ ಹೊರಟ. ನೀರಿನಲ್ಲಿ ಮುಳುಗುವ ಬಿಂದಿಗೆಯ ಶಬ್ದ ಅವನಿಗೆ ಕೇಳಿಸಿತು. ಅದನ್ನವನು ಆನೆ ನೀರು ಕುಡಿಯುತ್ತಿದೆಯೆಂದು ಭ್ರಮಿಸಿ ಶಬ್ದ ಬಂದೆಡೆ ಬಾಣ ಪ್ರಯೋಗಮಾಡಿದ. ಆ ಬಾಣ ನಾಟದೊಡನೆಯೇ ಹಾಹಾ ಎಂಬ ಶಬ್ದ ಅವನ ಕಿವಿಗೆ ಬಿತ್ತು. ಕಾಡಿನಲ್ಲಿರುವ ಋಷಿಕುಮಾರ ಕಾಡಿನಲ್ಲಿ ಬೆಳೆದಿದ್ದನ್ನೇ ನಂಬಿ ಅದರಿಂದಲೇ ಜೀವಿಸುತ್ತಾ, ಜಟಾಧಾರಿಯಾಗಿ, ಮರದ ತೊಗಟೆಗಳನ್ನೇ ಧರಿಸಿ, ಯಾರ ಬಗ್ಗೆಯೂ

ವೈರವಿಲ್ಲದವನಾಗಿರುವವನಿಗೇಕೆ ಬಾಣ ತಗುಲಿತು? ತನ್ನಿಂದ ದೊಡ್ಡ ತಪ್ಪಾಗಿದೆಯೆಂದು ಅವನಿಗನಿಸಿತು. ಅತ್ಯಂತ ಪಶ್ಚಾತ್ತಾಪದಿಂದ ದಶರಥ ಬಂದು ನೋಡಿದಾಗ ಒಬ್ಬ ಯುವಕ ರಕ್ತದ ಮಡುವಿನಲ್ಲಿರುವುದನ್ನು ಕಂಡ. ಅವನ ಎದೆಗೆ ಬಾಣ ನಾಟಿತ್ತು. ಅವನು ಅತ್ಯಂತ ನೋವಿನಿಂದ ಕೂಡಿದ್ದ. ಅವನು ತನ್ನ ಮುದಿ ಕಣ್ಣುಕಾಣದ ತಂದೆ ತಾಯಿಯರ ಬಗ್ಗೆ ಚಿಂತಿಸುತ್ತಿದ್ದ (ನೀರನ್ನು ತರಲು ತನ್ನನ್ನು ಕಳುಹಿಸಿದ) ಅವನು ಒಂದು ಚಿಕ್ಕ ಮಾರ್ಗವನ್ನು ತೋರಿಸಿದ. ನನ್ನಿಂದ ಬಾಣ ಬೇರ್ಪಡಿಸಲು ಕೇಳಿದ ತನ್ನ ಸಾವು ಖಂಡಿತವೆಂದು ತಿಳಿದಿದ್ದ. ತನ್ನ ತಂದೆತಾಯಿಯಂದಿರಿಗೆ ಈ ದಾರುಣ ಘಟನೆಯನ್ನು ತಿಳಿಸುವುದಾಗಿಯೂ ಹೇಳಿದ. ಆದರಿಂದ ಆ ಮುದಿ ಮುನಿಯಿಂದ ಅವನಿಗೆ ಶಾಪಬಂದಿತು. ತಾನು ತನ್ನ ಕೊನೆ ಕಾಲದಲ್ಲಿ ಸಾಯುತ್ತಿರುವಂತೆ ಅವನೂ ಸಹ ಕೊನೆಗಾಲದಲ್ಲಿ ಹತ್ತಿರ ಮಕ್ಕಳಿಲ್ಲದಿರುವಾಗ ಸಾಯುವಂತಾಗಲಿ ಎಂದು. ಆ ತಂದೆ ಮತ್ತೆ ದಶರಥನಿಗೆ ಹೇಳಿದ – ಮಗನ ಚಿತೆಗೆ ಸಿದ್ಧಪಡಿಸಬೇಕು ತನ್ನನ್ನು ಹಾಗೂ ತನ್ನ ಹೆಂಡತಿಯನ್ನು ಆ ಚಿತೆಯ ಮೇಲಿಡುವಂತೆ ಹೇಳಿದ. ಈ ಶಾಪದ ವಿಷಯವನ್ನು ತನ್ನ ಜೀವನದುದ್ದಕ್ಕೂ ದಶರಥ ಕೌಸಲ್ಯೆಗೆ ಹೇಳುತ್ತಿದ್ದ. ಆ ಶಾಪವು ಈಗ ನಿಜವಾಗುತ್ತಿದೆ.

ರಾಮನಿಂದಲೂ ಸಹ ಪಿತೃಭಕ್ತಿ ಸೂಚಿಸುವಂತಹ ಘಟನೆ ಸೂಚಿತವಾಗಿದೆ. ತನ್ನ ತಾಯಿಯಾದ ಕೈಕೇಯಿಗೆ ತಾನು ಕಾಡಿಗೆ ಹೋಗುವುದಾಗಿ ರಾಮ ಮಾತು ಕೊಡುತ್ತಾನೆ [1] ತಾನು ತನ್ನ ಗಂಡನನ್ನು ರಾಕ್ಷಸರ ವಿರುದ್ಧ ದೇವತೆಗಳಿಗೆ ಸಹಕರಿಸಲು ಯುದ್ಧ ಮಾಡುತ್ತಿದ್ದ ಸಂದರ್ಭದಲ್ಲಿ ಅವನ ಪ್ರಾಣರಕ್ಷಣೆ ಮಾಡಿ ಆಗ ಅವನಿಂದ ವರಪಡೆದ ಹಿನ್ನಲೆಯಲ್ಲಿ ಅವನು ಘಂಟಾಘೋಷವಾಗಿ ನುಡಿಯುತ್ತಾನೆ :–

ನಹ್ಯತೋ ಧರ್ಮಾಚರಣಂ ಕಿಂಚಿದಸ್ತಿಮಹತ್ತರಮ್ ।
ಯಥಾ ಪಿತರಿ ಶುಶ್ರೂಷಾ ತಸ್ಯ ವಾ ವಚನಕ್ರಿಯಾ ॥

ತಂದೆಯ ಸೇವೆ ಮಾಡುವುದು, ಅವನ ಮಾತಿನಂತೆ ನಡೆಯುವುದಕ್ಕಿಂತಲೂ ದೊಡ್ಡಗುಣ ಮತ್ತಾವುದೂ ಇಲ್ಲ.[2]

ದಶರಥ ಎಷ್ಟು ದುಃಖಿತಪ್ತನಾಗಿದ್ದನೆಂದರೆ ಅವನು ರಾಮನಿಗೆ ತನ್ನನ್ನು ಸೆರೆಯಲ್ಲಿರಿಸಿ ರಾಜ್ಯವನ್ನು ಪಾಲಿಸೆನ್ನಲಾದಾಗ ರಾಮ ಅದಕ್ಕೆ ಸುತಾರಾಂ ಒಪ್ಪಲಿಲ್ಲ. ರಾಮ ತನ್ನ ದೃಢ ನಿರ್ಧಾರ ಬದಲಿಸದಿದ್ದಾಗ ತನ್ನೊಡನೆ ಒಂದು ರಾತ್ರಿಯಿದ್ದು ಮರುದಿನ ಬೆಳಿಗ್ಗೆ ಕಾಡಿಗೆ ಹೊರಡುವಂತೆ ದಶರಥ ವಿನಂತಿಸಿಕೊಂಡ, ರಾಮನಿಗೆ ಅದರಲ್ಲಿ ಯಾವ ಗುಣವೂ ಕಾಣಲಿಲ್ಲ. ಈದಿನ ಹೋಗುವುದರಿಂದ ಯಾವಗುಣ ತಾನೇ ನನ್ನ ಮೇಲೆ ಆರೋಪಿತವಾಗುತ್ತದೆ । ಅನಂತರ ಅತ್ಯಂತ ಮನೋಜ್ಞವಾಗಿ ನುಡಿದ :–

ಪಿತಾಹಿ ದೈವತಂ ತಾತ ದೇವತಾನಾಮಪಿ ಸ್ಮೃತಂ ।
ತಸ್ಮಾದ್ ದೈವತ್ವಮಿತ್ಯೇವ ಕರಿಷ್ಯಾಮಿ ಪಿತುರ್ವಚಃ ॥[3]

ತಂದೆಯೇ ಸಾಕ್ಷಾತ್ ದೇವರೆಂದು ದೇವತೆಗಳೂ ನುಡಿಯುತ್ತಾರೆ. ಆದ್ದರಿಂದ ಅವನನ್ನು ದೇವರೆಂದೇ ಭಾವಿಸಿ ಅವನ ಮಾತಿನಂತೆ ನಡೆಯುತ್ತೇನೆ.

ಬ್ರಹ್ಮಾಂಡಪುರಾಣದ ಪ್ರಕಾರ, ತಂದೆಗೆ ವಿಧೇಯನಾಗಿರುವವನು ಯಜ್ಞದ ಫಲವನ್ನನುಭವಿಸುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅದರೊಂದಿಗೆ ವೇದದ ಫಲ, ಬಯಸಿದ ಕಾಮನೆಗಳು, ವಸ್ತುಗಳು, ದೀರ್ಘಾಯುಸ್ಸು, ತಪಃಫಲ ಎಲ್ಲವೂ ಲಭಿಸುತ್ತದೆ.

ಯಜ್ಞಾನ್ ವೇದಾಂ ಸ್ತಥಾ ಕಾಮಾನ್ ತಪಾಂಸಿ ವಿವಿಧಾನಿಚ ।
ಪ್ರಾಪ್ನೋತ್ಯಾಯುಃ ತಪಶ್ಚೈವ ಪಿತೃಭಕ್ತೋನ ಸಂಶಯಃ ॥[6]

ಇಲ್ಲಿ ಒಂದು ಪ್ರಶ್ನೆ ಉದ್ಭವಿಸಬಹುದು. ತಂದೆತಾಯಂದಿರಿಬ್ಬರೂ ದೇವರೇ ಆದರೆ, ಇಬ್ಬರನ್ನೂ ಒಂದೇ ರೀತಿ ಕಾಣಬೇಕೇ? ಕೆಲವು ವೇಳೆ ಮಗು ತಂದೆ ತಾಯಂದಿರಲ್ಲಿ ಭಿನ್ನಾಭಿಪ್ರಾಯಗಳನ್ನು ಕಾಣಬಹುದು. ಆಗ ಅದಕ್ಕೆ ಮಾರ್ಗದರ್ಶಕರಾರು? ಆಗ ಅವರು ಪ್ರಾಚೀನ ಗ್ರಂಥಗಳಿಗೇ ಮೊರೆಹೋಗಬೇಕು. ಅದು ಬಹಳ ಸ್ಪಷ್ಟವಾಗಿದೆ. ತಾಯಿತಂದೆಗಿಂತಲೂ ಸಾವಿರ ಪಟ್ಟು ಮಿಗಿಲು – ಸಹಸ್ರಂಹಿ ಪಿತುರ್ ಮಾತಾ ಗೌರವೇಣಾತಿರಿಚ್ಯತೇ. ತಾಯಿಯ ಕೈಸ್ಪರ್ಶವು ನೀರನ್ನು ಬಯಸಿದವನಿಗೆ ನೀರಿನಂತೆ – ಹಸ್ತಸ್ಪರ್ಶೋ ಹಿ ಮಾತೃಣಾಂ ಅಜಲಸ್ಯ ಜಲಾಂಜಲಿಃ. ತಾಯಿಯು ಮಗುವನ್ನು ಬೆಳೆಸುವುದರಲ್ಲಿ ಪಡುವ ಶ್ರಮಕ್ಕೆ ಸಾಟಿಯೇ ಇಲ್ಲ. ತಂದೆ ಕೇವಲ ಸಾಕುವವನು ಮಾತ್ರ. ತಾಯಿ ಅವನಿಗೆ ಜನ್ಮವಿತ್ತಿದ್ದಳು. ಅವನು ಅವಳದೇ ಒಂದು ಭಾಗ. ಸ್ಕಾಂದಪುರಾಣ ತಾಯಿಯನ್ನು ವರ್ಣಿಸುತ್ತಾ ಹೇಳುತ್ತದೆ – ಅವಳಂತಿರುವ ನೆರಳಿಲ್ಲ; ಅವಳಂತಹ ಆಸರೆಯಿಲ್ಲ; ಅವಳಂತಹ ರಕ್ಷಕಳಿಲ್ಲ; ಅವಳಂತಹ ನೀರಿನ ಕೊಳವೂ ಇಲ್ಲ.

ನಾಸ್ತಿ ಮಾತೃಸಮಾಛಾಯಾ ನಾಸ್ತಿ ಮಾತೃಸಮಾ ಗತಿಃ ।
ನಾಸ್ತಿ ಮಾತೃಸಮಂ ಪ್ರಾಣಂ ನಾಸ್ತಿ ಮಾತೃಸಮಾ ಪ್ರಪಾ ॥[7]

ತಂದೆತಾಯಂದಿರ ಬಗ್ಗೆ ವಿಚಾರವನ್ನು ಉಪಸಂಹರಿಸುವುದರ ಮುನ್ನ ಕೇವಲ ಜೈವಿಕ ತಂದೆ ತಾಯಿ ಮಾತ್ರವಲ್ಲ ಬೇರೆಯವರೂ ಸಹ ಅವರ್‍ಯಾರೆಂಬುದನ್ನು ಮುಂದಿನ ಶ್ಲೋಕ ಸ್ಪಷ್ಟೀಕರಿಸುತ್ತದೆ :–

ಗುರು ಪತ್ನೀ ರಾಜಪತ್ನೀ ಜೇಷ್ಠಪತ್ನೀ ತಥೈವ ಚ ।
ಪತ್ನೀ ಮಾತಾಸ್ವಮಾತಾ ಚ ಪಂಚೈತೇ ಮಾತರಃ ಸ್ಮೃತಾಃ ॥[8]
ಜನಕಶ್ಚೋಪನೇತಾ ಚ ಯಶ್ಚವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥[9]

ತಾಯಿಯ ಗುರು, ರಾಜನ ಹೆಂಡತಿ, ಅಣ್ಣನ ಹೆಂಡತಿ, ಅತ್ತೆ ಮತ್ತು ತನ್ನ ತಾಯಿ – ಈ ಐವರೂ ತಾಯಿಯಂತೆಯೇ.

ಭಾರತೀಯ ಮೌಲ್ಯ ಸಂಚಯದಂತೆ ತಾಯಿಯು ಭೂಮಿಗಿಂತಲೂ ಭಾರ ತಂದೆಯು ಆಕಾಶಕ್ಕಿಂತಲೂ ಉನ್ನತ :

ಮಾತಾ ಗುರುತರಾ ಭೂಮೇಃ ಖಾತ್ ಪಿತೋಚ್ಚತರಸ್ತಥಾ.[10]

ಮಕ್ಕಳು ತಾಯಿಗೆ ಕೇಡುಂಟುಮಾಡಬಹುದು ಆದರೆ ತಾಯಿಯೆಂದೂ ಮಕ್ಕಳಿಗೆ ಕೇಡನ್ನು ಬಯಸುವುದಿಲ್ಲ :- ಮಾತರಿ ಭವಂತಿ ಸುತಾನಾಂ ಮಂತವಃ ಕಿಲ ಸುತೇಷುನ ಮಾತುಃ.[11]

ತಾಯಿಯು ತನ್ನದೇ ಆದ ರೀತಿಯಲ್ಲಿ ಮಕ್ಕಳನ್ನು ನೋಡುತ್ತಾಳೆ. ಅದರ ಬಗ್ಗೆ ಒಂದು ಆಕರ್ಷಕ ಘಟನೆಯಿದೆ. ಒಂದು ಮಗುವು ಗಟ್ಟಿಯಾಗಿ ತೊಟ್ಟಿಲಿನಲ್ಲಿ ಅಳಲಾರಂಭಿಸಿತು. ತಾಯಿ ಅಡಿಗೆ ಮನೆಯಿಂದ ಧಾವಿಸಿ ಬಂದು ಮಗುವಿಗೆ ಹಾಲುಣಸಿದಳು. ಮಗು ಸುಮ್ಮನಾಯಿತು. ಮಗು ಬೆಳೆಯುತ್ತಿದೆಯೆಂದು ತಾಯಿ ಭಾವಿಸಿದಳು. ಅದಕ್ಕೆ ಹಸಿವಾಗಿರುವುದರಿಂದಲೇ ಅದು ಅತ್ತಿದೆ. ಆಗರಾತ್ರಿ ಮತ್ತೆ ಮಗು ಅಳಲಾರಂಭಿಸಿತು. ತಾಯಿ ನೋಡಿದಳು. ಆಗ ಹಾಸಿಗೆ ಒದ್ದೆಯಾಗಿತ್ತು. ಆಗ ತಾಯಿ ಅಂದುಕೊಂಡಳು - ಹಾಸಿಗೆ ಒದ್ದೆಯಾದದ್ದರಿಂದ ಅವರಿಂದ ತೊಂದರೆಗೊಳಗೊಂಡ ಮಗು ಅತ್ತಿದೆಯೆಂದು - ಆಗ ತಾಯಿ ಮಗುವನ್ನೆತ್ತಿಕೊಂಡು ಬೇರೆಡೆ ಮಲಗಿಸಿದಳು. ಆಗಲೂ ಸಹ ಮಗು ಬೆಳೆಯುತ್ತಿದೆಯೆಂದು ತಾಯಿ ಭಾವಿಸಿದಳು. ಮಗುವು ಅಂಬೆಕಾಲಿಟ್ಟು ನಡೆಯುತ್ತಾ ತಾಯಿಯ ಹಣದ ಚೀಲವನ್ನು ಕೆಳಗೆ ಹಾಕಿತು. ಅದಕ್ಕೆ ತಾಯಿ ಬಯ್ಯಲಿಲ್ಲ. ಆಗ ತಾಯಿ ಅಂದುಕೊಂಡಳು. ಮಗುವು ಬೌದ್ಧಿಕವಾಗಿ ಬೆಳೆಯುತ್ತಿದೆ. ಆದ್ದರಿಂದ ಅದು ಸಕ್ರಿಯವಾಗಿದೆಯೆಂದು. ಒಂದು ದಿನ ಆಕಾಶದಲ್ಲಿ ಮಿಂಚುಮಿಂಚಿತು ಗುಡುಗು ಕೇಳಿಸಿತು. ಮಗು ತಾಯಿಯನ್ನು ಭಯದಿಂದ ಅಪ್ಪಿಕೊಂಡು ಎಲ್ಲೋ ಏನೋ ತಪ್ಪಿದೆಯೆಂದು ಸೂಚಿಸುವಂತಿತ್ತು. ಆಗ ತಾಯಿ ಅಂದುಕೊಂಡಳು ಮಗುವಿಗೆ ವಿವೇಕ ಮೂಡುತ್ತಿದೆಯೆಂದು. ಮಗುವಿನ ಪ್ರತಿಯೊಂದು ಕ್ರಿಯೆಯನ್ನೂ ಸಹ ತಾಯಿ ಸಕಾರಾತ್ಮಕವಾಗಿಯೇ ತೆಗೆದುಕೊಂಡಳು. ತಾಯಿಯೆಂದರೆ ಹಾಗೆಯೇ.

ರಾಮನು ವನವಾಸದ ನಂತರ ರಾಜ್ಯಾಭಿಷಿಕ್ತನಾದಾಗ ಪ್ರಜೆಗಳ ಮನಸ್ಸನ್ನು ಅರಿಯಲು ಕುತೂಹಲಕಾರಿಯಾಗಿದ್ದನು. ಗೂಢಚಾರರನ್ನು ಪ್ರಜೆಗಳೊಡನೆ ಕಳುಹಿಸಿ ಅವರ ಮನಃಸ್ಥಿತಿಯನ್ನು ತಿಳಯಲಿಚ್ಛಿಸಿದನು. ಒಂದು ದಿನ ತಾಯಿಯ ತನ್ನ ಮಗುವಿಗೆ ಮೊಲೆಯುಣಿಸುವಾಗ ಆ ಮಗುವು ಅದನ್ನು ಸ್ವೀಕರಿಸಲಿಲ್ಲ. ಪ್ರತಿ ಸಲ ತಾಯಿ ಪ್ರಯತ್ನಿಸಿದಾಗಲೂ ಅದು ಮುಖವನ್ನು ಬೇರೆ ಕಡೆ ಮಾಡುತ್ತಿತ್ತು. ಆಗ ತಾಯಿ ಮಗುವನ್ನು ಕುರಿತು ಹೇಳಿದಳು - ನಾವೆಲ್ಲರೂ ರಾಮ ರಾಜ್ಯದಲ್ಲಿದ್ದೇವೆ ಆದ್ದರಿಂದ ಯಾರಿಗೂ ಮರುಜನ್ಮವಿಲ್ಲ. ನಿನಗೆ ಎರಡನೆಯ ಬಾರಿ ಮೊಲೆಯುಣಿಸುವ ಭಾಗ್ಯ ನನಗೆ ಬರುವುದಿಲ್ಲವಾದ್ದರಿಂದ ಈ ಬಾರಿ ನಾನು ಕೊಡುವ ಹಾಲನ್ನು ತಿರಸ್ಕರಿಸಬೇಡ. ಆ ಮಾತನ್ನು ಕೇಳಿಸಿಕೊಂಡ ಗೂಢಚಾರಿಗೆ ಕಣ್ಣಲ್ಲಿ ನೀರಿಳಿಯಿತು. ತಾಯಿಯೆಂದರೆ ಹಾಗೆಯೇ.

ಕೇವಲ ಮಾನವರಲ್ಲಿ ಮಾತ್ರ ತಾಯಿಯ ಮಮತೆಯಿರುವುದೆಂದು ಭಾವಿಸಬಾರದು. ಪ್ರಾಣಿಗಳೂ ಹಾಗೆಯೇ. ಒಂದು ಕಡೆ ಹೀಗಿದೆ :- ಒಬ್ಬ ವ್ಯಾಪಾರಿ ಎರಡು ಹಸುಗಳನ್ನು ಕೊಂಡುಕೊಂಡಿದ್ದನು. ಅದು ಒಂದೇ ರೀತಿಯಿತ್ತು. ಒಂದೇ ಗಾತ್ರ ಹಾಗೂ ಒಂದೇ ಬಣ್ಣ. ಅದರಲ್ಲಿ ತಾಯಿ ಯಾವುದು ಕರು ಯಾವುದು ಎಂದು ಗುರುತಿಸಲಾಗಲಿಲ್ಲ. ಅವನು ದೊರೆಯ ಬಳಿ ಹೋದಾಗ ಆ ದೊರೆಗೂ ಗುರುತಿಸಲಾಗಲಿಲ್ಲ. ಅವನು ತನ್ನ ಮಂತ್ರಿಯನ್ನು ಕರೆದ. ಅವನಿಂದಲೂ ಉತ್ತರ ಸಿಗಲಿಲ್ಲ. ಅವನು ಸ್ವಲ್ಪ ಸಮಯ ಕೇಳಿದ, ಮರುದಿನ ನಾನು ಉತ್ತರ ಕೊಡಬಲ್ಲೆ ಎಂದ. ಅವನು ಚಿಂತಾಕ್ರಾಂತನಾಗಿ ಮನೆಗೆ ಬಂದ. ಅವನ ಹೆಂಡತಿ ಅವನ ಚಿಂತೆಗೆ ಕಾರಣ ಕೇಳಿ ಅದು ಬಹಳ ಸುಲಭ ಎಂದಳು. ಮರುದಿನ ಅವಳು ಗಂಡನೊಂದಿಗೆ ರಾಜ ಸಭೆಗೆ ಬಂದಳು. ತಾಯಿಕರು ಹಸುಗಳೂ ಸಹ ತರಲ್ಪಟ್ಟವು. ಮಂತ್ರಿಯ ಹೆಂಡತಿ ಒಂದೇ ಸಮನಾದ ಮೇವನ್ನು ಎರಡಕ್ಕೂ ಇಟ್ಟಳು. ಕರುಕೂಡಲೇ ಆ ಮೇವನ್ನು ಕಬಳಿಸಲಾರಂಭಿಸಿತು. ತಾಯಿ ಹಸು ಕೇವಲ ಅದನ್ನು ನೋಡುತ್ತಿತ್ತು. ಅದು ಸಂಕಟವನ್ನು ನಿವಾರಿಸಿತು. ಯಾವುದು ಕಣ್ಣನ್ನು ಮಿಟುಕಿಸದೆ ನೋಡುತ್ತಿತ್ತೋ ಅದೇ ತಾಯಿ ಹಸು, ಇನ್ನೊಂದು ಅದರ ಕರು. ತಾಯಿಯೆಂದರೆ ಹಾಗೆ !

ತಾಯಿ ಮತ್ತು ತಾಯ್ನಾಡು ಸ್ವರ್ಗಕ್ಕಿಂತಲೂ ಮಿಗಿಲೆಂದು ಸುಮ್ಮನೆ ಹೇಳಿಲ್ಲ:- ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ.

---

ಆಕರಗಳು

1) ರಾಮಾಯಣ.ಅಯೋಧ್ಯಾಕಾಂಡ.63ನೇ ಅಧ್ಯಾಯ 2) ಅದೇ.ಅಯೋಧ್ಯಾಕಾಂಡ. 19.22. 3) ಅದೇ.ಅಯೋಧ್ಯಾಕಾಂಡ.34.52 4) 3.19.68 5) ಬಾಲರಾಮಾಯಣ.4.30 6) ಪ್ರತಿಮಾನಾಟಕ.3.13 7) ಮಾ.ಕಾ.6.103-104 8) ನರಾಭರಣ.2.8 9) ನೀತಿಶಾಸ್ತ್ರ.80 10) ಮಹಾಭಾರತ.ವನಪರ್ವ.313.60 11) ಚೈತನ್ಯಚಂದ್ರೋದಯ.1.61

# 27. ಗುರುಭಕ್ತಿ

ತಂದೆತಾಯಿಯರ ಬಗ್ಗೆ ಇರುವಂತೆಯೇ ಗುರುವಿನ ಬಗ್ಗೆಯೂ ಹೌದು. ಅವನ ಬಗ್ಗೆಯೂ ಗೌರವ ತೋರಬೇಕು. ಅವನನ್ನೂ ದೇವರೆಂದೇ ಭಾವಿಸಬೇಕು :-

ಆಚಾರ್ಯದೇವೋಭವ

ಗುರುರ್ಬ್ರಹ್ಮ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರವೇ ನಮಃ ॥ [1]

ಭಾರತದಲ್ಲಿ ಗುರುಶಿಷ್ಯ ಸಂಬಂಧ ಅನನ್ಯಾದೃಶವಾಗಿತ್ತು. ಗುರುವು ಶಿಷ್ಯನಿಗೆ ಉಪನಯನ ಸಂಸ್ಕಾರ ಉಂಟುಮಾಡುವಾಗ ಅವನನ್ನು ತನ್ನಲ್ಲೇ ಅಡಕ ಮಾಡಿಕೊಂಡು ತಾಯಿಯಂತೆ ನೋಡಿಕೊಳ್ಳುವನು - ಆಚಾರ್ಯ ಉಪನಯಮಾನೋ ಬ್ರಹ್ಮಚಾರಿಣಂ ಕುರುತೇ ಗರ್ಭಮಂತಃ[2]. ಈ ಉಪಮೆ ಅತ್ಯಂತ ಅರ್ಥಪೂರ್ಣವಾದುದು. ಹೇಗೆ ಹುಟ್ಟದ ಮಗು ತಾಯಿಯಗರ್ಭದಲ್ಲಿ ಪೋಷಣೆ ಪಡೆಯುತ್ತದೆಯೋ ಅದೇ ರೀತಿ ಶಿಷ್ಯನೂ ದೈಹಿಕ, ಮಾನಸಿಕ ಹಾಗೂ ಭೌತಿಕ ಪೋಷಣೆಯನ್ನು ಗುರುವಿನಿಂದ ಪಡೆಯುತ್ತಾನೆ. ಆದ್ದರಿಂದ ಅವನು ಉಪನಯನದಿಂದ ಮೊದಲ್ಗೊಂಡು ಗುರುವಿನ ಅಧೀನ. ಗುರುವಿನ ಆಶ್ರಮದಲ್ಲಿ ಗುರುಕುಲದಲ್ಲಿ ಅವನಿಗೆ ಲೌಕಿಕ ಬೇಡಿಕೆಗಳನ್ನು ಈಡೇರಿಸುವುದರೊಂದಿಗೆ ಅವನಲ್ಲಿ ಅನುಶಾಸನವುಂಟುಮಾಡಿ ಶಿಷ್ಯನಾದ್ದರಿಂದ ನಡವಳಿಕೆ ಕಲಿಸಬೇಕಿತ್ತು. ಈ ಪದದ ನಿಷ್ಪತ್ತಿಯನ್ನು ನೋಡಬಹುದು - ಶಿಷ್ಯ, ಶಾಸ್ - ಅನುಶಿಷ್ಟಿ. ಈ ನಡವಳಿಕೆಯನ್ನು ಸರಿಯಾಗಿ ಕಲಿಸಬೇಕಿತ್ತು. ಸರಿಯಾದ ನಡವಳಿಕೆ, ವಿನೀತವಾಗಿ ಎನ್ನುವುದು ಶಿಷ್ಯನಿಗಿದ್ದ ಮತ್ತೊಂದು ಹೆಸರು. ಶಿಷ್ಯನ ಜೀವನದಲ್ಲಿ ಆಚಾರ್ಯನ ಪಾತ್ರ ಸಮಗ್ರವಾಗಿತ್ತು. ಶಿಷ್ಯ ಪ್ರತಿಕ್ಷಣವೂ ಗುರುವಿನ ಬಗ್ಗೆ ಮರ್ಯಾದೆ ತೋರಬೇಕಿತ್ತು. ಅದಕ್ಕೆ ಗುರುಪೂರ್ಣಿಮಾ ಎಂದು ಹೆಸರು.

ವ್ಯಾಸಪೂರ್ಣಿಮೆಯ ದಿನ ಹಿಂದಿನ ಹಾಗೂ ಇಂದಿನ ಶಿಷ್ಯರು ಗುರುಗಳಿಗೆ ತಮ್ಮ ಕೃತಜ್ಞತೆ ಸೂಚಿಸುವರು. ಈ ಪದ್ಧತಿ ಭಾರತಕ್ಕಷ್ಟೇ ಮೀಸಲಾಗಿಲ್ಲ. ಅದು ಭಾರತದ ಸಾಂಸ್ಕೃತಿಕ ಪ್ರಭಾವಕ್ಕೊಳಗಾದ ದೇಶಗಳಲ್ಲೂ ಇದೆ. ಥಾಯ್‌ಲ್ಯಾಂಡ್ ಒಂದು. ಅಲ್ಲಿ ಈ ಗ್ರಂಥಕರ್ತನಿಗೆ ಅಧ್ಯಾಪನ ಮಾಡುವ ಅವಕಾಶ ದೊರಕಿತ್ತು. ಅಲ್ಲಿಯ ಗುರು ಪೂಜೆಗೆ ಅವರು ಪ್ರತ್ಯಕ್ಷದರ್ಶಿಯಾಗಿದ್ದರು. ಆಗ ಗುರುಪೂಜೆ ಶಿಲ್ಪಕಾರ್ನ್ ವಿಶ್ವವಿದ್ಯಾಲಯ ಬ್ಯಾಂಕಾಕ್‌ನಲ್ಲಿ ಜರುಗಿತು. ಅದು 1978ನೇ ಜುಲೈ 13 ಬೆಳಿಗ್ಗೆ 8ಕ್ಕೆ ಕಾರ್ಯ ಕಲಾಪ ಪ್ರಾರಂಭವಾಯಿತು. ಮೊದಲಿಗೆ ಬೌದ್ಧ ಭಿಕ್ಷುಗಳು ಪಾಳಿಯಲ್ಲಿ ಪ್ರಾರ್ಥನೆ ಸಲ್ಲಿಸಿ ನೆರೆದಿದ್ದವರನ್ನೆಲ್ಲಾ ಆಶೀರ್ವದಿಸಿದರು. ಅವರಿಗೆ ದಾನ ನೀಡಿದ ಬಳಿಕ ಅವರೆಲ್ಲಾ ಹೊರಟರು. ಅಷ್ಟು ಹೊತ್ತಿಗೆ ಒಂಬತ್ತಾಗಿತ್ತು. ಪ್ರತಿಯೊಬ್ಬರೂ ಕುತೂಹಲದಿಂದ ಕಾಯುತ್ತಿದ್ದರು. ಕಾರಣವೆಂದರೆ ರಾಜಕುಮಾರಿ ಅಲ್ಲಿ ಬರುವಳೆಂದು. ಅವಳು 9.30ಕ್ಕೆ ಬಂದು ಪ್ರಥಮ ಪಂಕ್ತಿಯಲ್ಲಿ ತನ್ನ ಸ್ಥಾನ

ಸ್ವೀಕರಿಸಿದಳು. ಅನಂತರ ವಿದ್ಯಾರ್ಥಿಗಳು ಸಂಸ್ಕೃತದಲ್ಲಿ ಗುರುಸ್ತುತಿಯನ್ನು ಭಕ್ತಿಭಾವದಿಂದ ಕೈಜೋಡಿಸಿ, ಕಣ್ಣುಮುಚ್ಚಿ ಸುಮಧುರ ಕಂಠದಿಂದ ಸ್ಪಷ್ಟ ಉಚ್ಚಾರಣೆಯಿಂದ ಪಠಿಸಿದರು. ಒಂದು ಕಡೆ ವಿದ್ಯಾರ್ಥಿಗಳಿದ್ದರು, ಮತ್ತೊಂದೆಡೆ ಗುರುಗಳಿದ್ದರು. ಮೊದಲ ಪಂಕ್ತಿಯಲ್ಲಿದ್ದ ಮೂವರು ಅತ್ಯಂತ ಹಿರಿಯರು. ಆ ಮೂವರಲ್ಲಿ ಒಬ್ಬ ಎಷ್ಟು ಹಿರಿಯನೆಂದರೆ ಈಗಿನ ರಾಜನಿಗೂ ಅವನೇ ಗುರುವಾಗಿದ್ದ. ಗುರುಗೀತಾನಂತರ - ಥಾಯ್‌ನಲ್ಲೂ ಸಹ ಗುರುವಿಗೆ ಅದೇ ಶಬ್ದವಿದೆ. ಗುರು ಮತ್ತು ಆಚಾರ್ಯರನ್ನು ಖ್ರೂ ಮತ್ತು ಅಚ್ರನ್ - ವಿದ್ಯಾರ್ಥಿಗಳು ಒಬ್ಬೊಬ್ಬರಾಗಿ ಬಂದು ಹೂವಿನ ಬುಟ್ಟಿಗಳನ್ನು ನೀಡಿದರು. ನಂತರ ಊದುಬತ್ತಿ ಮತ್ತು ಮೇಣದ ಬತ್ತಿಗಳನ್ನು ನೀಡಿದರು. ಅದನ್ನು ಒಬ್ಬ ಗುರುವು ಮುಟ್ಟಿ ಅದನ್ನು ಸ್ವೀಕರಿಸುವಂತೆ ಮಾಡಿ ತನ್ನ ಹಣೆಯ ಮೇಲೆ ತಿಲಕವನ್ನಿಟ್ಟುಕೊಳ್ಳುತ್ತಿದ್ದರು. ಅದು ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿಗಳ ಸಂಕೇತವೆಂದು. ಅನಂತರ ವಿದ್ಯಾರ್ಥಿ ಎರಡನೇ ಗುರುವಿಗೆ ಅದನ್ನು ನೀಡುತ್ತಿದ್ದ ಅವನು ಬಿಳಿಯದಾರವನ್ನು ರಕ್ಷಾಬಂಧನದಂತೆ ಶಿಷ್ಯನ ಕೈಗೆ ಕಟ್ಟುತ್ತಿದ್ದ. ಅನಂತರ ಶಿಷ್ಯ ಮೂರನೇ ಗುರುವಿನ ಬಳಿ ಬಂದು ತಿನ್ನಲು ಕುದಿಸಿದ ಮೊಟ್ಟೆಯನ್ನು ಕೊಡುತ್ತಿದ್ದ. ಪ್ರತಿಯೊಬ್ಬ ವಿದ್ಯಾರ್ಥಿಯೂ ಈ ರೀತಿ ಮಾಡಿದ ನಂತರ ಕಾರ್ಯಸಂಪನ್ನವಾಯಿತು.

ಭಾರತೀಯ ಭೂಮಿಯಿಂದ ಹೊರಗೆ ಆ ಪ್ರಕ್ರಿಯೆಯನ್ನು ನೋಡುವುದು ನಿಜಕ್ಕೂ ಒಂದು ಅಪೂರ್ವವಾದ ಅನುಭವವಾಗಿತ್ತು.

ಗುರುವು ಎಷ್ಟು ಸ್ಫೂರ್ತಿದಾಯಕನೆಂದರೆ ಅವನ ಪ್ರತಿಮೆಯೂ ಸಹ ಶಿಷ್ಯನಿಗೆ ಕಲಿಯಲು ಉತ್ತೇಜಿಸುತ್ತಿತ್ತು. ಮಹಾಭಾರತದಲ್ಲಿ ಬರುವ ಏಕಲವ್ಯನ ಕಥೆ ಕೇವಲ ಒಂದು ನಿದರ್ಶನ ಮಾತ್ರ.

ಬೇಡರ ರಾಜನಾದ ಹಿರಣ್ಯ ಧನುಷನ ಮಗನಾದ ಏಕಲವ್ಯ ದ್ರೋಣರ ಅಸ್ತ್ರ ವಿದ್ಯಾಕೌಶಲ್ಯವನ್ನು ಕಂಡು ಅವರಿಂದ ಅಸ್ತ್ರವಿದ್ಯೆ ಕಲಿಯಲು ಅವರ ಬಳಿ ಬಂದಾಗ ದ್ರೋಣರು ಅದಕ್ಕೆ ನಿರಾಕರಿಸಿದಾಗ ಅವನು ಬೇಡರ ಮಗನೆಂದು ಮಿಕ್ಕಶಿಷ್ಯರು ಉತ್ತಮ ಜಾತಿಯ ಕೌರವರೆಂದೂ ಭಾವಿಸಿ ಅಭ್ಯಾಸ ಮಾಡಲಾರಂಭಿಸಿದ. ಒಮ್ಮೆ ದ್ರೋಣರ ಅನುಮತಿ ಪಡೆದು ಕೌರವ, ಪಾಂಡವರು ಕಾಡಿಗೆ ಬೇಟೆಗಾಗಿ ತೆರಳಿದರು. ಅವರೊಡನೆ ಒಬ್ಬ ಸೇವಕನೂ ಬೇಟೆಗೆ ಬೇಕಾದ ವಸ್ತು ಹಾಗೂ ನಾಯಿಯೊಂದಿಗೆ ತೆರಳಿದನು. ಅವರು ಬೇಡರವನ ಬಳಿಬಂದಾಗ ನಾಯಿ ಬೊಗಳತೊಡಗಿತು. ಅದನ್ನು ಸುಮ್ಮನಾಗಿಸಲು ಏಕಕಾಲದಲ್ಲಿ ಏಳು ಬಾಣಗಳನ್ನು ಆ ಬೇಡರವ ಬಿಟ್ಟ. ಆ ದೃಶ್ಯವನ್ನು ನೋಡಿ ಪಾಂಡವರಿಗೆ ಆಶ್ಚರ್ಯವಾಯಿತು. ಅದನ್ನು ನೋಡಲು ಅವರು ಕುತೂಹಲದಿಂದ ಬಂದಾಗ ಆ ಬೇಡ ಅಭ್ಯಾಸ ಮಾಡುತ್ತಿದ್ದುದನ್ನು ಕಂಡರು. ಅವನು ತಾನು ದ್ರೋಣರ ಶಿಷ್ಯನೆಂದು ಪರಿಚಯಿಸಿಕೊಂಡ. ಇದರಿಂದ ಅರ್ಜುನನಿಗೆ ಅತ್ಯಂತ ಬೇಸರವಾಯಿತು. ಏಕೆಂದರೆ ದ್ರೋಣರು ಅವನಿಗೆ ಶ್ರೇಷ್ಠಬಿಲ್ಲುಗಾರನನ್ನಾಗಿ ಮಾಡುವುದಾಗಿ ಮಾತುಕೊಟ್ಟಿದ್ದನು. ಅದನ್ನು ದ್ರೋಣರಿಗೆ ಅರ್ಜುನ ಹೇಳಿದಾಗ ದ್ರೋಣರಿಗೆ ಆಶ್ಚರ್ಯವಾಯಿತು. ತಾವು ಯಾರಿಗೂ ಆ ಕಾಡಿನಲ್ಲಿ ಕಲಿಸಿಲ್ಲವೆಂದು. ಅವರು ಅರ್ಜುನನೊಂದಿಗೆ ಬಂದು ನೋಡಿದಾಗ ಆ ಬೇಡ

ತನ್ನ ಪ್ರತಿಮೆಯ ಮುಂದೆ ಅಭ್ಯಾಸ ಮಾಡುತ್ತಿರುವುದನ್ನು ಕಂಡರು. ಆಗ ಏಕಲವ್ಯ ಅವರಿಗೆ ನಮಸ್ಕರಿಸಿದ ಮತ್ತು ಶಿಷ್ಯನೆಂದು ನಿವೇದಿಸಿಕೊಂಡ. ಹಾಗಿದ್ದರೆ ಗುರುದಕ್ಷಿಣೆ ಕೊಡೆಂದರು ದ್ರೋಣರು. ತಾವು ಕೇಳುವುದನ್ನು ಕೊಡುವೆನೆಂದ ಏಕಲವ್ಯ. ಆಗ ದ್ರೋಣರು ಅವನ ಬಲಗೈ ಹೆಬ್ಬೆರಳನ್ನು ಕೇಳಿದರು. ಅದು ಏಕಲವ್ಯನಿಗೆ ಆಶ್ಚರ್ಯವುಂಟುಮಾಡಿದರೂ ಅವನು ಹಿಂಜರಿಯಲಿಲ್ಲ. ಕೂಡಲೇ ಅವನು ಹೆಬ್ಬೆರಳನ್ನು ಕತ್ತರಿಸಿಕೊಟ್ಟಿದ್ದರಿಂದ ಅಂದಿನಿಂದ ಅವನು ಬಾಣಕಲೆಯನ್ನು ಬಿಡಬೇಕಾಯಿತು. ಆದರೆ ದ್ರೋಣರು ಅರ್ಜುನನಿಗೆ ಶ್ರೇಷ್ಠ ಬಿಲ್ಗಾರನನ್ನಾಗಿ ಮಾಡುವೆನೆಂದು ಕೊಟ್ಟ ಮಾತನ್ನು ಉಳಿಸಿಕೊಳ್ಳುವ ಹಾಗಾಯಿತು. ಇಂತಹ ಗುರುಭಕ್ತಿಗೆ ಇತಿಹಾಸದಲ್ಲೇ ಸರಿ ಸಾಟಿಯಾದ ಮತ್ತೊಂದು ನಿದರ್ಶನವಿಲ್ಲ. ಇದರಿಂದ ಏಕಲವ್ಯ ಆದರ್ಶ ಗುರುಭಕ್ತ ಎಂಬ ಕೀರ್ತಿಗೆ ಪಾತ್ರನಾದ.

ಗುರುಭಕ್ತಿ ಎಷ್ಟು ಅಗಾಧವಾದದ್ದೆಂದರೆ ಪಂಡಿತರು ತಮ್ಮ ಒಳ್ಳೆಯ ಕೆಲಸನವನ್ನು ಗುರುಗಳಿಗೆ ಸಮರ್ಪಿಸುತ್ತಾರೆ. ಆದಕ್ಕೆ ವಿರುದ್ಧವಾದುದನ್ನು ತಮಗೇ ಸಂಬೋಧಿಸಿಕೊಳ್ಳುತ್ತಾರೆ :-

ಯದ್ ಅತ್ರ ಸೌಷ್ಠವಂ ಕಿಂಚಿತ್ ತದ್ ಗುರೋರೇವ ಮೇ ನಹಿ ।
ಯದ್ ಅತ್ರಾಸೌಷ್ಠವಂ ಕಿಂಚಿತ್ ತನ್ ಮಮೈವ ಗುರೋರ್ನಹಿ ॥

ಇಂತಹ ಗುರುಭಕ್ತಿಯೇ ಸುಪ್ರಸಿದ್ಧ ವಯ್ಯಾಕರಣ ದಾರ್ಶನಿಕ ಭರ್ತೃಹರಿಗೆ ತನ್ನ ಕೃತಿ ಗುರುಗಳಿಗೆ ಸಮರ್ಪಿಸಲು ಕಾರಣವಾಯಿತು.

ನ್ಯಾಯ ಪ್ರಸ್ಥಾನ ಮಾರ್ಗಾನ್‌ಸ್ತಾನ್ ಅಭ್ಯಸ್ಯ ಸ್ವಂಚ ದರ್ಶನಂ ।
ಪ್ರಣೀತೋ ಗುರುಣಾಽಸ್ಮಾಕಂ ಅಯಮಾಗಮ ಸಂಗ್ರಹಃ ॥[4]

ಸಂಸ್ಕೃತ ಸಾಹಿತ್ಯದಲ್ಲಿ ಶಿಷ್ಯರ ಸಮಗ್ರ ಹಾಗೂ ಪ್ರಶ್ನಾತೀತ ಗುರುಭಕ್ತಿಗೆ ಅನೇಕ ಉದಾಹರಣೆಗಳಿವೆ. ಮಹಾಭಾರತದಲ್ಲಿ ಉಲ್ಲಿಖಿತವಾಗಿರುವ ಒಂದು ನಿದರ್ಶನ ಇಂತಿದೆ. ಅಪೋದಧೌಮ್ಯ ಎಂಬ ಗುರುವಿದ್ದ. ಅವನಿಗೆ ಉಪಮನ್ಯು, ಆರುಣಿ ಮತ್ತು ವೇದ ಎಂಬ ಮೂವರು ಶಿಷ್ಯರಿದ್ದರು. ಗುರು ಪಾಂಚಾಲವಾಸಿಯಾದ ಆರುಣಿಗೆ ಒಂದು ಗದ್ದೆಯಲ್ಲುಂಟಾಗಿರುವ ರಂಧ್ರದಿಂದ ನೀರು ಹರಿಯುವುದನ್ನು ನಿಲ್ಲಿಸಲು ಹೇಳಿದ. ಆರುಣಿ ಅದನ್ನು ನಿಲ್ಲಿಸಲಾಗಲಿಲ್ಲ. ಆಗ ಅವನು ತಾನೇ ಹೋಗಿ ಆ ನೀರಿಗೆ ಅಡ್ಡ ಮಲಗಿದ. ಅದರಿಂದ ನೀರು ಹರಿಯುವುದು ನಿಂತಿತು. ಸ್ವಲ್ಪ ಸಮಯದನಂತರ ಅಪೋದಧೌಮ್ಯ ಮಿಕ್ಕ ಶಿಷ್ಯರಲ್ಲಿ ಆರುಣಿಯ ಬಗ್ಗೆ ವಿಚಾರಿಸಿದನು. ಆಗ ಅವರು ತಾನೇ ಅವನನ್ನು ನೀರನ್ನು ನಿಲ್ಲಿಸಲು ಕಳುಹಿಸಿದೆ ಎಂದರು. ಅಲ್ಲಿಗೆ ಬಂದು ಅಪೋದಧೌಮ್ಯ ಕೂಗಿದರು – ಎಲ್ಲಿರುವೆ ಮಗು ಎಂದು. ಆದಕ್ಕೆ ಆರುಣಿ ಹೇಳಿದ – ನೀರನ್ನು ನಿಲ್ಲಿಸಲು ಸಾಧ್ಯವಾಗದೆ ತಾನೇ ಅದಕ್ಕೆ ಅಡ್ಡವಿರುವೆ ಎಂದು. ಆಗ ಗುರು ಹೇಳಿದ ನೀನು ನೀರಿಗೆ ಅಡ್ಡ ಬಂದದ್ದರಿಂದ ಇಂದಿನಿಂದ ನೀನು ಉದ್ದಾಲಕ ಎಂಬ ಹೆಸರಿನಿಂದ ಖ್ಯಾತನಾಗುವೆ. ಅವನಿಗೆ ವೇದ, ಧರ್ಮಶಾಸ್ತ್ರಗಳ ಪಾಂಡಿತ್ಯವುಂಟಾಗುತ್ತದೆ.

ಉಪಮನ್ಯು ಎಂಬ ಮತ್ತೊಬ್ಬ ಶಿಷ್ಯನಿಗೆ ಹಸುಗಳನ್ನು ನೋಡಿಕೊಳ್ಳುವಂತೆ ಗುರು ನುಡಿದ. ಅವನು ಹಾಗೇ ಮಾಡಿ ಸಂಜೆ ಹಿಂದಿರುಗಿದ. ಅವನಸ್ಥಿತಿ ಕಂಡು ನೀನು ಹೇಗೆ ಹೀಗಿರುವೆ ಎಂದು ಗುರು ಕೇಳಿದ. ''ತಿರುಪೆಯಿಂದ'' ಎಂದು ಅವನು ಉತ್ತರಿಸಿದ. ಅದಕ್ಕೆ ಗುರು ''ಅದು ಯುಕ್ತವಲ್ಲ'' ಎಂದರು. ನೀನು ನನಗೆ ಸಮರ್ಪಿಸದೆ ತಿರುಪೆಯನ್ನೂ ತೆಗೆದುಕೊಳ್ಳುವಂತಿಲ್ಲ. ಹಾಗೆ ಹೇಳಿದ ನಂತರ ಉಪಮನ್ಯು ಮತ್ತೆ ಹಸುಗಳನ್ನು ಕಾಯಲಾರಂಭಿಸಿದ. ಮರುದಿನ ಗುರುವು ಅವನ ಒಳ್ಳೆಯ ದೇಹಸ್ಥಿತಿ ಗಮನಿಸಿದರು. - ನೀನು ಹೇಗೆ ಹೀಗಿರುವೆಯೆಂದರು. ಅದಕ್ಕೆ ಶಿಷ್ಯ ಭಿಕ್ಷೆಬೇಡಿ ಎಂದು ಉತ್ತರಿಸಿದ. ಗುರುಗಳು ಅದಕ್ಕೂ ಸಮ್ಮತಿಸಲಿಲ್ಲ. ಮತ್ತೆ ಅದನ್ನೂ ಕೇಳಿ ಉಪಮನ್ಯು ಹಸು ಕಾಯಲು ಹಿಂದಿರುಗಿದ. ಸಂಜೆ ಗುರು ಮತ್ತೆ ಅದೇ ಪ್ರಶ್ನೆ ಕೇಳಿದಾಗ ಉಪಮನ್ಯು ಹೇಳಿದ ನಾನು ಹಸುವಿನ ಹಾಲಿನಿಂದ ಹಾಗಿದ್ದೇನೆಂದು. ಅದನ್ನು ಗುರು ನಿರಾಕರಿಸಿದರು. ಮತ್ತೆ ಅವನು ಹಿಂದಿರುಗಿದಾಗ ಗುರು ಕೇಳಿದ ಪ್ರಶ್ನೆಗೆ ಉಪಮನ್ಯು ಉತ್ತರಿಸಿದ. ಕರುಗಳು ಹಾಲು ಕುಡಿಯುವಾಗ ಏನನ್ನು ಚೆಲ್ಲುತ್ತದೆಯೋ ತಾನು ಅದನ್ನು ಕುಡಿದೆನೆಂದ ಉಪಮನ್ಯು. ಗುರು ಅದೂ ಸರಿಯಿಲ್ಲವೆಂದ. ಏಕೆಂದರೆ ಅದರಿಂದ ಕರುಗಳಿಗೆ ಸಂಪೂರ್ಣವಾಗಿ ಹಾಲು ಸಿಗುತ್ತಿಲ್ಲ. ಈಗ ಏನೂ ಇಲ್ಲದೆ ಅರ್ಕವೃಕ್ಷದ ಎಲೆತಿಂದು ಉಪಮನ್ಯು ತನ್ನ ಕಣ್ಣನ್ನು ಕಳೆದುಕೊಂಡ. ಅವನು ಕಣ್ಣುಕಾಣದೆ ಒಂದು ಹಳ್ಳಕ್ಕೆ ಬಿದ್ದ-ಸಂಜೆಯಾಯಿತು. ಉಪಮನ್ಯುವನ್ನು ಕಾಣದೆ ಮಿಕ್ಕ ಶಿಷ್ಯರೊಂದಿಗೆ ಗುರು ಅವನನ್ನು ಹುಡುಕಿಕೊಂಡು ಕಾಡಿಗೆ ಬಂದ. ಗುರು ಗಟ್ಟಿಯಾಗಿ ಕೂಗಿದ. ಆಗ ನಡೆದದ್ದನ್ನೆಲ್ಲಾ ವರ್ಣಿಸಿ ಉಪಮನ್ಯು ತಾನು ಹಳ್ಳದಲ್ಲಿರುವುದಾಗಿ ತಿಳಿಸಿದ. ಆಗ ಗುರು ಅಶ್ವಿನೀ ದೇವತೆಗಳನ್ನು ಕುರಿತು ಪ್ರಾರ್ಥನೆ ಮಾಡುವಂತೆ ಹೇಳಿದರು. ಆಗ ಅವರು ಅತ್ಯಂತ ಸುಪ್ರೀತರಾಗಿ ಅವನಿಗೆ ಅಪೂಪವನ್ನು ಕೊಟ್ಟರು. ಅವನು ಅದಕ್ಕೆ ಒಪ್ಪಲಿಲ್ಲ. ಗುರುಗಳಿಗೆ ಮೊದಲು ಅದನ್ನು ಸಮರ್ಪಿಸಬೇಕೆಂದ. ಅದರಿಂದ ಸಂತುಷ್ಟರಾದ ಅಶ್ವಿನೀ ದೇವತೆಗಳು ಅವನಿಗೆ ಕಣ್ಣನ್ನು ಕೊಡುವುದರೊಂದಿಗೆ ಕಪ್ಪಾದ ಕಬ್ಬಿಣದ ಅವನ ಹಲ್ಲನ್ನು ಚಿನ್ನವನ್ನಾಗಿ ಮಾರ್ಪಡಿಸಿದರು. ಆಗ ಅರುಣಿಗೆ ಆಶೀರ್ವಾದ ಮಾಡಿದಂತೆಯೇ ಗುರುಗಳು ಇವನನ್ನೂ ಆಶೀರ್ವದಿಸಿದರು.

ಈಗ ಮೂರನೆಯ ಶಿಷ್ಯನಾದ ವೇದನ ಸರದಿ. ತನ್ನ ಮನೆಯಲ್ಲಿದ್ದು ಬಹಳಕಾಲದವರೆಗೆ ಬಿಸಿಲು, ಚಳಿ, ಹಸಿವೂ, ಬಾಯಾರಿಕೆಗಳನ್ನು ತಡೆದುಕೊಂಡು ಯಾವ ಗೊಣಗುವಿಕೆಯೂ ಇಲ್ಲದೆ ಗೋಣಿಗೆ ಕಟ್ಟಿದ ಎತ್ತಿನಂತೆ ನಿರಂತರ ಸೇವೆಯಿಂದ ಗುರುವಿನಿಂದ ಅನುಗ್ರಹಕ್ಕೆ ಪಾತ್ರನಾಗಿ ಅಪಾರವಾದ ಜ್ಞಾನವನ್ನು ಪಡೆದ. ಮತ್ತೊಂದು ನಿದರ್ಶನವೆಂದರೆ ಗುರುಶಿಷ್ಯರಾದ ಪ್ರಭಾಕರ ಮಿಶ್ರ ಹಾಗೂ ಕುಮಾರಿಲಭಟ್ಟರದು. ಇಬ್ಬರೂ ಮೀಮಾಂಸಾಶಾಸ್ತ್ರದ ದಿಗ್ಗಂತಿಗಳೇ. ಕುಮಾರಿಲಭಟ್ಟರು ಪ್ರಭಾಕರರ ಅನೇಕ ಮೀಮಾಂಸಾ ವಾದಗಳನ್ನು ನಿರಾಕರಿಸಿದರು. ಅದರಿಂದ ಜಿಗುಪ್ಸೆಗೊಂಡು ತಾವು ತುಶಾಗ್ನಿಯನ್ನು ಪ್ರವೇಶಿಸಿ ಸಜೀವ ದಹನಕ್ಕೆ ಮುಂದಾದರು. ಒಂದು ಕಡೆ ತನ್ನ ಗುರುವಿನಿಂದ ಕಲಿತದ್ದನ್ನೇ ನಿರಾಕರಿಸಿದ್ದಕ್ಕೆ ಪ್ರಾಯಶ್ಚಿತ್ತ ಮತ್ತೊಂದೆಡೆ ಅವನ ಆತ್ಮಪ್ರಜ್ಞೆಯ ನಿಷ್ಠೆ. ಮಿಕ್ಕ ಯಾವುದಾದರೂ ಸಂಸ್ಕೃತಿಯಲ್ಲಿ ಇಂತಹ ನಿದರ್ಶನ ಸಿಗಲು ಸಾಧ್ಯವೇ? ಇದು ಭಾರತಕ್ಕೇ ಮೀಸಲಾದ ಮೌಲ್ಯ.

ಈ ಹಿನ್ನಲೆಯಲ್ಲಿ ಈ ಗ್ರಂಥಕರ್ತ ತನ್ನದೇ ಅನುಭವಗಳನ್ನು ಹೇಳಲಿಚ್ಚಿಸುತ್ತಾರೆ. ಬನಾರಸ್ ವಿಶ್ವವಿದ್ಯಾಲಯದಲ್ಲಿ ''ವಾಕ್ಯಪದೀಯದಲ್ಲಿ ಕಾಲ ಮತ್ತು ದೇಶ'' ಎಂಬ ವಿಷಯದ ಬಗ್ಗೆ ಪ್ರೌಢ ಪ್ರಬಂಧ ಬರೆಯುತ್ತಿದ್ದರು. ಅದಕ್ಕಾಗಿ ವಾಕ್ಯಪದೀಯದ ಒಳ್ಳೆಯ ಜ್ಞಾನ ಬೇಕಾಗಿತ್ತು. ಅದು ಸಂಸ್ಕೃತದಲ್ಲಿ ಅತ್ಯಂತ ಕ್ಲಿಷ್ಟವಾದ ವ್ಯಾಕರಣ ಕೃತಿಯೂ ಹೌದು. ವಾರಣಾಸಿಯಲ್ಲಿ ಕೇವಲ ಪಂಡಿತ ರಘು ನಾಥಶರ್ಮಾ ಪಾಂಡೇಯ ಅದನ್ನು ಬೋಧಿಸಲು ಸಮರ್ಥರಾಗಿದ್ದರು. ಅವರು ಅನಂತರ ''ಅಂಬಕರ್ತ್ರಿ'' ಎಂಬ ವಿಸ್ತೃತ ವ್ಯಾಖ್ಯಾನವನ್ನು ಅದರ ಮೇಲೆ ಬರೆದು ಅಮರರಾದರು. ಕಬೀರ್‌ಚಾರ ಎಂಬಲ್ಲಿ ಒಂದು ಮಠದಲ್ಲಿ ಅವರು ವಾಸವಾಗಿದ್ದರು. ಡೇ ಹಾಸ್ಟೆಲ್ ಎನ್ನುವುದು ವಿಶ್ವವಿದ್ಯಾಲಯದ ಕೊನೆಯ ವಸತಿಗೃಹ. ಆ ವಿಶ್ವವಿದ್ಯಾಲಯವಾದರೋ ಅನೇಕ ಮೈಲಿ ವಿಸ್ತೀರ್ಣವಾಗಿದ್ದು ಬಹಳ ದೊಡ್ಡದಾಗಿದೆ. ಅವರೊಂದಿಗೆ ಸಂಪರ್ಕ ಬೆಳೆಸಲಿದ್ದ ಏಕೈಕ ಸಾಧನ ಮಧ್ಯಮವರ್ಗದ ಜನರಿಗೆಂದರೆ ಸೈಕಲ್. ಅದನ್ನು ತಮಗೆ ದೊರೆಯುತ್ತಿದ್ದ ವಿದ್ಯಾರ್ಥಿವೇತನದಲ್ಲಿ ಉಳಿಸಿಕೊಂಡಿದ್ದರು. ಒಂದು ದಿನ 15 ಕಿ.ಮೀ ದೂರವನ್ನು ಸೈಕಲಿನಲ್ಲಿ ಹೋಗಿದ್ದರು. ಗುರುಗಳನ್ನು ಕಾಣಲು ಹೋಗಿ ತಮಗೆ ವಾಕ್ಯಪದೀಯ ಬೋಧಿಸಲು ಕೇಳಿದರು. ಅದಕ್ಕೆ ಅವರು ಮರುದಿನ ಮಧ್ಯಾಹ್ನ 2 ಘಂಟೆಗೆ ಬರಲು ಹೇಳಿದರು. ಅದಕ್ಕನುಗುಣವಾಗಿ ಅವರು ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋದರು. ಅವರು ಮಲಗಿದ್ದರು. 4 ಘಂಟೆಗೆ ಎದ್ದು ನಾಳೆ 2 ಘಂಟೆಗೆ ಬಾ ಎಂದರು. ಮರುದಿನ ಆ ಹೊತ್ತಿಗೆ ಹೋದಾಗ ಅವರು ನಮ್ಮ ಊಟದ ತಯಾರಿಯಲ್ಲಿದ್ದರು. ಆಗ ಅವರೆಂದರು – ನಾನು ನನ್ನ ಅಡಿಗೆ ಸಿದ್ಧ ಮಾಡುತ್ತಿರುವೆ. ಅನಂತರ ಊಟ ಮಾಡಬೇಕು. ಅನಂತರ ಸ್ವಲ್ಪ ವಿಶ್ರಾಂತಿ. ಈ ದಿನ ಸಾಧ್ಯವಾಗುವುದಿಲ್ಲ, ನಾಳೆ ಬಾ, ಆದರೆ 2 ಘಂಟೆಗೆ ಸರಿಯಾಗಿ ಬರಬೇಕು. ಮರುದಿನ ಅವರನ್ನು ರಸ್ತೆಯಲ್ಲಿ ಕಂಡರು. ಇಂದು ನಾನು ಎಲ್ಲೋ ಹೋಗಬೇಕಾಗಿದೆ. ಅದು ಮುಖ್ಯವಾದ ಕೆಲಸ. ನಾಳೆ 2 ಘಂಟೆಗೆ ಬಾ. ಮರುದಿನ ಹೋದಾಗ ಹೇಳಿದರೆ ನನಗೆ ಆರೋಗ್ಯವಿಲ್ಲ, ಮರುದಿನ 2 ಘಂಟೆಗೆ ಬಾ. 24–25 ಮೈಲಿ ಬಂದದ್ದು ದಂಡವಿಲ್ಲವೆಂದು ಭಾವಿಸಿ ಮತ್ತೆ ಹಿಂದಿರುಗಿದರು. ಅದು 5ನೇ ದಿನವಾಗಿತ್ತು. ಮರುದಿನ ಹೋದಾಗ ಅವರು ಕಾಯುತ್ತಿದ್ದರು. ಅವರು 2 ಘಂಟೆಯಿಂದ 7ರವರೆಗೂ ಬೋಧಿಸಿದರು. ಈ ಗ್ರಂಥಕರ್ತ ಅತ್ಯಂತ ಶ್ರಮವಹಿಸಿದ್ದರೂ ಅವರು ನಿಲ್ಲಿಸಲಿಲ್ಲ. ಆಗ ಕತ್ತಲಾಗುತ್ತಿತ್ತು. ಒಂದು ದೀಪ ಪ್ರಜ್ವಲಿಸಲಾಯಿತು. ಪಾಠ ಮುಂದುವರೆಯಿತು. ಆಗ ಗ್ರಂಥಕರ್ತರು ಹೇಳಿದರು. ತಾವು ದಣಿವಿರಬೇಕು. ತಾನು ದಣಿದಿರುವೆನೆಂದು ಹೇಗೆ ತಾನೇ ಹೇಳುವುದು. ಈಗ ನಾವು ನಿಲ್ಲಿಸಬಹುದು. ನಾನು ದಣಿದಿಲ್ಲ ಮುಂದುವರೆಸುವೆ ಎಂದರವರು. ಅನಂತರ ಸ್ವಲ್ಪ ಸಮಯದ ನಂತರ ಈ ಎಳೇ ವಯಸ್ಸಿನಲ್ಲಿ ವಾಕ್ಯಪದೀಯದಂತಹ ಕ್ಲಿಷ್ಟಗ್ರಂಥ ಕಠಿಣವಾಗಬಹುದೆಂದು ಭಾವಿಸಿ ಅವರು ಹೇಳಿದರು – ಇಂದಿಗೆ ಸಾಕು. ನಾಳೆ ಮುಂದುವರೆಸುವೆ ಪ್ರತಿನಿತ್ಯವೂ ಗ್ರಂಥಕರ್ತ ಬರುವುದನ್ನೇ ನಿರೀಕ್ಷಿಸುತ್ತಿದ್ದರು. ಪ್ರತಿದಿನವೂ ಗ್ರಂಥಕರ್ತರ ಓದುವ ಹಂಬಲ ಹಾಗೂ ಸ್ಥಿರತೆಯನ್ನು

ಪರೀಕ್ಷಿಸಿ ಅವರಿಗೆ ತೃಪ್ತಿಯಾದಾಗ ತಮ್ಮ ಜ್ಞಾನದ ಬಾಗಿಲನ್ನು ತೆರೆದರು ಈ ಸ್ಥಿತಿಗಮನಿಸಿದಾಗ ಗ್ರಂಥಕರ್ತರಿಗೆ ಕಣ್ಣೀರು ಬಂದು ಹೃದಯ ಗದ್ಗದವಾಗುವುದು. ಹಿಂದಿನ ಗುರುಗಳು ಶಿಷ್ಯರ ಸಾಮರ್ಥ್ಯವನ್ನು ಸರಿಯಾಗಿ ಪರೀಕ್ಷಿಸಿ ಅವರಿಗೆ ಧಾರೆಯೆರೆಯುತ್ತಿದ್ದರು – ಪಾತ್ರ ಪ್ರತಿಗತಾ ವಿದ್ಯಾ. ಸರಿಯಾದವರು ಸಿಗದಿದ್ದರೆ ಆ ಜ್ಞಾನವೂ ಅವರೊಂದಿಗೇ ಸಾಯುತ್ತಿತ್ತು. ಭಾರತದ ಜ್ಞಾನಭಂಡಾರ ಕ್ಷೀಣವಾಗಲು ಇದೂ ಒಂದು ಕಾರಣವಿರಬಹುದು.

ಸಂಸ್ಕೃತದಲ್ಲಿ ಅಧ್ಯಾಪಕರಿಗೆ ನಾಲ್ಕು ಪದಗಳಿದೆ :- ಗುರು, ಆಚಾರ್ಯ, ಉಪಾಧ್ಯಾಯ, ಶಿಕ್ಷಕ. ಗುರು ಹಾಗೂ ಆಚಾರ್ಯರನ್ನು ಮೇಲೆ ವಿವರಿಸಿದೆ. ಈಗ ಉಪಾಧ್ಯಾಯ ಹಾಗೂ ಶಿಕ್ಷಕರನ್ನು ವಿವರಿಸಲಾಗುತ್ತದೆ. ಉಪಾಧ್ಯಾಯರನ್ನು ಅರಸಿ ಹೋದರೆ ಯಾರಿಗೆ ಅಧ್ಯಯನ ಲಭಿಸುವುದೋ ಅವರು ಉಪಾಧ್ಯಾಯರು ಉಪೇತ್ಯ ಅಧೀಯತೇ ಯಸ್ಮಾತ್ ಇತ್ಯುಪಾಧ್ಯಾಯಃ ಅದೇ ಆ ಪದದನಿಷ್ಪತ್ತಿ. ಶಿಕ್ಷ್ ಎಂಬ ಧಾತುವಿನಿಂದ ಶಿಕ್ಷಕ ಎಂಬ ಪದವುಂಟಾಗುತ್ತದೆ. ಶಿಕ್ಷ ಎಂದರೆ ವಿದ್ಯಾಭ್ಯಾಸ. ಶಿಕ್ಷಕ ಎಂದರೆ ವಿದ್ಯೆಯನ್ನು ಬೋಧಿಸುವವನು. ಕಾಳಿದಾಸ ಆದರ್ಶ ಶಿಕ್ಷಕನಿಗಿರಬೇಕಾದ ಗುಣಗಳನ್ನು ವರ್ಣಿಸುತ್ತಾನೆ :-

ಶ್ಲಿಷ್ಟಾಕ್ರಿಯಾ ಕಸ್ಯಚಿದಾತ್ಮ ಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ ।
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾ ಪಯಿತವ್ಯ ಏವ ॥[5]

ಕೆಲವರು ಚೆನ್ನಾಗಿ ಓದಿರುತ್ತಾರೆ. ಮತ್ತೆ ಕೆಲವರಿಗೆ ಕಲಿಸುವ ಕಲೆ ಚೆನ್ನಾಗಿರುತ್ತದೆ. ಯಾರು ಎರಡರಲ್ಲೂ ಸಿದ್ಧಹಸ್ತರೋ ಅವರು ಗುರುಶ್ರೇಷ್ಠರು.

ವಿದ್ಯಾರ್ಥಿಗಳು ಗುರುಗಳಿಗೆ ವಿಧೇಯರಾಗಿರುವಂತೆಯೇ, ಗುರುವೂ ಸಹ ಅವರ ಬಗ್ಗೆ ಕಾಳಜಿಯಿರುವವನಾಗಿರಬೇಕು. ಗುರು ಶಿಷ್ಯರ ನಡುವೆ ಒಂದು ಅಪೂರ್ವವಾದ ಸಂಬಂಧವಿತ್ತು. ಗುರು ಬ್ರಹ್ಮಚಾರಿಯನ್ನು ಸ್ವೀಕರಿಸುತ್ತಿದ್ದ (ಮೊದಲಿಗೆ ಧಾರ್ಮಿಕ ಎಂಬರ್ಥದಲ್ಲಿ ಪ್ರಚಲಿತವಾಗಿದ್ದು ಅನಂತರ ವಿದ್ಯಾರ್ಥಿಯೆಂದಾಯಿತು) ನನ್ನ ಗರ್ಭದಲ್ಲಿರುವಂತೆಯೇ ಬ್ರಹ್ಮಚಾರಿಣಂ ಕುರುತೇ ಗರ್ಭಮಂತಃ. ಈ ರೂಪಕವು ಗುರುವನ್ನು ತಾಯಿಯೊಡನೆ ಪ್ರತಿಪಾದಿಸುತ್ತದೆ. ಹೇಗೆ ತಾಯಿ ಮಗು ಗರ್ಭದಲ್ಲಿರುವಾಗ ಕಾಪಾಡುವಳೋ ಮಗು ಹೊರಬರುವವರೆಗೇ ಹಾಗೆಯೇ ಗುರು ಗುರುಕುಲದಲ್ಲಿ ಶಿಷ್ಯನನ್ನು ಕಾಪಾಡುತ್ತಿದ್ದ. ಗುರು ತನ್ನ ದೈವೀಶಕ್ತಿಯಿಂದ ಶಿಷ್ಯರು ಎಲ್ಲೆಡೆಯಿಂದಲೂ ಬರುವಂತೆ ಮಾಡುತ್ತಿದ್ದ. ಆಮಾ ಯಾಂತು ಬ್ರಹ್ಮಚಾರಿಣಃ.

ಗುರು ಅತ್ಯಂತ ಶ್ರಮವಹಿಸಿ ಸತ್ಪಾತ್ರನಾದ ಶಿಷ್ಯನನ್ನು ಗುರುತಿಸಿ ಕಠಿಣದಲ್ಲಿ ಕಠಿಣವಾದ ಪರೀಕ್ಷೆಗಳಿಗೆ ಅವನನ್ನೊಡ್ಡಿ ಹಿಂದೆಯೇ ವರ್ಣಿಸಿರುವಂತೆ, ಹಿಂದೆ ಹೋಗುವುದೆಂಬುದೇ ಇರಲಿಲ್ಲ. ಅನಂತರ ತನ್ನ ಜ್ಞಾನದ ಬಾಗಿಲನ್ನು ತೆರೆದು ತನ್ನ

ವಿದ್ಯೆಯನ್ನೆಲ್ಲಾ ಅವನಿಗೆ ಧಾರೆಯೆರೆದು ಅವನು ತನ್ನನ್ನು ಮೀರಿಸುವಂತಾಲಿ ಎಂದು ಹಂಬಲಿಸುತ್ತಿದ್ದ :-

ಸರ್ವತೋ ಜಯಮನ್ವಿಚ್ಛೇದ್ ಶಿಷ್ಯಾದ್ ಇಚ್ಛೇದ್ ಪರಾಜಯಂ

ಬೇರೆಯವರ ಮೇಲೆ ಜಯಕ್ಕೋಸ್ಕರ ಹಂಬಲಿಸಬೇಕು. ಆದರೆ ಶಿಷ್ಯನಿಂದ ಪರಾಭವಗೊಳ್ಳಬೇಕು (ಇನ್ನೊಂದು ಪಾಠಾಂತರವೇ ಇದೆ - ಪುತ್ರಾದಿಚ್ಛೇತ್ ಪರಾಜಯಂ) ಮಗನಿಂದಲೇ ಪರಾಭವಗೊಂಡರೆ ತನಗೇ ಕೀರ್ತಿ, ಶಿಷ್ಯನ ಉತ್ಕರ್ಷ ಗುರುವಿಗೆ ಗೌರವ :- ಶಿಷ್ಯ ಪ್ರಕರ್ಷೋ ಯಶಸೇಗುರೂಣಾಮ್ ॥

ಶಾಸ್ತ್ರವು ಮೂರು ರೀತಿ ಜ್ಞಾನಪಡೆಯಬಹುದೆಂದು ತಿಳಿಸುತ್ತದೆ. ಗುರುಸೇವೆ ಮೊದಲನೆಯದು, ಅಧಿಕ ಹಣ ಎರಡನೆಯದು, ಮೂರನೆಯದು ವಿನಿಮಯ - ಅವರಿಗೆ ಒಂದನ್ನು ಕಲಿಸಿ, ಅವರಿಂದ ಒಂದನ್ನು ಪಡೆಯುವುದು :-

ಗುರು ಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ ।
ಅಥವಾ ವಿದ್ಯಯಾ ವಿದ್ಯಾ ಚತುರ್ಥೀ ನೈವ ವಿದ್ಯತೇ ॥[6]

ಈ ಮೂರೇ ವಿದ್ಯಾಸ್ಥಾನಗಳು. ನಾಲ್ಕನೆಯದಿಲ್ಲ. ಈ ಮೂರು ವಿಧವಾದ ಜ್ಞಾನ ಸಂಪಾದನೆಯಲ್ಲಿ ಗುರುಸೇವೆಗೆ ಆದ್ಯತೆ ನೀಡಲಾಗಿದೆ. ಮಿಕ್ಕೆರಡೂ ಸಹ ಒಂದು ಜಾತಿಯವರಿಗೆ, ಒಂದು ವರ್ಗದವರಿಗೆ ಅದು ರಾಜಮನೆತನದವರು ಗುರುಗಳನ್ನು ನೇಮಿಸಿ ಅವರಿಗೆ ಸಾಕಷ್ಟು ಹಣ ನೀಡಿ ರಾಜಪಂಡಿತ ಎಂಬ ಬಿರುದನ್ನು ಅವರಿಗೆ ನೀಡುತ್ತಿದ್ದರು. ಆದರೆ ಸಾಮಾನ್ಯ ಸಮಾಜಕರಿಗೆ ಕಡಿಮೆ ಆಸೆಗಳುಳ್ಳ ತನ್ನನ್ನು ತಾನು ಹೊಗಳಿಕೊಳ್ಳದೆ ಜ್ಞಾನಭಂಡಾರವಾಗಿದ್ದವರು. ಸಮಾಜವೇ ಅಂತಹ ಗುರುಗಳ ಆದ್ಯತೆಯನ್ನು ಗಮನಿಸಿ, ವಿದ್ಯಾರ್ಥಿಗಳಿಂದ ಏನನ್ನೂ ಬಯಸದೆ ನೋಡಿಕೊಳ್ಳುತ್ತಿದ್ದರು. ಶುಶ್ರೂಷಾ ಎಂಬ ಪದವು ''ಗುರುಶುಶ್ರೂಷಯಾ'' ಎಂಬ ಶ್ಲೋಕದಲ್ಲಿ ವಿಶೇಷವಾಗಿ ಗಮನಿಸಬೇಕು. ಅದು ಅಕ್ಷರಶಃ ಅರ್ಥೈಸಿದರೆ ಕೇಳುವ ಇಚ್ಛೆ ಶ್ರು ಧಾತುವಿನಿಂದ ನಿಷ್ಪನ್ನವಾಗಿದ್ದುದಾಗಿರುತ್ತದೆ. ''ಸ'' ಎಂಬುದು ಅಂತ್ಯ ಪ್ರತ್ಯಯವು. ಈ ಆಸೆಯು ಕೇವಲ ಗುರು ಶುಶ್ರೂಷೆಯಿಂದ ಮಾತ್ರವೇ ಸಾಧ್ಯ. ಅದರಿಂದ ಅದು ಸೇವೆ ಎಂದಾಯಿತು. ಮೂರನೆಯ ವಿಧವಾದ ಕಲಿಕೆ ವಿನಿಮಯ ಎಂದರೆ ಯಾರು ಒಂದು ಮಟ್ಟದ ಜ್ಞಾನಗಳಿಸಿರುವರೋ ಇನ್ನೂ ಹೆಚ್ಚಾಗಿ ಪಡೆಯಬೇಕೆಂಬ ಉತ್ಸುಕರಾಗಿರುವರೋ ಅದನ್ನು ಜ್ಞಾನದ ಬೇರೆ ಕ್ಷೇತ್ರಗಳಿಗೂ ವಿಸ್ತರಿಸುವುದು.

---

ಆಕರಗಳು

1) ಗುರುಗೀತಾ.25ನೇ ಶ್ಲೋಕ 2) ಅಥರ್ವವೇದ.11.7 3) ಮಹಾಭಾರತ.ಆದಿಪರ್ವ. 132ನೇ ಅಧ್ಯಾಯ 4) 2.484 5) ಮಾಲವಿಕಾಗ್ನಿಮಿತ್ರ.1.16 5) ವಿಷ್ಣುಸ್ಮೃತಿ.73.12 6) ಸುಭಾಷಿತ ರತ್ನ ಭಂಡಾಗಾರ. ಸಾಮಾನ್ಯನೀತಿ.1.65.257

# 28. ಇಂದ್ರಿಯ ನಿಗ್ರಹ

ಭಾರತೀಯ ಪರಂಪರೆಯಲ್ಲಿ ಇಂದ್ರಿಯ ನಿಗ್ರಹಕ್ಕೆ ಹೆಚ್ಚಾದ ಒತ್ತನ್ನು ನೀಡಲಾಗಿದೆ. ಅದು ಯುಕ್ತವೇ ಆಗಿದೆ. ಪರಮಾತ್ಮನು ಗೀತೆಯಲ್ಲಿ ಹೇಳಿರುವಂತೆ ಅದು ಅತ್ಯಂತ ಚಂಚಲವಾದುದು - ''ಪ್ರಮಾಥೀನಿ'' ಮತ್ತು ಮನಸ್ಸನ್ನು ಬೇರೆಡೆಕೊಂಡೊಯ್ಯುತ್ತದೆ ''ಪ್ರಸಾದಂ'' ಮಾನವ ಎಷ್ಟೋ ಜಾಗರೂಕನಾಗಿದ್ದರೂ ಸಹ ''ವಿಪಶ್ಚಿತಃ'' ಯಾರು ಇಂದ್ರಿಯದ ಮೇಲೆ ಹಿಡಿತವುಳ್ಳವರಾಗಿರುವರೋ ಅಂತಹವರ ಬುದ್ಧಿ ನಿಶ್ಚಲವಾಗಿರುವುದೆಂದು ಭಗವಂತನೇ ನುಡಿದಿದ್ದಾನೆ - ತಸ್ಯ ಪ್ರಜ್ಞಾ ಪ್ರತಿಷ್ಠಿತಾ. ಇಂದ್ರಿಯ ನಿಗ್ರಹ ಬುದ್ಧಿವಂತಿಕೆಯಲ್ಲ ಅದು ನಮ್ಮ ಭಾವನೆ ಹಾಗೂ ಮನೋದಾರ್ಢ್ಯ.

ಧರ್ಮದ ಹತ್ತು ಅಂಶಗಳಲ್ಲಿ ಇಂದ್ರಿಯ ನಿಗ್ರಹವೂ ಒಂದೆಂದೂ ಅದು ಎಲ್ಲರಿಗೂ ಸಾರ್ವತ್ರಿಕವಾದುದೆಂದೂ ಹೇಳಲಾಗಿದೆ. ಮನುಸ್ಮೃತಿಯ ವ್ಯಾಖ್ಯಾನಕಾರ ಕುಲ್ಲೂಕಭಟ್ಟ ವಿವರಿಸುವಂತೆ - ವಿಷಯೇಭ್ಯಃ ಚಕ್ಷುರಾದಿ ವಾರಣಂ ಇಂದ್ರಿಯ ನಿಗ್ರಹಃ - ಕಣ್ಣೇ ಮೊದಲಾದ ಇಂದ್ರಿಯಗಳನ್ನು ವಿಷಯಗಳಿಂದ ಹಿಂದಿರುಗಿಸುವುದು. ಅದು ಕೇವಲ ದೃಢ ದಾರ್ಢ್ಯದಿಂದ ಮಾತ್ರವೇ ಸಾಧ್ಯ. ಅನೇಕ ವರ್ಷ ತಪಸ್ಯೆಯಿಂದಂತಹ ಮುನಿಗಳಿಗೇ ಅದು ಸಾಧ್ಯವಾದುದು. ಭರ್ತೃಹರಿ ಇದನ್ನು ಗಮನಿಸಿ ತನ್ನ ಶೃಂಗಾರ ಶತಕದಲ್ಲಿ ನಿರೂಪಿಸಿದ್ದಾನೆ :

ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬು ಪರ್ಣಾಶನಾಃ
ತೇಽಪಿ ಸ್ತ್ರೀ ಮುಖ ಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂ ಗತಾಃ ।
ಶಾಲ್ಯನಂ ಸಘೃತಂ ಪಯೋದಧಿಯುತಂ ಭುಂಜತೇಯೇ ಮಾನವಾಃ
ತೇಷಾಂ ಇಂದ್ರಿಯನಿಗ್ರ ಹೋಯದಿ ಭವೇದ್ ವಿಂಧ್ಯಸ್ತರೇತ್ಸಾಗರೇ ॥[1]

ವಿಶ್ವಾಮಿತ್ರ, ಪರಾಶರ ಮುಂತಾದ ಮುನಿಗಳು ಗಾಳಿ, ನೀರು ಒಣಗಿದ ಎಲೆಗಳನ್ನು ಸೇವಿಸುತ್ತಾ ಇದ್ದರೂ ಸುಂದರಿಯರ ಕಮಲ ಸದೃಶವಾದ ಮುಖ ನೋಡಿದಾಗ ಇಂದ್ರಿಯ ನಿಗ್ರಹವನ್ನು ಕಳೆದುಕೊಂಡರೆ. ಸಾಮಾನ್ಯರು ಅನ್ನದೊಂದಿಗೆ ತುಪ್ಪ, ಹಾಲು, ಮೊಸರು ಸೇವಿಸಿ ಇಂದ್ರಿಯನಿಗ್ರಹ ಪಡೆದರೆ ವಿಂಧ್ಯಪರ್ವತ ಸಮುದ್ರದಲ್ಲಿ ಮುಳುಗಿದಂತೆಯೇ ಸರಿ.

ಅಶ್ವಘೋಷ ಹೇಳುವಂತೆ ಶತ್ರುವಿನಿಂದ ತೊಂದರೆಯನ್ನನುಭವಿಸಬಹುದು ಅಥವಾ ಇಲ್ಲ ಆದರೆ ಪ್ರತಿಯೊಬ್ಬರೂ ಎಲ್ಲೆಡೆಯಲ್ಲಿಯೂ ಇಂದ್ರಿಯಗಳಿಂದ ಕಷ್ಟವನ್ನನುಭವಿಸುತ್ತಾರೆ:-

ದ್ವಿಷದ್ಭಿಃ ಶತ್ರುಭಿಃ ಕಶ್ಚಿತ್ ಕದಾಚಿತ್ ಪೀಡ್ಯತೇನ ವಾ ।
ಇಂದ್ರಿಯೈಃ ಬಾಧ್ಯತೇ ಸರ್ವಾಃ ಸರ್ವತ್ರಚ ಸದೈವ ಚ ॥[2]

ಇಂದ್ರಿಯಗಳು ಹತೋಟಿ ತಪ್ಪಿ ಸ್ವಾಧೀನದಲ್ಲಿಲ್ಲದಿರುವುರಿಂದಲೇ ಒಬ್ಬಂಟಿಗರಾಗಿ ನಿರ್ಜನ ಪ್ರದೇಶದಲ್ಲಿ ತಾಯಿ, ತಂಗಿ, ಮಗಳೊಡನೆ ಇರಬಾರದೆನ್ನಲಾಗಿದೆ.

ಮಾತ್ರಾ ಸ್ವಸ್ರಾ ದುಹಿತ್ರಾವಾ ನ ವಿವಿಕ್ತಾಸನೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥[3]

ಇಂದ್ರಿಯಗಳು ಎಷ್ಟು ಶಕ್ತಿಯುತವಾದುದೆಂದರೆ ಅವು ವಿವೇಕಿಯನ್ನೂ ಸಹ ಸೆಳೆಯುತ್ತದೆ (ವಿಷಯಗಳೆಡೆಗೆ)

ಇಂದ್ರಿಯಗಳನ್ನು ನಿಗ್ರಹಿಸಬೇಕೆಂಬುದೇನೋ ಸರಿ. ಆದರೆ, ಅದನ್ನು ನಿಗ್ರಹಿಸುವುದು ಯಾವುದು? ಉತ್ತರ ಸರಳವಾದುದು. ಅದೇ ಮನಸ್ಸು. ಪರಮಾತ್ಮಾ ಗೀತೆಯಲ್ಲಿ ಇಂದ್ರಿಯಗಳನ್ನು ಕುದುರೆಗಳೊಂದಿಗೆ, ಮನಸ್ಸನ್ನು ಹಗ್ಗದೊಂದಿಗೆ ಹೋಲಿಸುತ್ತಾನೆ :- ಇಂದ್ರಿಯಾಣಿ ಹಯಾನಾಹುಃ ಮನಃ ಪ್ರಗ್ರಹಮೇವ ಚ. ಮನಸ್ಸೇ ಈ ಇಂದ್ರಿಯಗಳನ್ನು ಹಿಡಿತದಲ್ಲಿಡಬೇಕು. ಆದರೆ ಇಂದ್ರಿಯಗಳು ಚಂಚಲವಾದುದು. ಆದರೆ ಮನಸ್ಸಿಗೇ ಹತೋಟಿಬೇಕು. ಅದು ತನ್ನದೇ ಆದ ರೀತಿಯಲ್ಲಿ ಚಲಿಸುತ್ತದೆ. ಅದರಲ್ಲಿ ಒಂದು ತೆರನಾದ ಆಂತರಿಕ ರಚನೆಯಿದೆ. ಸ್ವಾಭಾವಿಕವಾಗಿಯೇ ಅದು ಚಂಚಲ. ಪ್ರಮಾಥಿ, ಸೆಳೆಯುವಂತಹದು – ಬಲವದ್, ನಂಬಲಾದದ್ದು ದೃಢಂ. ಅದನ್ನು ನಿಗ್ರಹಿಸುವುದು ಗಾಳಿಯನ್ನು ನಿಗ್ರಹಿಸುವಷ್ಟೇ ಕಷ್ಟ – ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ. ಅದನ್ನು ನಿಗ್ರಹಿಸುವುದು ಕಷ್ಟ, ಆದರೆ ಅಸಾಧ್ಯವಲ್ಲ. ಅದನ್ನು ಅಭ್ಯಾಸ ಹಾಗೂ ವೈರಾಗ್ಯದಿಂದ ಸಾಧಿಸಬಹುದು. ಇಲ್ಲೇ ಬುದ್ಧಿ ಪ್ರವೇಶಿಸುವುದು. ಅದೇ ಚಂಚಲ ಮನಸ್ಸಿಗೆ ದಿಕ್ಸೂಚಿಯಾಗುತ್ತದೆ. ಆದರೆ ಬುದ್ದಿಗೆ ವಿವೇಕವಿದೆ. ಬುದ್ಧಿಯನ್ನು ಅತ್ತಿತ್ತ ಸುಳಿಯಲು ಬಿಡಬಾರದು. ಅದನ್ನು ಏಕಮುಖವಾಗಿ ಕೇಂದ್ರೀಕರಿಸಬೇಕು. ದೃಢಸಂಕಲ್ಪದಿಂದ ಮಾತ್ರವೇ ಬುದ್ಧಿಯನ್ನು ಹಿಡಿತದಲ್ಲಿಟ್ಟು ಅದು ಒಂದು ವಿಷಯದಿಂದ ಮತ್ತೊಂದು ವಿಷಯದ ಕಡೆ ಹೋಗುವುದನ್ನು ತಪ್ಪಿಸಬಹುದು. ಅದನ್ನು ಸುಸಂಸ್ಕೃತವಾಗಿಸಬೇಕು – ಇಲ್ಲೇ ಅಭ್ಯಾಸ ಬರುವುದು. ಅಸ್ಥಿರವಾದ ಮನಸ್ಸು ಸರಿಯಗಿ ಯೋಚಿಸಲಾರದು. ಒಂದು ವಿಷಯದ ಬಗ್ಗೆ ಕೇಂದ್ರೀಕರಿಸಲಾರದು. ಯಾವುದೇ ಕೆಲಸವನ್ನೂ ಸಮರ್ಪಕವಾಗಿ ಮಾಡಲಾರದು. ವಿಜ್ಞಾನಿಗಳು, ಅನ್ವೇಷಕರು, ಚಿಂತಕರು ದೊಡ್ಡ ಅನ್ವೇಷಣೆ ಮಾಡುವಾಗ ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟಿದ್ದರು. ಅನ್ವೇಷಣೆಯ ಬಗ್ಗೆ ಕೇಂದ್ರೀಕರಿಸಿದರು, ಏಕಮುಖವಾಗಿದ್ದು ಸಮಸ್ಯೆಗೆ ಪರಿಹಾರವನ್ನು ಜಯಗಳಿಸುವಂತಹ ಸಿದ್ಧತೆಯಿರುತ್ತದೆ. ಅದನ್ನು ಗೀತೆಯಲ್ಲಿ ಭಗವಂತ ಹೇಳಿರುವುದು – ವ್ಯವಸಾಯಾತ್ಮಿಕಾ ಬುದ್ಧಿ[4]. ಈ ಬುದ್ಧಿಯಿಂದ ಮನಸ್ಸು ಸರಿಯಾಗಿ ಕೆಲಸ ಮಾಡುತ್ತದೆ. ಸಾಮಾನ್ಯವಾದ ಅನುಭವವೆಂದರೆ ನಾವು ಯಾವುದಾದರೂ ವಿಷಯವನ್ನು ಏಕಾಗ್ರತೆಯಿಂದ ಮಾಡುತ್ತಿರುವಾಗ ಹಸಿವೂ ಬಾಯಾರಿಕೆಯ ಕಡೆಯೂ ನಮಗೆ ಗಮನವಿರುವುದಿಲ್ಲ. ಆಗ ಜೀವನಕ್ಕೊಂದು ಗುರಿಯಿದೆ. ಅದೇ ನಮ್ಮ ಜೀವನದ ಧ್ಯೇಯ.

ಹಿಂದೆ ಹೇಳಿದಂತೆ, ಮನಸ್ಸು, ಬುದ್ಧಿಯನ್ನು ಹತೋಟಿಯಲ್ಲಿಡುವುದು ಸುಲಭವಲ್ಲ. ಆದರೂ ಅದಕ್ಕಾಗಿ ಪ್ರಯತ್ನಿಸುವುದರಲ್ಲಿ ಯಾವ ದೋಷವೂ ಇಲ್ಲ. ಅದರ ಗುರಿಯೆಂದರೆ ಶಾಂತಿಯ ಸಾಧನೆ. ಶಾಂತಿಯೇ ಸಂತೋಷದ ಬುನಾದಿ, ಅದೇ ಸುಖ. ಯಾರು ಇಂದ್ರಿಯಗಳ ಮೇಲೆ ಹಿಡಿತ ಸಾಧಿಸುವರೋ, ಅವರು ಎಲ್ಲೇ ಇದ್ದರೂ ಆ ಪ್ರದೇಶವೇ ಕುರುಕ್ಷೇತ್ರ ಅಥವಾ ನೈಮಿಷ. ಅವನು ಸಮಸ್ತ ವಿಶ್ವವನ್ನೇ ಗೆದ್ದಂತೆ.

---

**ಆಕರಗಳು**

1) 65ನೇ ಶ್ಲೋಕ 2) ಸೌಂದರನಂದ.13.32 3) ಮನುಸ್ಮೃತಿ.2.215 4)2.41

# 29. ಅತಿಥಿ ಸತ್ಕಾರ

ಭಾರತೀಯ ಸಂಸ್ಕೃತಿ ಅತಿಥಿಗಳಿಗೆ ವಿಶೇಷವಾದ ಸ್ಥಾನ ನೀಡಿದೆ. ಒಬ್ಬ ವಿದ್ಯಾರ್ಥಿ ಗುರುಕುಲದಿಂದ ಹಿಂದಿರುಗುವಾಗ ಅವನಿಗೆ ಆದೇಶ ನೀಡಲಾಗುತ್ತದೆ - ಅತಿಥಿ ದೇವೋ ಭವ. ಅತಿಥಿಯನ್ನು ದೇವರಂತೆ ಕಾಣು ಎಂದು. ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯ ಈ ವಾಕ್ಯ ಪ್ರವಾಸೋದ್ಯಮ ಇಲಾಖೆಯವರು ನಮ್ಮ ಧ್ಯೇಯ ವಾಕ್ಯವಾಗಿಟ್ಟುಕೊಂಡು ತಮ್ಮ ಕರ್ತವ್ಯಪ್ರಜ್ಞೆ ಸೂಚಿಸುತ್ತಾರೆ.

ಅತಿಥಿಯು ಅತಿಥೇಯನಿಗೆ ಗೊತ್ತಿರಲೇಬೇಕೆಂದೇನೂ ನಿಯಮವಿಲ್ಲ. ನಾರದಪುರಾಣ ಹೇಳುವಂತೆ ಯಾರು ಯಾವ ಪರಿಚಯ ಇಲ್ಲದೆ ಬೇರೊಂದು ಹಳ್ಳಿಯಿಂದ ಬರುವರೋ ಅವರೇ ಅತಿಥಿ :-

ಅಜ್ಞಾತಗೋತ್ರನಾಮಾನಂ ಅನ್ಯಗ್ರಾಮಾದುಪಾಗತಮ್ ।
ವಿಪಶ್ಚಿತೋಽತಿಥಿಂ ಪ್ರಾಹುಃ ವಿಷ್ಣುವತ್ತಂ ಪ್ರಪೂಜಯೇತ್ ॥[1]

ಅತಿಥಿಗೆ ಮೊದಲು ಊಟ ನೀಡಬೇಕೆಂಬುದೇ ನಿಯಮ. ಅವನು ತಿಂದ ಬಳಿಕವೇ ತಾನು ತಿನ್ನಬೇಕು. ತಾನೇ ಮೊದಲು ಉಂಡರೆ ತನ್ನ ಹೆಸರನ್ನೂ ಕೀರ್ತಿಯನ್ನೂ ಕಳೆದುಕೊಳ್ಳುತ್ತಾನೆ :-

ಕೀರ್ತಿಂಚ ವಾ ಏಷ ಯಶಶ್ವ ಗೃಹಾಣಾಮಶ್ನುತೇ ।
ಯಃ ಪೂರ್ವೋಽತಿಥೇರಶ್ನಾತಿ ॥[2]

ಇದೇ ಅಂಶವನ್ನೇ ಅಥರ್ವವೇದದ ಒಂದು ಮಂತ್ರವೂ ಸ್ಪಷ್ಟೀಕರಿಸುತ್ತದೆ : ಅಸಿತವತ್ಯತಿಥೌ ಅಶ್ನೀಯಾತ್[3].

ಅತಿಥಿ ತಿಂದ ಬಳಿಕವೇ ತಾನು ತಿನ್ನಬೇಕು.

ಇದರ ಹಿನ್ನಲೆಯೆಂದರೆ ನಾವು ಕೊಟ್ಟ ಅನ್ನವನ್ನು ಅತಿಥಿ ತಿಂದಾಗ ನಾವು ಮಾಡಿದ ಪಾಪಗಳೆಲ್ಲವೂ ಸುಟ್ಟು ಭಸ್ಮವಾಗುವುದೆಂದು ಸರ್ವೋವಾ ಏಷ ಜಗ್ಧಪಾಪ್ಮಾ ಯಸ್ಯಾನ್ನ ಮಶ್ನಾತಿ[4]

ಯರೂ ಸಹ ಮನೆಯಲ್ಲಿ ಹಸಿದಿರಬಾರದು ಎಂದು ತೈತ್ತಿರೀಯ ಬ್ರಾಹ್ಮಣ ಸಾರುತ್ತದೆ.

ನಾಸ್ಯ ಬ್ರಾಹ್ಮಣೋಽಶ್ನವಾನ್ ಗೃಹೇ ವಸೇತ್[5]

ಮೃತ್ಯುದೇವತೆಯಾದ ಯಮನೂ ಸಹ ಬ್ರಾಹ್ಮಣನಾದ ಅತಿಥಿಯನ್ನು ಮೂರು ದಿನ ಕಾಯಿಸಿದ ಪ್ರಾಯಶ್ಚಿತ್ತವಾಗಿ ಎರಡು ವರ ಕೊಡುವುದರ ಮೂಲಕ ಪ್ರಾಯಶ್ಚಿತ್ತ

ಮಾಡಿಕೊಂಡ:-

ತ್ರಿಸ್ರೋ ರಾತ್ರೀರ್ಯದ ವಾತ್ಸೀರ್ಗೃಹೇಮೇ
ಅನಶ್ನನ್ ಬ್ರಹ್ಮನ್ ಅತಿಥಿರ್ನಮಸ್ಯಃ
ಸ್ವಸ್ತಿಮೇಽಸ್ತು
ತಸ್ಮಾತ್ ಪ್ರತಿತ್ರೀನ್ ವರಾನ್ ವೃಣೀಷ್ವ॥[6]

ಕಠೋಪನಿಷತ್ತಿನ ಪ್ರಕಾರ ಕಥೆ ಈ ರೀತಿ ಮುಂದುವರೆಯುತ್ತದೆ. ಸ್ವರ್ಗಕಾಮನೆಯಿಂದ ವಾಜಶ್ರವಸ್ ತನ್ನಲ್ಲಿದ್ದ ಎಲ್ಲವನ್ನೂ ದಾನಮಾಡಿದ. ಅವನಿಗೆ ನಚಿಕೇತನೆಂಬ ಮಗನಿದ್ದ. ಯಾವಾಗ ತಂದೆತಾಯಿಗಳು ಕಾತುರರಾಗಿದ್ದರೋ ಆಗ ಕಾತುರತೆ ನಚಿಕೇತನನ್ನು ಪ್ರವೇಶಿಸಿತು. ಮುದಿಗೊಡ್ಡು ಹಸುಗಳನ್ನು ದಾನ ಮಾಡುವುದನ್ನು ಅವನು ಕಂಡ. ಇಂತಹ ದಾನಕೊಟ್ಟು ಯಾವ ಸ್ವರ್ಗಕ್ಕೆ ತಾನೇ ಹೋಗಲು ಸಾಧ್ಯ ಎಂದುಕೊಂಡ. ತನ್ನನ್ನು ಯಾರಿಗೆ ಕೊಡುವೆ ಎಂದು ತಂದೆಯನ್ನು ಕೇಳಿದ. ತಂದೆ ಸುಮ್ಮನಿರಲು ಅವನು ಅದನ್ನೇ 2,3 ಬಾರಿ ಕೇಳಿದ. ಕೋಪಗೊಂಡ ತಂದೆ ಹೇಳಿದ – ನಿನ್ನನ್ನು ಯಮನಿಗೆ ಕೊಟ್ಟಿರುವೆ ಎಂದು. ಅದು ಋಷಿವಾಕ್ಯವಾಗಿರುವುದರಿಂದ ಸತ್ಯವಾಗಲೇಬೇಕು. ನಚಿಕೇತ ಯಮನ ಮನೆ ಪ್ರವೇಶಿಸಿದ. ಯಮ ಮನೆಯಲ್ಲಿರಲಿಲ್ಲ. ಮೂರು ರಾತ್ರಿ ಊಟವಿಲ್ಲದೆ ನಚಿಕೇತ ಅಲ್ಲಿದ್ದ. ಅವನನ್ನು ಆ ಸ್ಥಿತಿಯಲ್ಲಿ ಕಂಡು ಯಮನಿಗೆ ಪಶ್ಚಾತ್ತಾಪವುಂಟಾಯಿತು. ಅದಕ್ಕೆ ಪ್ರತಿಯಾಗಿ ಮೂರು ವರ ಕೊಡುವೆನೆಂದ. ಬ್ರಾಹ್ಮಣ ಅತಿಥಿ ಮನೆಯಲ್ಲಿದ್ದು ಊಟವಿಲ್ಲದಿದ್ದರೆ ಅವನು ಎಲ್ಲವನ್ನೂ ತೆಗೆದುಕೊಂಡು ಹೋಗುವನು. ಒಳ್ಳೆಯವರ ಸಾಂಗತ್ಯ, ಮಕ್ಕಳು, ಪ್ರಾಣಗಳು. ನಚಿಕೇತ ಮೂರು ವರ ಕೇಳಿದ. ಆ ಮೂರು ವರಗಳಾವುವು. ಹೇಗೆ ಯಮ ಅದನ್ನು ನೀಡುವಂತೆ ಒತ್ತಾಯಿಸಲ್ಪಟ್ಟ. ಅಂದರೆ ಅದು ಅನಾದಿಕಾಲದಿಂದಲೂ ಎಲ್ಲರನ್ನೂ ಕಾಡಿಸುತ್ತಿದ್ದಂತಹ ಮೂಲಭೂತ ಪ್ರಶ್ನೆಯಾಗಿತ್ತು. ಮಾನವ ಮೃತನಾದ ಮೇಲೆ ಏನಿರುತ್ತದೆ ಇಲ್ಲಿರುವ ಮುಖ್ಯಾಂಶವೆಂದರೆ ಮೃತ್ಯುದೇವತೆಯಾದ ಯಮನೂ ಸಹ ಅತಿಥಿಸತ್ಕಾರ ಮಾಡುವುದರಿಂದ ವಿನಾಯಿತಿ ಪಡೆದಿಲ್ಲ. ಅದರಲ್ಲೂ ಬ್ರಾಹ್ಮಣ ಅತಿಥಿಯನ್ನು.

ಅತಿಥಿ ಸತ್ಕಾರದ ವಿಷಯದಲ್ಲಿ ಮಹಾಭಾರತದಲ್ಲಿ ಬರುವ ಮುದ್ಗಲ ಎಂಬ ಮುನಿಯ ಕಥೆ ಗಮನಾರ್ಹವಾದುದು. ಅವನು ಬಹಳ ಕಡಿಮೆ ಹಣದಲ್ಲಿ ಜೀವನ ನಡೆಸುತ್ತಿದ್ದ. ಅವನು ಕುರುಕ್ಷೇತ್ರದಲ್ಲಿದ್ದು ಯಾಗಾದಿಗಳನ್ನು ಮಾಡುತ್ತಿದ್ದ ತುಪ್ಪ, ಆಹಾರದಂತಹ ವಸ್ತುಗಳೊಂದಿಗೆ, ಅವನು ಹದಿನೈದು ದಿನಗಳಿಗೊಮ್ಮೆ ದ್ರೋಣ ಎಂಬ ನಾಣ್ಯ ಪಡೆಯುತ್ತಿದ್ದ. ಅದು ಮೂವತ್ತೆರಡು ಅಥವಾ ಅರವತ್ನಾಲ್ಕು ಅಕ್ಕಿ ಕಾಳಾಗುತ್ತಿತ್ತು. ದೇವತೆಗಳು, ಅತಿಥಿಗಳಿಗೆ ಕೊಟ್ಟು ಏನು ಉಳಿದಿದೆಯೋ ಅವನು ತನಗೆ ಹಾಗೂ ತನ್ನ ಕುಟುಂಬಕ್ಕಾಗಿ ಉಪಯೋಗಿಸುತ್ತಿದ್ದ. ಅವನು ನೀಡುತ್ತಿದ್ದ ಅತಿಥಿಸತ್ಕಾರದಿಂದ ನೂರು ಜನ ಬ್ರಾಹ್ಮಣರಿಗೆ ಅದು ಸಾಕಾಗುತ್ತಿತ್ತು. ಮುದ್ಗಲನ ಈ ಅತಿಥಿಸತ್ಕಾರ ಕಾಲಕ್ರಮೇಣ

ದೂರ್ವಾಸರ ಕಿವಿಗೂ ಬಿತ್ತು. ಅವನು ಅತಿಥಿಯಾಗಿ ಮುದ್ಗಲನ ಬಳಿ ಬಂದ. ಅವನು ಎಲ್ಲಾ ಸತ್ಕಾರಗಳೊಂದಿಗೆ ಬರಮಾಡಿಕೊಂಡ. ಅವನು ಎಲ್ಲಾ ಊಟವನ್ನೂ ಮುಗಿಸಿದ. ಹೀಗೆ ಆರು ಬಾರಿ ಮಾಡಿದರೂ ಮುದ್ಗಲನಿಂದ ಯಾವ ಪ್ರತಿಕ್ರಿಯೆಯೂ ಉಂಟಾಗಲಿಲ್ಲ. ತನ್ನ ಹಸಿವನ್ನು ಲೆಕ್ಕಿಸದೆ ಮುದ್ಗಲ ಅತಿಥಿಸೇವೆ ಮಾಡಿದ. ಇದು ದೂರ್ವಾಸರಿಗೆ ಅತ್ಯಂತ ಸಂತಸವನ್ನುಂಟು ಮಾಡಿತು. ಆಗ ದೂರ್ವಾಸ ಅವನಿಗೆ ವರಕೊಟ್ಟ ನೀನು ಸಜೀವವಾಗಿ ಸ್ವರ್ಗಕ್ಕೆ ಹೋಗುವಂತಾಗಲಿ ಎಂದು. ಅವನು ಇಂದ್ರಿಯನಿಗ್ರಹದಿಂದ, ತಾಳ್ಮೆ, ಅನುಕಂಪ, ಸತ್ಯ, ಶಾಂತಿ ಧರ್ಮದಿಂದ ಕೂಡಿದ್ದ. ಆಗ ದೇವದೂತ ಅಲ್ಲಿಗೆ ಬಂದ ವಿಮಾನಮಾರ್ಗವಾಗಿ ಅವನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಲು. ಆಗ ಮುದ್ಗಲನಿಗೂ ದೇವದೂತನಿಗೂ ಸಂವಾದವುಂಟಾಯಿತು. ಸ್ವರ್ಗಕ್ಕೆ ಹೋಗುವ ಮುನ್ನ ಅಲ್ಲಿನ ಒಳ್ಳೆಯ ಮತ್ತು ಕೆಟ್ಟ ಅಂಶಗಳನ್ನು ಮುದ್ಗಲ ತಿಳಿಯಬಯಸಿದ. ದೇವದೂತ ಸ್ವರ್ಗದಲ್ಲಿ ಎಲ್ಲವೂ ಚೆನ್ನ ಎಂದ. ಅಲ್ಲಿ ಎಲ್ಲಾ ರೀತಿಯ ಸಂತೋಷ ಸುಖವಿದೆ. ಆದರೆ ಮಾನವರು ತಮ್ಮ ಪುಣ್ಯ ಮುಗಿದ ಬಳಿಕ ಭೂಮಿಗೆ ಹಿಂದಿರುಗಬೇಕು. ಅಂತಹ ಸ್ವರ್ಗದ ಬಗ್ಗೆ ಮುದ್ಗಲನಿಗೆ ಇಷ್ಟವಾಗಲಿಲ್ಲ. ಅದು ವಿಷ್ಣುಲೋಕವೆಂದ ದೇವದೂತ. ಅದನ್ನೇ ಮುದ್ಗಲ ಬಯಸಿದ. ಅವನು ಸ್ವರ್ಗಕ್ಕೆ ಹೋಗಲಿಲ್ಲ. ಅವನು ಭೂಮಿಯಲ್ಲೇ ಇದ್ದು ತನ್ನ ಆಂತರಿಕ ಪ್ರಜ್ಞೆಯಲ್ಲಿದ್ದು ಹೊಗಳಿಕೆ ಅಥವಾ ತೆಗಳಿಕೆಯನ್ನು ಸಮವಾಗಿ ಕಂಡ. ಮಣ್ಣಿನ ಹೆಂಟೆ, ಕಲ್ಲು, ಬಂಗಾರ ಅಥವಾ ಮುತ್ತು ಅವನಿಗೆ ಒಂದೇ ಆಗಿತ್ತು. ಅವನು ನಿರ್ವಾಣವನ್ನೈದಿದ.

ಅತಿಥಿಗಳಿಗೆ ಸರಿಯಾದ ಆಚರಣೆಯಿತ್ತು. ಅವರು ಯಾರ ಯಾರ ಮನೆಗೋ ನುಗ್ಗುವಂತಿರಲಿಲ್ಲ. ಅವರು ತಮ್ಮ ಬರುವಿಕೆಯನ್ನು ತಿಳಿಯಪಡಿಸಬೇಕಿತ್ತು ದೂರ್ವಾಸ ಪ್ರಸಂಗ ಅಭಿಜ್ಞಾನಶಾಕುಂತಲದಲ್ಲಿ ಬಂದಿರುವಂತೆ. ಕಣ್ವರ ಆಶ್ರಮಕ್ಕೆ ಬಂದು ಅವನು ಘೋಷಿಸುತ್ತಾನೆ – ಅಯಮಹಂಭೋಃ[7]. ಇದೇನಾ ಬಂದಿರುವೆ. ಅದನ್ನು ಕೇಳಿ ಶಕುಂತಲೆಯ ಗೆಳತಿಯಾದ ಅನಸೂಯೆ ಹೇಳುತ್ತಾಳೆ – ಯಾರೋ ಅತಿಥಿ ಬಂದಂತಿದೆ – ಅತಿಥೀನಾಮಿವ ನಿವೇದಿತಂ. ಈ ಹೇಳಿಕೆ ಸಾಕಾಗಿತ್ತು ಅತಿಥಿಯನ್ನು ಯಥೋಚಿತವಾದ ಅರ್ಘ್ಯ, ಪಾದ್ಯ ಆಚಮನಗಳಿಂದ ಬರಮಾಡಿಕೊಳ್ಳಲು. ಮೃದುವಾಗಿ ಅವನೊಡನೆ ಮಾತನಾಡಬೇಕು ಘುತ್ತೈಃಬೋದ್ಯತಾತಿಥಿಮ್. ಅತಿಥಿಯನ್ನು ಗೌರವಪೂರ್ವಕವಾಗಿ ಬರಮಾಡಿಕೊಳ್ಳುವುದು ಅತಿಥೇಯನ ಕರ್ತವ್ಯವಾಗಿತ್ತು. ಕಣ್ವರು ಸೋಮತೀರ್ಥಕ್ಕೆ ಹೋಗುವ ಮುನ್ನ ಆ ಜವಾಬ್ದಾರಿಯನ್ನು ಶಕುಂತಲೆಗೆ ಕೊಟ್ಟಿದ್ದರು . ದುಹಿತರಂ ಶಕುಂತಲಾಂ ಅತಿಥಿಸತ್ಕಾರಾಯ ನಿಯೋಜ್ಯ..... ಸೋಮತೀರ್ಥಂಗತಃ. ಆ ಆಜ್ಞೆಯನ್ನು ಪಾಲಿಸದಿರುವುದು ಕರ್ತವ್ಯ ಭಂಗವು. ಶಕುಂತಲೆಯ ಧ್ಯಾನ ದುಃಷ್ಯಂತನ ಕಡೆಯಿದ್ದದ್ದರಿಂದ ಅವಳಿಂದ ಈ ಕರ್ತವ್ಯ ಪೂರೈಸಲಾಗಲಿಲ್ಲ. ಅದೇ ಶೀಘ್ರಕೋಪಿಯಾದ ದೂರ್ವಾಸನು ಶಪಿಸಲು ಮೂಲ ಕಾರಣವಾಯಿತು. ಈ ಶಾಪ ಅವಳ ಜೀವನವನ್ನೇ ಬದಲಾಯಿಸಿತು.

ಮನೆಗೆ ಬಂದವರನ್ನು ಹಿಂದೆ ಕಳುಹಿಸಬಾರದು :- ನ ಕಂಚನ ವಸತೌ ಪ್ರತ್ಯಾಚಕ್ಷೀತ ಅದು ಧಾರ್ಮಿಕ ನಿಯಮ – ತದ್ ವ್ರತಮ್ ಯಾವುದೇ ಕಾರಣಕ್ಕೂ

ಸಹ. ಅವನಿಗಾಗಿ ಬೇಕಾದಷ್ಟು ಊಟವನ್ನಿಟ್ಟಿರಬೇಕು. ತಸ್ಮಾತ್‌ಯಯಾ ಕಯಾಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್. ಮಾಡಿರುವ ಅಡಿಗೆ ಅವನಿಗಾಗಿಯೇ - ಆರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ[10].

ಸಂಸ್ಕೃತದಲ್ಲಿ ಅತಿಥಿಗೆ ಎರಡು ಪದಗಳಿದೆ. ಅತಿಥಿ ಮತ್ತು ಅಭ್ಯಾಗತ, ಎರಡೂ ಅತಿಥಿ ಎಂಬರ್ಥದಲ್ಲೇ ಬಳಸಿದರೂ ಸಹ ಅವರೆಡರಲ್ಲಿ ಸೂಕ್ಷ್ಮವಾದ ಅಂತರವಿದೆ. ಅದು ಅತಿಥಿ ವಿಶೇಷದಿಂದ ತೀರ್ಮಾನವಾಗುತ್ತದೆ. ಅತಿಥಿ ಎಂದರೆ ಮನೆಯವರಿಗೆ ಗೊತ್ತಿಲ್ಲದವರು. ಅಭ್ಯಾಗತ ಎಂದರೆ ಗೊತ್ತಿರುವವರು. ವೀರರಾಘವ, ಅಶ್ವನಾಥ ಹಾಗೂ ಶುಕದೇವರ ವ್ಯಾಖ್ಯಾನದಂತೆ - ಅತಿಥಯೋಃ ಅಜ್ಞಾತಪೂರ್ವಾಃ ಅಭ್ಯಾಗತಾ ಜ್ಞಾತ ಪುರ್ವಾಃ. ಭಾಗವತ ಗದ್ಯದಲ್ಲಿ ಯ ಸ್ತ್ವಿಹ ಅತಿಥೀನ್ ಅಭ್ಯಾಗತಾನ್‌ವಾ [11]

ಭಾರತೀಯ ಸಮಾಜದಲ್ಲಿ ಉಪಾಹಾರಗಳಾಗಲೀ, ಹೋಟೆಲ್‌ಗಳಾಗಲೀ ಇರಲಿಲ್ಲ. ಸಂಸ್ಕೃತದಲ್ಲಿ ಅದಕ್ಕೆ ಪದವೇ ಇಲ್ಲ. ಆಗ ಸಂಚಾರ ಇರಲಿಲ್ಲವೆಂದೇನಲ್ಲ. ತೀರ್ಥಯಾತ್ರೆಯು ಅವಶ್ಯಕವಾದ ಧಾರ್ಮಿಕ ಕ್ರಿಯೆಯಾಗಿತ್ತು. ಅದು ದೇಶದ ಒಂದು ಭಾಗದಿಂದ ಮತ್ತೊಂದು ಭಾಗದವರೆಗೆ ಆಗುತ್ತಿತ್ತು. ಅದು ಹಿಂದೆ ಮಧ್ಯಕಾಲದಲ್ಲಿ ಹಾಗೂ ಆಧುನಿಕ ಕಾಲದಲ್ಲೂ ಸಹ ಪ್ರತಿಯೊಬ್ಬ ಧಾರ್ಮಿಕ ಹಿಂದೂವಿನ ಉದ್ದೇಶವಾಗಿತ್ತು ಪುಣ್ಯಕ್ಷೇತ್ರಗಳಿಗೆ ಹೋಗುವುದು ವಿಭಿನ್ನ ದಿಕ್ಕುಗಳಲ್ಲಿ ಪಸರಿಸಿರುವುದು. ಪೂರ್ವದಲ್ಲಿ ಪುರಿ, ಪಶ್ಚಿಮದಲ್ಲಿ ದ್ವಾರ್ಕಾ, ದಕ್ಷಿಣದಲ್ಲಿ ರಾಮೇಶ್ವರಂ, ಉತ್ತರದಲ್ಲಿ ಬದರೀನಾಥ. ಇದಲ್ಲದೆ ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತಿಕಾ ಮತ್ತು ದ್ವಾರವತೀ (ದ್ವಾರ್ಕಾ) ಎಂಬ ಏಳು ಪಟ್ಟದಿಗಳ ದರ್ಶನವೂ ಪವಿತ್ರವಾಗಿತ್ತು. ಅದನ್ನು ನೋಡುವುದರಿಂದ ಅವನಿಗೆ ಮೋಕ್ಷವುಂಟಾಗುತ್ತಿತ್ತು. ತೀರ್ಥಯಾತ್ರಿಗಳೊಂದಿಗೆ ವ್ಯಾಪಾರಿಗಳು, ಸಮುದ್ರಯಾನ ಮಾಡುವವರು ತಮ್ಮ ಸರಕಿನೊಂದಿಗೆ ಪಯಣಿಸುತ್ತಿದ್ದರು. ಸರಾಯ್ ಎಂಬ ಹಿಂದೂ ಉರ್ದೂ ಪದ ಭಾರತೀಯ ಶಬ್ದ ಸಂಪತ್ತಿಗೆ ಬಂದಿತು. ಅದಕ್ಕೆ ಮೊದಲು ಸಮಾಜದಲ್ಲಿರುವವರೇ ವ್ಯಾಪಾರಿಗಳಿಗೆ ಸೌಕರ್ಯವನ್ನು ಒದಗಿಸುತ್ತಿದ್ದರು. ಸೂರ್ಯಾಸ್ತದ ಸಮಯದಲ್ಲಿ ಯಾತ್ರಿಕ ಯಾರನ್ನಾದರೂ ಸಂದಿಸಿ ಅವರಿಂದ ಆಹಾರ, ವಸತಿ ದೊರಕದಿದ್ದರೆ ಪುಣ್ಯವನ್ನು ಅವನು ತೆಗೆದುಕೊಂಡು ಹೋಗುತ್ತಿದ್ದ.

ಸಂಸ್ಕೃತದಲ್ಲಿ ಒಂದು ಜನಪ್ರಿಯ ಉಕ್ತಿಯಿದೆ - ಅತಿಸರ್ವತ್ರವರ್ಜಯೇತ್ ಎಲ್ಲಕಡೆಯೂ ಅತಿಯಾಗಿ ಏನನ್ನೂ ಮಾಡಬಾರದು. ಅತಿಥಿಗಳಿಗೆ ವಿಶೇಷವಾಗಿ ಗೊತ್ತಿಲ್ಲದವರ ಬಗ್ಗೆ ಆತ್ಯಾದರ ತೋರಿಸುವುದು ಸಮಾಜಘಾತುಕ ವ್ಯಕ್ತಿಗಳು ಆತಿಥ್ಯವನ್ನು ದುರುಪಯೋಗಪಡಿಸಿಕೊಳ್ಳಲು ಕಾರಣನಾಗುತ್ತಿತ್ತು :- ಅಜ್ಞಾತಕುಲ ಶೀಲಸ್ಯವಾಸೋ ದೇಯೋನ ಕಸ್ಯಚಿತ್[12].

ಯಾರ ಮನೆತನ ಹಾಗೂ ಸ್ವಭಾವ ಗೊತ್ತಿಲ್ಲವೋ ಅಂತಹವರನ್ನು ಮನೆಗೆ ಸೇರಿಸಬಾರದು. ಅತಿಥಿಗಳ ಗೌರವ ಇತ್ಯಾದಿಗಳಿರುವಂತೆಯೇ ಒಳ್ಳೆಯವರೇ

ಅತಿಥಿಗಳೆಂಬುದೂ ಇತ್ತು :- ಯಃ ಶ್ರೇಷ್ಠತಾಂ ಅಶ್ನುತೇ ಸವಾ ಅತಿಥಿರ್ಭವತಿ[13]. ಅದಕ್ಕೆ ವಿರುದ್ಧವಾದವನು ಅಸತ್ - ಅವನಿಗೆ ಗೌರವತೋರದಿರುವುದು ಅತಿಥಿ ಶಬ್ದಕ್ಕೆ ಅವಮರ್ಯಾದೆಯಾಗುತ್ತದೆ - ನವಾ ಅಸಂತಂ ಆತಿಥ್ಯಾದ್ರಿಯಂತೇ[14].

ಭಾರತ ಅತಿಥಿಗಳಿಗೆ ವಿಶೇಷ ಸೌಲಭ್ಯ ಕಲ್ಪಿಸಿಕೊಟ್ಟು ಬಹಳ ನಷ್ಟವನ್ನನುಭವಿಸಿದೆ. ಅವರ ಉದ್ದೇಶಗಳನ್ನರಿಯದೆ ಅವರಿಗೆ ಆತಿಥ್ಯ ತೋರಿದ್ದೇ ಅದಕ್ಕೆ ಕಾರಣ. ಆತಿಥಿಸತ್ಕಾರವನ್ನಿಟ್ಟುಕೊಂಡು ಯಾರ ಧ್ಯೇಯಗೊತ್ತಿಲ್ಲವೋ ಅವರ ಬಗ್ಗೆ ಮುಂಜಾಗ್ರತೆ ವಹಿಸುವುದೂ ಅತ್ಯಗತ್ಯ.

---

## ಆಕರಗಳು

1) 1.1.26.63 2) ಅಥರ್ವವೇದ.2.6.8.25 3) ಅದೇ.9.68.38 4) ಅದೇ.9.6.7.24 5) ತೈತ್ತಿರೀಯಬ್ರಾಹ್ಮಣ.1.1.4. 6) ಕಠೋಪನಿಷತ್.1.9 7) ನಾಲ್ಕನೆಯ ಅಂಕದ ಪ್ರಾರಂಭ 8) ತೈತ್ತಿರೀಯ-ಬ್ರಾಹ್ಮಣ.1.1.1 9) ಅಭಿಜ್ಞಾನಶಾಕುಂತಲ.ಮೊದಲನೆಯ ಅಂಕ.ಪದ್ಯ 13 10) ತೈತ್ತಿರೀಯೋಪನಿಷತ್.1.10 11) 5.26.45 12) ಹಿತೋಪದೇಶ.1.56 13) ತೈತ್ತಿರೇಯ ಅರಣ್ಯಕ.1.1.1. 14) ಅದೇ.

# 30. ಪ್ರಾಯಶ್ಚಿತ್ತ

ಯಾರಾದರೂ ಪಾಪವನ್ನಾಗಲೀ, ಕೆಡುಕನ್ನಾಗಲೀ ಮಾಡಿದರೆ ಅವನು ಎರಡು ರೀತಿಯಿಂದ ಪಾರಾಗಬಹುದು. ರಾಜ್ಯ ಅವನಿಗೆ ಶಿಕ್ಷೆ ವಿಧಿಸಬಹುದು ಅಥವಾ ಅವನೇ ಅವನಿಗೆ ಶಿಕ್ಷೆ ವಿಧಿಸಕೊಳ್ಳಬಹುದು. ಎರಡನೆಯದೇ ಪ್ರಾಯಶ್ಚಿತ್ತ. ಆ ಪದದಲ್ಲಿ ಎರಡು ಭಾಗಗಳದೆ – ಪ್ರಾಯಸ್ ಮತ್ತು ಚಿತ್ತ. ಹಿಂದಿನ ಕೋಶಕಾರ ಹಿಮಾದ್ರಿ ಪ್ರತಿಯೊಂದನ್ನು ವರ್ಣಿಸುತ್ತಾನೆ. ''ಪ್ರಾಯಸ್'' ಎಂದರೆ ತಪಸ್ಸು – ಧಾರ್ಮಿಕ ಪೂಜೆ (ಕ್ರಿಯ) ದೈಹಿಕಶುದ್ಧಿ ಮತ್ತು ಚಿತ್ತ ಎಂದರೆ ನಿಶ್ಚಯ. ಪ್ರತಿಜ್ಞೆ ಅಥವಾ ದೃಢನಿಶ್ಚಯ :-

ಪ್ರಾಯೋನಾಮತಪಃ ಪ್ರೋಕ್ತಂ ಚಿತ್ತಂನಿಶ್ಚಯ ಉಚ್ಯತೇ ।
ತಪೋ ನಿಶ್ಚಯ ಸಂಯೋಗಾತ್ ಪ್ರಾಯಶ್ಚಿತ್ತ ಮಿತೀರ್ಯತೇ ॥

ಪ್ರಾಯಶ್ಚಿತ್ತವೆಂದರೆ ದುಃಖವನ್ನು ಅನುಭವಿಸಲು ಮಾಡಿಕೊಳ್ಳುವಂತಹ ದೃಢನಿಶ್ಚಯ. ಆದರಿಂದ ತನ್ನ ಪಾಪದಿಂದ ಪರಿಶುದ್ಧಿ ಪಡೆಯುವುದು ಅಥವಾ ಮಾಡಬಾರದ ಕ್ರಿಯೆಯಿಂದ ಬಿಡುಗಡೆ ಹೊಂದುವುದು. ಇದು ತಮ್ಮನ್ನು ತಾನು ಶುದ್ಧೀಕರಿಸಿಕೊಳ್ಳುವ ವಿಧಾನ. ಕಾನೂನು ಹಾಗೂ ನೈತಿಕತೆಗೆ ಸಂಬಂಧಿಸಿದ ಗ್ರಂಥಗಳು ವಿಭಿನ್ನ ರೀತಿಯ ಕೆಡಕುಗಳಿಗೆ ವಿಭಿನ್ನ ರೀತಿಯ ಪ್ರಾಯಶ್ಚಿತ್ತವನ್ನು ವಿಧಿಸಿದೆ. ಮಾಡಿರುವ ತಪ್ಪಿಗನುಗುಣವಾಗಿ ಶಿಕ್ಷೆಯೂ ಹೆಚ್ಚಾಗುತ್ತದೆ. ಅದರಲ್ಲಿ ಅತ್ಯಂತ ಕಷ್ಟಕರವಾದುದೆಂದರೆ ಚಾಂದ್ರಾಯಣ ವ್ರತ. ಅದು ಚಂದ್ರನ ವೃದ್ಧಿ ಹಾಗೂ ಕ್ಷಯಗಳನ್ನವಲಂಬಿಸಿರುತ್ತದೆ. ಅದರ ಪ್ರಕಾರ ಪೂರ್ಣಿಮೆಯಂದು 15 ಹಿಡಿ ಅನ್ನವನ್ನು ಅನಂತರ ದಿನಕ್ಕೊಂದರಂತೆ ತುತ್ತನ್ನು ಕಡಿಮೆ ಮಾಡಿಕೊಂಡು ಬಂದು ಅಮಾವಾಸ್ಯೆಯಂದು ಏನನ್ನೂ ಸ್ವೀಕರಿಸದೆ ಮತ್ತೆ ದಿನಕ್ಕೊಂದು ಹಿಡಿಯಂತೆ ಪೂರ್ಣಿಮೆಯ ತನಕ ಏರಿಸುತ್ತಾ ಹೋಗುವುದು.

ಪ್ರಾಯಶ್ಚಿತ್ತದಿಂದ ಪಾಪಗಳು ತೊಳೆಯಲ್ಪಡುತ್ತದೆ :- ಪ್ರಾಯಶ್ಚಿತ್ತಂ ಚ ಕುರ್ವಂತಿತೇನ ತಚ್ಛಾಮ್ಯತೇ ರಜಃ ।[1]

ಕೆಲವು ತಪ್ಪುಗಳಿಗೆ ಪ್ರಾಯಶ್ಚಿತ್ತವಿಲ್ಲ. ಅದರಲ್ಲೊಂದು ಕೃತಘ್ನತೆ. ರಾಮಾಯಣದ ಪ್ರಕಾರ ಕೃತಘ್ನತೆಗೆ ಪ್ರಾಯಶ್ಚಿತ್ತವೇ ಇಲ್ಲ :- ಕೃತಘ್ನೇ ನಾಸ್ತಿ ನಿಷ್ಕೃತಿಃ[2]. ಸ್ಕಂದಪುರಾಣ ಅದನ್ನೇ ಸ್ವಲ್ಪ ಮೃದುವಾಗಿ ತಿಳಿಸುತ್ತದೆ. ಯಾರಿಗೆ ತಮ್ಮ ನಾದಿನಿಯ ಬಗ್ಗೆ ಪ್ರೀತಿಯಿದೆಯೋ ಅವರಿಗೆ ಪ್ರಾಯಶ್ಚಿತ್ತವಿಲ್ಲವೆಂದು.

ವಿಶ್ವಾಸಘಾತುಕಾನಾಂಚ ಕೃತಘ್ನಾನಾಂ ಚ ನಿಷ್ಕೃತಿಃ ।
ಭರ್ತೃ ಭಾರ್ಯಾರತಾನಾಂ ಚ ಪ್ರಾಯಶ್ಚಿತ್ತಂನ ವಿದ್ಯತೇ ॥[3]

ಯಾರು ನಂಬಿಕೆಗೆ ದ್ರೋಹ ಬಗೆಯುತ್ತಾರೋ, ಯಾರು ಕೃತಘ್ನರೋ ಅವರಿಗೆ ವಿನಯವಿದೆ. ಆದರೆ ಯಾರು ನಾದಿನಿಯನ್ನು ಪ್ರೀತಿಸುವರೋ ಅವರಿಗೆ ಯಾವುದೇ ರೀತಿಯ ಪ್ರಾಯಶ್ಚಿತ್ತವಿಲ್ಲ.

ಇವುಗಳಲ್ಲಿ ಯಾವುದು ಅತ್ಯಂತ ಹೇಯ ಅಥವಾ ದಾರುಣ ಎಂದು ತಿಳಿದು ಹೇಳುವುದು ಕಷ್ಟಕರವಾದರೂ ಎಲ್ಲವೂ ಸಮಾನವಾದವಷ್ಟೇ.

ಇದರಲ್ಲಿ ಗೊತ್ತಿದ್ದೂ ಮಾಡಿದಂತಹ ಪಾಪವೂ ಸೇರ್ಪಡೆಯಾಗುತ್ತದೆ. ಸ್ಕಾಂದಪುರಾಣದ ಪ್ರಕಾರ ಯಾವುದು ಗೊತ್ತಿಲ್ಲದೆ ಮಾಡಲ್ಪಟ್ಟಿದೆಯೋ ಅದಕ್ಕೆ ಪ್ರಾಯಶ್ಚಿತ್ತವಿದೆ. ಆದರೆ ಗೊತ್ತಿದ್ದೂ ಮಾಡಿದ್ದಕ್ಕಿಲ್ಲ:-

ಅಜಾನತೋ ಹಿ ಯದ್ ಜಾತಂ ಪಾಪಂ ತಸ್ಯ ಪ್ರತಿಕ್ರಿಯಾ ।
ಕಥಿತಾ ಧರ್ಮಶಾಸ್ತ್ರಜ್ಞೈಃ ಸಕಾಮಸ್ಯ ನ ವಿದ್ಯತೇ ॥[4]

ಕೆಲವು ಸಲ ಕೆಲವರು ಕೆಲವನ್ನು ಬಿಟ್ಟಿರಬಹುದು ಅಥವಾ ಹೆಚ್ಚಾಗಿ ಮಾಡಿರಬಹುದು. ಅದೂ ಪ್ರಾಯಶ್ಚಿತ್ತದೊಳಗೇ ಸೇರ್ಪಡೆಯಾಗಬೇಕು. ಕೆಲವರು ಮಂತ್ರೋಚ್ಚಾರಣೆಯೊಂದಿಗೆ ಅಗ್ನಿಗೆ ಆಹುತಿಯಾಗಿ ಕೊಡುತ್ತಿರಬಹುದು. ಆ ಧಾರ್ಮಿಕ ಕ್ರಿಯೆ ಮುಗಿಯುವ ಮುನ್ನ ಕೊನೆಯದಾಗಿ ಒಂದು ಆಹುತಿಯನ್ನು ಬಿಟ್ಟಿದ್ದಕ್ಕೆ ಅಥವಾ ಅಧಿಕವಾಗಿ ಮಾಡಿದ್ದಕ್ಕೆ ಕೊಡಬೇಕಾಗುತ್ತದೆ - ಯದಸ್ಯ ಕರ್ಮಣೋತ್ಯರಿರಚಂ. ಯದ್ವಾನ್ಯೂನ ಮಿಹಾಕರಂ. ಯಾವುದು ಹೆಚ್ಚಾಗಿ ಮಾಡಲ್ಪಟ್ಟಿತೋ - ಅತ್ಯರೀರಚಂ ಅಥವಾ ಕಡಿಮೆ ಮಾಡಿದನೋ ನ್ಯೂನಂ ಅದಕ್ಕೆ ಪ್ರಾಯಶ್ಚಿತ್ತೀಯಾಹುತಿ ಎಂದು ಹೆಸರು. ಈ ಆಹುತಿಯು ಮಾನವರ ಕಾರ್ಯಲೋಪಕ್ಕೆ ಕ್ಷಮಾಪಣೆಯಂತಹದು.

ಅವನ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲವೆಂದಲ್ಲ. ಬೇರೆಯವರಿಗೂ ಅದನ್ನು ಮಾಡಬಹುದು. ಕಾಳಿದಾಸ ರಘುವಂಶದಲ್ಲಿ ನಿರೂಪಿಸಿರುವಂತೆ ರಾಮನ ಪಾದುಕೆಗಳನ್ನು ಬೇಡಿ ತನ್ನ ಅಣ್ಣನಿಗೆ ವಿಧೇಯವಾಗಿ ಅದರಿಂದ ಎಲ್ಲಾ ದೇವತೆಗಳನ್ನೂ ಸುಪ್ರೀತಿಗೊಳಿಸಿ, ಭರತನು ನಂದಿಗ್ರಾಮದಲ್ಲಿ ವಾಸ್ತವ್ಯ ಮಾಡಿ ತನ್ನ ತಾಯಿ ನುಡಿದ ಪಾಪಕಾರ್ಯಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡ :-

ದೃಢಭಕ್ತರಿತಿಜ್ಯೇಷ್ಠೇ ರಾಜ್ಯತೃಷ್ಣಾ ಪಾರಾಙ್ಮುಖಃ ।
ಮಾತುಃ ಪಾಪಸ್ಯ ಭರತಃ ಪ್ರಾಯಶ್ಚಿತ್ತಮಿವಾಕರೋತ್ ॥

ಈಚಿನ ದಿನಗಳಲ್ಲಿ ಪ್ರಜೆಗಳು ತನ್ನ ಮಾರ್ಗದಲ್ಲಿ ಸಂಚರಿಸದಿದ್ದರೆ ಮಹಾತ್ಮ ಗಾಂಧೀಜಿಯವರು ಅವರ ಪರವಾಗಿ ಉಪವಾಸ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದರು. ಅವರನ್ನು ಸನ್ಮಾರ್ಗದಲ್ಲಿ ತರಲು ವಿಫಲವಾಗಿದ್ದಕ್ಕೆ ಈ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದರು. ಇದಕ್ಕೆ ತಮ್ಮ ವೈಫಲ್ಯವೇ ಕಾರಣವೆಂದೂ ಅವರು ಭಾವಿಸುತ್ತಿದ್ದರು. ಇದು ಸ್ವಯಂಕೃತವಾದ ಪ್ರಾಯಶ್ಚಿತ್ತ ಆಂತರಿಕಾನ್ವೇಷಣೆಯಿಂದ ಬಂದಿರುವಂತಹದಾಗಿತ್ತು. ಇದಕ್ಕೆ ಅತ್ಯಂತ ದಾರುಣ ಉದಾಹರಣೆಯೆಂದರೆ ಹಿಂದೆಯೇ ನಿರೂಪಿಸಿರುವಂತೆ ಗುರುಭಕ್ತಿರೂಪವಾದುದು. ಕುಮಾರಿಲಭಟ್ಟರು ತುಷಾಗ್ನಿ ಪ್ರವೇಶ ಮಾಡಿ ಕ್ರಮಶಃ ತಮ್ಮ ದೇಹವನ್ನು ತಾವೇ ಅರ್ಪಿಸುವುದು ತನ್ನ ಗುರುವಿನ ಮತವನ್ನು ಖಂಡಿಸಿದರ ಪ್ರಾಯಶ್ಚಿತ್ತರೂಪವಾಗಿ.

ಕ್ರಿಶ್ಚಿಯನ್ನರ ಚರ್ಚುಗಳಲ್ಲಿ ಸಮರ್ಪಣಾ ಕೊಠಡಿಗಳಿರುತ್ತದೆ. ಅಲ್ಲಿ ಅವರು ತಮ್ಮ ಮನಸ್ಸನ್ನು ತಿಳಿಪಡಿಸಿಕೊಳ್ಳಲು ವಯಕ್ತಿಕವಾಗಿ ತಮ್ಮ ತಪ್ಪುಗಳನ್ನು ನಿವೇದಿಸಿಕೊಳ್ಳುತ್ತಾರೆ. ಜೈನರಲ್ಲಿ ಕ್ಷಮಾವಾಣೀ ಪರ್ವ ಎಂಬ ವಿಶೇಷ ದಿನವಿದೆ ಅಂದು ಅವರಿಂದಾಗಿರ ಬಹುದಾದಂತಹ ಅಪರಾಧಕ್ಕೆ ಅವರು ಕ್ಷಮೆಯಾಚಿಸುತ್ತಾರೆ.

---

**ಆಕರಗಳು**

1) ರಾಮಾಯಣ.ಕಿಷ್ಕಿಂಧಾಕಾಂಡ .18.35 2) ಅದೇ.4.34.12 3) ವೈ।ಪಾ.ವೇ.ಮ.25.38 4) 15.44 5) 12.19

# 31. ಪುಣ್ಯೋಪಾರ್ಜನೆ

ಭಾರತೀಯ ಆರ್ಷೇಯಗ್ರಂಥಗಳು ಲೆಕ್ಕವಿಲ್ಲದಷ್ಟು ಬಾರಿ ಪುಣ್ಯಸಂಚಯ ಮಾಡಬೇಕೆಂದು ಅಪ್ಪಣೆ ನೀಡುತ್ತದೆ. ಕೇವಲ ಪುಣ್ಯ ಪಡೆಯುವುದು ಮಾತ್ರವಲ್ಲ ಅದನ್ನು ಸಂಚಯವೂ ಮಾಡಬೇಕು. ಅದು ಅವನ ಒಳಿತಿಗಾಗಿಯೇ ಮತ್ತು ಸಮಾಜದ ನಿಯಮದ ದೃಷ್ಟಿಯಿಂದಲೂ ಸಹ. ಪುಣ್ಯವೆಂದರೇನೆಂಬುದು ಪ್ರಶ್ನೆ. ಸುದೀರ್ಘವಾದ ಸಂಸ್ಕೃತ ಸಾಹಿತ್ಯಾನ್ವೇಷಣೆ ಮಾಡಿದರೆ ಈ ಕೆಳಗಿನ ವಿವರಣೆ ದೊರೆಯುತ್ತದೆ. ಅದು ಆ ಶಬ್ದದ ನಿಷ್ಪತ್ತಿಯೂ ಕೂಡ ಹೌದು – ಪುಣ್ಯಾತ್ಮಾನಂ ಪೂಯತೇ ಅನೇನೇತಿವಾ ಪುಣ್ಯಂ[1]. ಯಾವುದರಿಂದ ಶುದ್ಧಿಗೊಳಿಸಲ್ಪಡುವುದೋ ಅಥವಾ ಯಾವುದರಿಂದ ಶುದ್ಧಿಯಾಗುವುದೋ ಅದೇ ಪುಣ್ಯ. ಸುಲಭವಾಗಿ ಹೇಳಬೇಕಾದರೆ ಅದು ಸ್ವಶುದ್ಧಿ. ಬೇರೆಯವರಿಗೆ ಸಹಾಯ ಮಾಡುವುದೇ ಪುಣ್ಯ ಅದಕ್ಕೆ ವಿರುದ್ಧವಾಗಿರುವುದೇ ಪಾಪ – ಬೇರೆಯವರನ್ನು ಹಿಂಸಿಸುವುದು . ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್. ಅದಕ್ಕೆ ಸಮಾನಾರ್ಥ ಪದವೆಂದರೆ ಸುಕೃತ. ಅಕ್ಷರಶಃ ಒಳ್ಳೆಯದನ್ನು ಮಾಡುವುದು ಸು – ಒಳ್ಳೆಯ ಕೃತ – ಮಾಡುವುದು.

ಸಂಪಾದಿಸಿದ ಪುಣ್ಯ ಕೇವಲ ಈ ಜನ್ಮದಲ್ಲಿ ಮಾತ್ರ ಇರುವುದಿಲ್ಲ. ಅದು ಅವನನ್ನು ಹಿಂಬಾಲಿಸುತ್ತದೆ – ಅವನು ಒಪ್ಪುವುದಾದರೆ – ಪುನರ್ಜನ್ಮ – ಮುಂದಿನ ಜನ್ಮದಲ್ಲೂ ಸಹ. ಆದ್ದರಿಂದಲೇ ಯಾವುದಾದರೂ ಒಳ್ಳೆಯದಾದರೆ ಯಾವ ಕಾಣುವ ಸದ್ಯದ ಕಾರಣವಿಲ್ಲದಿದ್ದರೂ ಸಹ ಅದು ಹಿಂದಿನ ಜನ್ಮಾಂತರಗಳ ಫಲವೆಂದೇ ಭಾವಿಸಬೇಕು. ಈ ಭಾವನೆ ಭಾರತೀಯರ ಮನದಾಳದಲ್ಲಿ ಬೇರೂರಿದೆ.

ಒಳ್ಳೆಯ ಕೆಲಸಗಳಿಂದಲೇ ಪುಣ್ಯವನ್ನು ಅರ್ಥಮಾಡಿಕೊಳ್ಳಬೇಕು ಪುಣ್ಯಾನಿ ಎಂದು ಬಹುವಚನ ಬಳಸಿರುವುದು ಅನೇಕ ಸಲವೆಂದು. ಅದು ಮಾನವನು ಯಾವುದೇ ಸ್ಥಿತಿಯಲ್ಲಿದ್ದರೂ ಅವನೊಂದಿಗಿರುತ್ತದೆ. ಅದು ಅವನನ್ನು ದುಷ್ಕೃತ್ಯಗಳಿಂದ ರಕ್ಷಿಸುತ್ತದೆ. ಭರ್ತೃಹರಿ ಹೇಳುವ ಹಾಗೆ :–

ವನೇ ರಣೆ ಶತ್ರು ಜಲಾಗ್ನಿ ಮಧ್ಯೇ
ಮಹಾರ್ಣವೇ ಪರ್ವತ ಮಸ್ತಕೇವಾ ।
ಸುಪ್ತಂ ಪ್ರಮತ್ತಂ ವಿಷಮಸ್ಥಿತಿಂ ವಾ
ರಕ್ಷಂತಿ ಪುಣ್ಯಾನಿ ಪುರಾಕೃತಾನಿ ॥[2]

ಕಾಡಿನಲ್ಲಿ, ರಣರಂಗದಲ್ಲಿ, ಶತ್ರು – ನೀರು – ಬೆಂಕಿಗಳ ನಡುವೆ, ವಿಶಾಲ ಸಾಗರದಲ್ಲಿ ತಪ್ಪಿದ್ದರೂ ಅಥವಾ ವಿಷಮ ಸ್ಥಿತಿಯಲ್ಲಿದ್ದರೂ ಹಿಂದೆ ಮಾಡಿದ ಪುಣ್ಯಗಳು (ಮನುಷ್ಯನನ್ನು) ಕಾಪಾಡುತ್ತದೆ.

ಒಬ್ಬರ ಜೀವನದಲ್ಲಿ ಅಸಾಧ್ಯವಾದ ಘಟನೆಗಳು ನಡೆಯಲು ಕಾರಣವೇಂದರೆ ಪುಣ್ಯದ ಪರಿಪಾಕದಿಂದ. ಹಿಂದಿನ ಜನ್ಮಗಳಲ್ಲಿ ಶೇಖರಣೆಯಾದ ಪುಣ್ಯದ ಫಲ ವಿಶೇಷದಿಂದಲೇ. ಗುಡುಗು ಹಾಗೂ ಸಿಡಿಲು ಪರ್ವತಗಳನ್ನೇ ಸೀಳುವ ಶಕ್ತಿಯುಳ್ಳದ್ದಾದರೂ ಸಹ ಹೂವಿನಂತೆ ಮೃದುವಾಗಿಯೂ, ಬೆಂಕಿಯು ತಾವರೆಯ ಹಾಸಿಗೆಯಂತೆ, ಚಂದ್ರನ ಕಿರಣಗಳಂತೆ ತಂಪಾಗಿಯೂ, ಕತ್ತಿಯ ಚೂಪಾದ ಅಲಗು, ಸುಂದರಿಯ ಮೃದುವಾದ ಕೈಯಂತೆಯೂ ಆಗಬಹುದು :-

ಸಂಭವತೀಹ ಭೋಧಕರಿಪುಃ ಪವಿರಪಿ ಕುಸುಮಂ
ವಹ್ನಿರಪೀಂದು ಪಾದಶಿಶಿರಂ ಮೃದು ಕಮಲವನಮ್ ।
ಖಡ್ಗಲತಾಪಿ ಚಾರುವನಿತಾಮೃದು ಭುಜಲತಾ
ಪ್ರಾಣಿಷು ಪೂರ್ವಜನ್ಮ ಜನಿತಾತ್ ಸುಕೃತ ಬಲತಃ ।।[3]

ಮಾನವರು ಜೀವಿತದಲ್ಲಿ ಏನನ್ನು ಪಡೆಯುತ್ತಾರೋ ಬುದ್ಧಿ, ಸೌಂದರ್ಯ, ಗಂಡುಮಕ್ಕಳು, ಶಕ್ತಿ, ಸಂಪತ್ತು, ಧೈರ್ಯ ಅವೆಲ್ಲವೂ ಅವರ ಪುಣ್ಯ ಸಂಚಯದಿಂದಲೇ ಬರುತ್ತದೆ.

ಬುದ್ಧಿರೂಪಂ, ಬಲಂ ಪುತ್ರಾನ್ ವಿತ್ತಂ ಧೀರತ್ವಮೇವಚ ।
ಪ್ರಾಪ್ನು ವಂತಿ ನರಾಲೋಕೇ ನಿರ್ಜಿತಂ ಪುಣ್ಯಕರ್ಮಭಿಃ ।।[4]

ಪದ್ಮಪುರಾಣ ಇದೇ ಮಾತನ್ನೇ ಪುನರುಚ್ಚರಿಸುತ್ತದೆ :-

ಸರ್ವೇಷಾಮೇವ ಜೀವಾನಾಂ ಧನಂ ಇಷ್ಟಸಮಾಗಮಃ ।
ಜಾಯತೇ ಪುಣ್ಯಯೋಗೇನ ಯಚ್ಚಾತ್ರ ಸುಖಕಾರಣಮ್ ।।[5]

ಸಂಪತ್ತು ಮತ್ತು ಸ್ನೇಹಿತರು ಪುಣ್ಯದ ಕೊಡುಗೆ ಹಾಗೆಯೇ ಸಿರಿ, ಹುಟ್ಟು ಮತ್ತು ಭೋಗಗಳು.

ಮೇಲೆ ಹೇಳಿದಂತೆ, ಪುಣ್ಯವು ಸ್ವಶುದ್ಧಿಯಾಗಿ ಅದು ಬೇರೆಯವರಿಗೆ ಒಳ್ಳೆಯದನ್ನು ಮಾಡುವುದರಿಂದ ಮಾತ್ರವಲ್ಲ. ಬೇರೆ ರೀತಿಯಿಂದಲೂ ಅದನ್ನು ಪಡೆಯಬಹುದು. ತಪಗಯ್ಯುವುದೂ ಒಂದು. ತೀರ್ಥಯಾತ್ರೆ ಕೈಗೊಳ್ಳುವುದು ಮತ್ತೊಂದು. ಸಜ್ಜನರ ಸಂಪರ್ಕ ಸತ್ಪುರುಷರು ಸಾಧುಸಂತರ ಸಹವಾಸ. ಅವರ ಉಪದೇಶಗಳನ್ನಾಲಿಸುವುದು. ತಂದೆತಾಯಿಗಳ ಸೇವೆ, ಗುರುಗಳಲ್ಲಿ ಭಕ್ತಿ ಮತ್ತು ಎಲ್ಲಾ ಹಿರಿಯರನ್ನೂ ಗೌರವಿಸಿವುದು ಮತ್ತೊಂದು. ವೇದಪಠನ, ಭಗವಂತನ ಗುಣಗಾನ ಮಾಡುವುದು ಮತ್ತೊಂದು. ಈ ಪಟ್ಟಿ ಮುಂದುವರಿಯುತ್ತಲೇ ಇರುತ್ತದೆ. ಅರ್ಥಾತ್ ಯಾವುದೇ ಒಳ್ಳೆಯ ಕೆಲಸ. ಆ ಕಾರ್ಯದ ಫಲವು ಒಬ್ಬರ ಜೀವಿತವನ್ನೇ ಬದಲಿಸಬಹುದು. ಈ ಕ್ರಿಯೆಯು ಸುದೀರ್ಘವಾದುದಾದರೆ, ಅನೇಕರಿಂದ ಒಂದೇ ಕ್ರಿಯೆ ಮಾಡಲ್ಪಟ್ಟರೆ ಅವರ ಸಾಮೂಹಿಕ ಸ್ವಭಾವ ಇಹಲೋಕದ ಅಥವಾ ಪಾರಮಾರ್ಥಿಕವಾದುದು ಜೀವಿಗಳ ಮೇಲಾಗಬಹುದು.

ಪುಣ್ಯವಿಲ್ಲದೆ ಒಳ್ಳೆಯ ಕಾರ್ಯಗಳ ಫಲವನ್ನನುಭವಿಸಲಾಗುವುದಿಲ್ಲ -ಪುಣ್ಯೈರ್ವಿನಾ ನಹಿ ಭವಂತಿ ಸಮೀಹಿತಾರ್ಥಾಃ. ಪ್ರಸಿದ್ಧಿಯೂ ಅದರ ಮೇಲೆ ಅವಲಂಬಿಸಿದೆ, ಚಾಣಕ್ಯನೀತಿಯ ಹಿನ್ನಲೆಯಲ್ಲಿ ಈ ಅಂಶವನ್ನು ಚೆನ್ನಾಗಿ ಪ್ರತಿಪಾದಿಸಬಹುದು. ಕೃಷ್ಣನ ಮಲತಾಯಿಯಾದ ಯಶೋದಾ ಗೋವರ್ಧನ ಗಿರಿಯಷ್ಟೂ ತನಗೆ ಬೆಲೆ ದೊರೆಯದಿದ್ದುದರಿಂದ ಕೃಷ್ಣನು ಅದನ್ನು ತನ್ನ ಕಿರುಬೆರಳಿನಿಂದಲೇ ಎತ್ತಿದ್ದರಿಂದ ಆದರೆ ತಾನು ಜಗನ್ನಿಯಾನುಕನಿಗೆ ಹಾಲುಣಿಸಿದುದೂ ಪ್ರಯೋಜನಕ್ಕೆ ಬರಲಿಲ್ಲ :-

ಊರ್ಧ್ವಂ ಕೋಪಿ ಮಹೀಧರೋ ಲಘುತರೋ ಅಂಗುಲ್ಯಾಧೃತೋ ಲೀಲಯಾ
ತೇನತ್ವಂದಿವಿ ಭೂತಲೇಚ ಸತತಂ ಗೋವರ್ಧನೋಗೀಯಸೇ ।
ತ್ವಾಂ ತ್ರೈಲೋಕ್ಯಧರಂ ವಹಾಮಿಕುಚಯೋರಗ್ರೇ ನ ತದ್ ಗಣ್ಯತೇ
ಕಿಂ ವಾ ಕೇಶವ ಭಾಷಣೇನ ಬಹುಧಾ ಪುಣ್ಯೈರ್ಯಶೋ ಲಭ್ಯತೇ ॥[7]

ಈ ಪ್ರಪಂಚದಲ್ಲಿರುವದೆಲ್ಲವೂ ಕ್ಷಣಿಕ. ಮುಪ್ಪು ಸುಂದರರಾಗಿರುವವರನ್ನೂ ಕೊಲ್ಲುತ್ತದೆ. ಸೇರ್ಪಡೆಯಿಂದ ಅಗಲುವಿಕೆಯಿದೆ. ಎಷ್ಟೇ ಜೀವಿತ ದೀರ್ಘವಾಗಿದ್ದರೂ ಸಹ ಅದು ಒಂದಲ್ಲ ಒಂದುದಿನ ಕೊನೆಗಾಣುತ್ತದೆ ಪುಣ್ಯವೇ ಶಾಶ್ವತವಾದುದು. ಆದ್ದರಿಂದ ಅದರಲ್ಲಿ ಮುನ್ನಡೆ. ಅದೇ ಸಂತಸದ ಹಾಗೂ ಸಿರಿಯ ಮೂಲ. ಒಳ್ಳೆಯವರ ಆಸೆಗಳು ಕೂಡಲೇ ಪೂರೈಸಲ್ಪಡುತ್ತದೆ. ಅವಲ್ಲಿರುವ ಪುಣ್ಯವೇ ಆಸೆಯನ್ನು ನೀಗಿಸುವ ಕಲ್ಪವೃಕ್ಷ - ಸದ್ಯ ಏವ ಸುಕೃತಂ ಹಿ ಪಚ್ಯತೇ ಕಲ್ಪವೃಕ್ಷ ಫಲಧರ್ಮೀ ಕಾಂಕ್ಷಿತಂ[10]. ಪುಣ್ಯ ಸಂಪಾದಿಸಿದವರೇ ಇದನ್ನೂ ಪಡೆಯುತ್ತಾರೆ :- ಒಳ್ಳೆಯ ಕೆಲಸಗಳಿಂದ ಮಗ ತಂದೆಗೆ ಸಂತಸವನ್ನು ತರುತ್ತಾನೆ - ಯಃಸುಚರಿತೈಃ ಪಿತರಂ ಪ್ರೀಣಯತಿ - ಗಂಡನ ಒಳಿತನ್ನೇ ಯಾವಾಗಲೂ ಬಯಸುವ ಹೆಂಡತಿ - ಯದ್ಭರ್ತುರೇವ ಹಿತಮಿಚ್ಛತಿ ತತ್ ಕಲತ್ರಂ. ಸುಖದುಃಖಗಳಲ್ಲಿ ಜೊತೆಯಿರುವ ಸ್ನೇಹಿತ - ಆಪದಿಸುಖೇಚ ಸಮಕ್ರಿಯಂ ಮಿತ್ರಂ[11].

ಭಾರತೀಯ ಪರಂಪರೆಯಲ್ಲಿ ಮಿತ್ರನೇ ಅತ್ಯಂತ ಶ್ರೇಷ್ಠ ಜೊತೆಗಾರ. ಪುಣ್ಯದಿಂದಲೇ ಅಂತಹ ಮಿತ್ರರು ದೊರೆಯುತ್ತಾರೆ. ಅವರೊಂದಿಗೆ ಸಂಭಾಷಣೆಯಲ್ಲಿ ತೊಡಗುವ, ಅವನೊಡನಿರುವ ಅವರೊಂದಿಗೆ ವಿಚಾರವಿನಿಮಯ ಮಾಡಿಕೊಳ್ಳುವಂತಹರು :-

ಯಸ್ಯ ಮಿತ್ರೇಣ ಸಂಭಾಷಾ ಯಸ್ಯ ಮಿತ್ರೇಣ ಸಂಸ್ಥಿತಿಃ ।
ಯಸ್ಯ ಮಿತ್ರೇಣ ಸಂಲಾಪಃ ತತೋನಾಸ್ತೀಹ ಪುಣ್ಯವಾನ್ ॥[12]

ಪುಣ್ಯವಂತರಿಗೆ ಸಿಗುವ ಗುಣಗಳನ್ನು ಚತುರ್ವರ್ಗ ಸಂಗ್ರಹ ನಿರೂಪಿಸುತ್ತದೆ :-

ಪರದ್ರವಿಣ ನಿಃಸ್ಪೃಹಃ ಪರಕಲತ್ರನಿಷ್ಕೌತುಕಃ
ಪರಪ್ರಣಯವತ್ಸಲಃ ಪರನಿಕಾರಬದ್ಧಕ್ಷಮಃ ।
ಪರಸ್ತುತಿವಿಶಾರದಃ ಪರಗುಣಾಪವಾದೋಚ್ಛಿತಃ

**ಪರಾತಿಹರಣೋದ್ಯುತೋ ಭವತಿ ಭೂರಿ ಪುಣ್ಯೈರ್ನರಃ ॥**[13]

ಪುಣ್ಯಪರಿಪಾಕದ ವಿಶೇಷದಿಂದಲೇ ತನ್ನ ಸಿರಿಯ ಬಗ್ಗೆ ಅವನಿಗೆ ಆಸಕ್ತಿ ಇರುವುದಿಲ್ಲ. ಬೇರೆಯವರ ಹೆಂಡತಿಯ ಬಗ್ಗೆ ಅನಾಸಕ್ತಿ, ಬೇರೆಯವರಿಂದ ಪ್ರೀತಿ, ಬೇರೆಯವರು ಅವಮಾನ ಮಾಡಿದರೆ ಅದಕ್ಕೆ ಕ್ಷಮೆ, ಬೇರೆಯವರನ್ನು ಹೊಗಳುವುದರಲ್ಲಿ ನೈಪುಣ್ಯ, ಬೇರೆಯವರ ಬಗ್ಗೆ ಕೆಟ್ಟದಾಗಿ ಮಾತನಾಡದಿರುವುದು ಮತ್ತು ಬೇರೆಯವರ ಕಷ್ಟ ನಿರ್ಮೂಲನಕ್ಕೆ ಯಾವಾಗಲೂ ಸಿದ್ಧವಾಗಿರುವುದು. ಮತ್ತೆ ಪುಣ್ಯದಿಂದಲೇ, ತಾವಾಗಿಯೇ ಒಳ್ಳೆಯವರಾಗಿದ್ದರೂ ಸಹ ಬೇರೆ ಒಳ್ಳೆಯವರೊಂದಿಗೆ ಸಂಪರ್ಕಕ್ಕೆ ಬರುತ್ತಾರೆ :- **ಸತಾಂಸಂಗಃ ಸದ್ಭಿಃ ಕಥಮಪಿ ಹಿ ಪುಣ್ಯೇನ ಭವತಿ**

ಈ ಪ್ರಸ್ತುತ ಪುಣ್ಯದ ಬಗ್ಗೆಯ ವಿಚಾರವನ್ನು ಮುಗಿಸುವ ಮುನ್ನ ಮಾನವನ ಪ್ರಕೃತಿಯಲ್ಲಿ ಯಾವಾಗಲೂ ಪುಣ್ಯ-ಪಾಪಗಳ ನಡುವೆ ಘರ್ಷಣೆ ಇದ್ದೇ ಇದೆ. ಅವು ಎಷ್ಟು ವಿರುದ್ಧ ಸ್ವಭಾವದವೆಂದರೆ ಚಳಿ, ಬಿಸಿಯಂತೆ. ಈ ಘರ್ಷಣೆಯಲ್ಲಿ ಯಾವುದು ಬಲಿಷ್ಠವೋ ಅದೇ ಗೆಲ್ಲುತ್ತದೆ :-

**ಶೀತೋಷ್ಣವತ್ ಪರಸ್ಪರ ವಿರುದ್ಧಯೋರಿಹ ಹಿ ಸುಕೃತ ದುಷ್ಕೃತಯೋಃ ।**
**ಸುಖದುಃಖ ಫಲೋದ್ಭವಯೋರ್ದುರ್ಬಲಮ್ ಅಭಿಭೂಯತೇ ಬಲಿನಾ ॥**[14]

ಆದ್ದರಿಂದ ಪ್ರತಿಯೊಂದು ಹಂತದಲ್ಲೂ ಪುಣ್ಯದ ದಾರಿಯನ್ನೇ ಅನುಸರಿಸಬೇಕು ಅದು ಅನಂತ ಫಲಪ್ರದವಾದುದರಿಂದ ಹಾಗೂ ಪಾಪದ ಮಾರ್ಗವನ್ನು ಅನುಸರಿಸಬಾರದು.

---

**ಆಕರಗಳು**

**1) ಸರ್ವಾರ್ಥಸಿದ್ಧಿ.6.2. 2) ನೀತಿಶತಕ.97 3) ಪದ್ಮಪುರಾಣ.17.405 4) ರಾಮಾಯಣ. 7.15.27 5) 36.78 6) ಶೃಂಗಾರಶತಕ.17 7) 15.19 8) ಜಾನಕೀಹರಣ.15.21 9) ಮಹಾಪುರಾಣ.37.200 10) ರಘುವಂಶ.11.50 11) ನೀತಿಶತಕ.68 12) ಹಿತೋಪದೇಶ.1.39 13) 1.17 14) ಧರ್ಮಾಮೃತ.1.61.**

# 32. ಸತ್ಸಂಗತಿ

ಒಳ್ಳೆಯವರೊಡನೆ ಸಹವಾಸ

ಆಂಗ್ಲಭಾಷೆಯಲ್ಲಿ ಒಂದು ಹೇಳಿಕೆಯಿದೆ – "A MAN IS KNOWN BY THE COMPANY HE KEEPS".ಅವನು ಒಳ್ಳೆಯ ಸಹವಾಸದಲ್ಲಿದ್ದರೆ, ಅವನು ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳುವನು. ಆ ಸಹವಾಸ ಕೆಟ್ಟದಾಗಿದ್ದರೆ, ಕೆಟ್ಟವನಾಗಿರುವನು. ಅದೇ ಅಭಿಪ್ರಾಯವೇ ಈ ಸಂಸ್ಕೃತಿಯಲ್ಲೂ ಬರುತ್ತದೆ – ಸಂಸರ್ಗತಾ ದೋಷಗುಣಾ ಭವಂತಿ – ಕೆಟ್ಟದ್ದು, ಒಳ್ಳೆಯದು ಸಂಪರ್ಕದಿಂದ ಬರುತ್ತದೆ. ಈ ಹೇಳಿಕೆಯಲ್ಲಿ ದೋಷ ಮೊದಲು ಹೇಳಿ ಗುಣ ನಂತರ ಹೇಳಿರುವುದು ಆಶ್ಚರ್ಯ. ಅದಕ್ಕೆ ಕಾರಣವಿಲ್ಲವೆಂದಲ್ಲ. ಅದಕ್ಕೊಂದು ಕಾರಣವಿದೆ. ಸಾಮಾನ್ಯವಾಗಿ ಅನುಕ್ರಮಣಿಯಂತೆ ದ್ವೇಷಕ್ಕೆ ಹಿಂದೆ ಗುಣ ಬರಬೇಕು ಆಗ ಅದಕ್ಕೆ ಗೌರವವಿರುತ್ತದೆ. ವಾರ್ತಿಕದಲ್ಲಿ ಹೇಳಿರುವಂತೆ – ಅಭ್ಯರ್ಹಿತಂಚ ಪೂರ್ವಂ ಸೂತ್ರ ಅಲ್ಪಾಕ್ಷರಂ (2.2.34). ಈ ಮೇಲಿನ ವಿರುದ್ಧವಾಗಿ ಮೊದಲೇ ದೋಷಶಬ್ದ ಬಳಕೆಯಾಗಿದೆ. ಅದು ನಿಯಮಕ್ಕೆ ಬಹಳ ಬೇಗ ಬರುತ್ತದೆ. ಅದೇ ಮಾನವನ ಪ್ರಕೃತಿ. ಗುಣಗಳು ಗುಣವಂತರ ಸಂಪರ್ಕದಿಂದ ಬರುವುದರಿಂದ ಅದು ಮತ್ತೆ ಮತ್ತೆ ಒತ್ತಿ ಹೇಳಲ್ಪಟ್ಟಿದೆ.

ಹೂವಿನ ಪರಿಮಳ, ನೀರು, ಬಟ್ಟೆ, ಸಾಸಿವೆಕಾಳು, ಎಣ್ಣೆ ಅವು ಹೂವಿನ ಸಂಪರ್ಕಕ್ಕೆ ಬರುವಂತೆ. ಅದರ ಸಂಪರ್ಕವೇ ಅದರ ನಿಜವಾದ ಗುಣಕ್ಕೆ ದ್ಯೋತಕ :-

ಅಪೋವಸ್ತ್ರಂ ತಿಲಸ್ತೈಲಂ ಗಂಧೋ ವಾಸೋ ಯಥಾ ತಥಾ ।
ಪುಷ್ಪಾಣಾಮಧಿವಾಸೇನ ತಥಾ ಸಂಪರ್ಕಜಾ ಗುಣಾಃ ॥[1]

ಗುಣವಂತರ ಸಂಪರ್ಕವೇ ವಿಷಯಗಳ ಬದಲಾವಣೆಗೆ ಕಾರಣವಾಗುತ್ತದೆ. ಗಿಳಿಗಳು ಕಾಡಿನ ಮರಗಳ ಕೊನೆಯಲ್ಲಿದ್ದರೂ ಮಾನವರನ್ನು ಕಂಡೊಡನೆಯೇ ರಾಮ ಎಂದು ಸುತ್ತಲೂ ಹೇಳುತ್ತಿರುವಾಗ ತಾವೂ ಅದನ್ನು ಉಚ್ಚರಿಸಿ ಅಲ್ಲಿಂದ ಹಾರುವಂತೆ :-

ಕಾಂತಾರಭೂಮಿ ಸಹ ಮೌಲಿ ನಿವಾಸಶೀಲಾಃ
ಪ್ರಾಯಃ ಪಲಾಯನ ಪರಾ ಜನವೀಕ್ಷಣೇನ ।
ಕೂಜಂತಿತೇಽಪಿ ಹಿ ಶುಕಾಃ ಖಲು ರಾಮನಾಮ
ಸಂಗಃ ಸ್ವಭಾವ ಪರಿವರ್ತವಿಧೌ ನಿದಾನಂ ॥[2]

ಈ ಸನ್ನಿವೇಶ ಶಂಕರಾಚಾರ್ಯರು ಮಂಡನಮಿಶ್ರರ ಮನೆ ಹುಡುಕುವ ಸಂದರ್ಭದಲ್ಲಿ ಹೆಂಗಸರು ಬಾವಿಯಿಂದ ನೀರನ್ನು ಸೇದುವ ಪ್ರಸಂಗ ನೆನಪು ಮಾಡುತ್ತದೆ. ಯಾವ ಮನೆಯ ಹೊರಗಿನ ಗೂಡಿನಲ್ಲಿ ಹೆಣ್ಣು ಗಿಳಿಗಳು ಜಗತ್ತು ಸ್ಥಿರವೋ, ಅಸ್ಥಿರವೋ, ಸ್ವತಃ ಪ್ರಮಾಣವೋ ಪರತಃ ಪ್ರಮಾಣವೋ ಎಂದು ವಾದದಲ್ಲಿ ನಿರತವಾಗಿರುವುವೋ ಅದನ್ನೇ ಮಂಡನ ಪಂಡಿತನ ಮನೆಯೆಂದು ಭಾವಿಸು. – ಜಾನೀಹಿತಂ ಮಂಡನ ಪಂಡಿತೌಕಃ ।

ಮಾನವ ಯಾರ ಸಂಪರ್ಕದಲ್ಲಿರುವನೋ, ಯಾರ ಸೇವೆ ಮಾಡುವನೋ, ಅವರಂತೆ ಅವನಾಗುತ್ತಾನೆ :-

ಯಾದೃಶಃ ಸಂನಿವಿಶತೇ ಯಾದೃಶ್ಯೆಶ್ಚೋಪಸೇವತೇ ।
ಯಾದೃಗಿಚ್ಛತಿ ಚ ಭವಿತುಂ ತಾದೃಗ್ ಭವತಿ ಪುರುಷಃ ॥3

ಯಾವಾಗ ನೀಚರ ಸಹವಾಸವಿರುವುದೋ. ಅವರ ಬುದ್ಧಿ ಮಟ್ಟವೂ ಅದೇ ಬುದ್ಧಿಮಟ್ಟಕ್ಕಿಳಿಯುತ್ತದೆ. ಯಾರು ಮಧ್ಯಸ್ಥದವರೊಂದಿಗೆ ಸಹವಾಸ ಮಾಡುವರೋ ಅವರ ಮಟ್ಟವೂ ಉನ್ನತವಾಗುತ್ತದೆ.

ಬುದ್ಧಿಶ್ಚಹೀಯತೇ ಪುಂಸಾಂ ನೀಚೈಃ ಸಹ ಸಮಾಗಮಾತ್ ।
ಮಧ್ಯಮೈ ರ್ಮಧ್ಯತಾಂ ಯಾತಿ ಶ್ರೇಷ್ಠತಾಂಯಾತಿ ಚೋತ್ತಮೈಃ ॥4

ಇದೇ ಅಭಿಪ್ರಾಯವನ್ನು ಭರ್ತೃಹರಿ ಅಲಂಕಾರಿಕವಾಗಿ ಹೇಳುತ್ತಾನೆ.

ಸಂತಪ್ತಾಯಸಿ ಸಂಸ್ಥಿತಸ್ಯ ಪಯಸೋ ನಾಮಾಪಿ ನ ಶ್ರೂಯತೇ
ಮುಕ್ತಾಕಾರತಯಾ ತದೇವ ನಲಿನೀಪತ್ರಸ್ಥಿತಂ ರಾಜತೇ ।
ಸ್ವಾತ್ಯಾಂ ಸಾಗರ ಶುಕ್ತಿ ಮಧ್ಯಪತಿತಂ ತನ್ ಮೌಕ್ತಿಕಂ ಜಾಯತೇ
ಪ್ರಾಯೇಣಾಧಮ ಮಧ್ವಮೋತ್ತಮ ಜುಷಾಂ ಏವಂ ದಿಧಾವೃತ್ತಯಃ ॥[5]

ಕಾದಿರುವ ಕಬ್ಬಿಣದ ಮೇಲೆ ಇರಿಸಿದ ನೀರು ಹೇಳಹೆಸರಿಲ್ಲದಂತಾಗುತ್ತದೆ. ಅದೇ ಕಮಲದ ಎಲೆಯ ಮೇಲಿದ್ದರೆ ಮುತ್ತಿನ ಆಕಾರದಲ್ಲಿ ಶೋಭಿಸುತ್ತದೆ. ಸ್ವಾತೀ ನಕ್ಷತ್ರದ ಮಳೆಯ ಅದೇ ನೀರು ಸಮುದ್ರದ ಕಪ್ಪೆಚಿಪ್ಪಿನಲ್ಲಿ ಬಿದ್ದು ಮುತ್ತಾಗಿಯೇ ಪರಿಣಮಿಸುತ್ತದೆ. ಹೀಗೆ ಸಾಮಾನ್ಯವಾಗಿ ಅಧಮ, ಮಧ್ಯಮ ಮತ್ತು ಉತ್ತಮ ಗುಣಗಳು ಸಹವಾಸದಿಂದುಂಟಾಗುತ್ತದೆ.

ಒಳ್ಳೆಯದೆಂದರೆ ಬೇರೆಯವರೊಡನೆ ಸಹವಾಸ ಮಾಡದಿರುವುದು (ಅದೇ ಎಲ್ಲಾ ಕೆಡಕುಗಳಿಗೆ ದಿವ್ಯೌಷಧಿ) ಅದನ್ನು ಬಿಡಲಾಗದಿದ್ದರೆ ಆಗ ಒಳ್ಳೆಯವರೊಂದಿಗೆ ಸಹವಾಸ ಮಾಡಬೇಕು. ಅದೇ ಅದಕ್ಕೆ ದಿವ್ಯೌಷಧಿ (ಪ್ರಾಪಂಚಿಕ ವಿಷಯಗಳೊಂದಿಗೆ ಸೇರ್ಪಡೆ ಎಂಬ ರೋಗಕ್ಕೆ)

ಸಂಗಃ ಸರ್ವಾತ್ಮನಾ ತ್ಯಾಜ್ಯಃ ಸ ಚೇತ್ ತ್ಯಕ್ತುಂ ನ ಶಕ್ಯತೇ ।
ಸಃ ಸದ್ಭಿಃ ಸಹ ಕರ್ತವ್ಯಃ ಸತಾಂ ಸಂಗೋ ಹಿ ಭೇಷಜಂ ॥[6]

ಸತ್ಪುರುಷರ ಸಂಗದಿಂದ ಸಾಮಾನ್ಯನೂ ಸಹ ಮಹಾತ್ಮನಾಗುತ್ತಾನೆ. ಹೂವಿನ ಸಹಾಯದಿಂದ ಒಂದು ಕ್ರಿಮಿಯೂ ಸಹ ಒಳ್ಳೆಯವರ ಮುಡಿಗೆ ಏರುತ್ತದೆ. ಒಂದು ಶಿಲೆಯೂ ಸಹ ಮಹಾತ್ಮರ ಹಸ್ತದಿಂದ ಪವಿತ್ರವಾಗುತ್ತದೆ.

ಕೀಟೋಽಪಿ ಸುಮನಃ ಸಂಗಾತ್ ಆರೋಹತಿ ಸತಾಂ ಶಿರಃ ।
ಅಶ್ಮಾ ಪಿಯಾತಿ ದೇವತ್ವಂ ಮಹದ್ಭಿಃ ಸುಪ್ರತಿಷ್ಠಿತಃ ॥[7]

ಸಂಸಾರವೆಂಬುದೇ ವಿಷವೃಕ್ಷ ಆದರೆ, ಅದು ಎರಡು ಅಮೃತ ಸದೃಶವಾದ ಫಲ ನೀಡುತ್ತದೆ – ಒಳ್ಳೆಯ ಕಾವ್ಯದ ರಸಾಸ್ವಾದನೆ ಮತ್ತು ಸಜ್ಜನರ ಸಹವಾಸ :-

ಸಂಸಾರ ವಿಷ ವೃಕ್ಷಸ್ಯ ದ್ವೇ ಏವ ರಸವತ್ ಫಲೇ ।
ಕಾವ್ಯಾಮೃತ ರಸಾಸ್ವಾದಃ ಸಂಗಮಃ ಸುಜನೈಃ ಸಹ ॥[8]

ಸಜ್ಜನರ ಸಹವಾಸದಿಂದಾಗುವ ಪರಿಣಾಮವನ್ನು ಭರ್ತೃಹರಿ ಮನೋಜ್ಞವಾಗಿ ನಿರೂಪಿಸುತ್ತಾನೆ :-

ಜಾಡ್ಯಂ ಧಿಯೋ ಹರತಿ ಸಿಂಚತಿ ವಾಚಿ ಸತ್ಯಂ
ಮಾನೋನ್ನತಿಂ ದಿಶತಿ ಪಾಪಮಪಾಕರೋತಿ ।
ಚೇತಃ ಪ್ರಸಾದಯತಿ ದಿಕ್ಷು ಕರೋತಿ ಕೀರ್ತಿಂ
ಸತ್ಸಂಗತಿಃ ಕಥಯ ಕಿಂನ ಕರೋತಿ ಪುಂಸಾಂ ॥[9]

ಬುದ್ಧಿಮಾಂದ್ಯವನ್ನು ಹೋಗಲಾಡಿಸುತ್ತದೆ. ಮಾತಿನಲ್ಲಿ ಸತ್ಯವನ್ನು ಸಿಂಪಡಿಸುತ್ತದೆ. ಗೌರವದ ವರ್ಧನೆಯನ್ನು ತೋರಿಸಿಕೊಡುತ್ತದೆ. ಕೆಟ್ಟ ಕೃತ್ಯವನ್ನು ಇಲ್ಲವಾಗಿಸುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುತ್ತದೆ. ಎಲ್ಲೆಡೆ ಕೀರ್ತಿಯನ್ನು ಹರಡುತ್ತದೆ. (ಹೀಗೆ) ಸಜ್ಜನರ ಒಡನಾಟವು ಮನುಷ್ಯರಿಗೆ ಯಾವ ಒಳಿತನ್ನು ತಾನೇ ಉಂಟುಮಾಡುವುದಿಲ್ಲ!

ಲಿಂಗದೇವ ಎಂಬ ಹೆಸರಿನ ರಾಜನಿದ್ದನು. ಅವನ ಮಗ ಪ್ರವೀಣ್ ಸಿಂಗ್ ಕೆಟ್ಟಸಹವಾಸ ಮಾಡಿದ. ಅವನ ಕೆಡುಕಿನ ಬಗ್ಗೆ ಅನೇಕ ದೂರುಗಳಿದ್ದವು. ಇದರಿಂದ ರಾಜ ಅತ್ಯಂತ ಚಿಂತಿತನಾಗಿದ್ದನು. ಪ್ರವೀಣ್ ಇನ್ನೂ ಚಿಕ್ಕವನಾಗಿದ್ದರಿಂದ ಅವನ ಸ್ವಭಾವ ಪರಿವರ್ತನೆ ಮಾಡಿಕೊಂಡು ನನಗೆ ಒಳ್ಳೆಯ ಉತ್ತರಾಧಿಕಾರಿಯಾಗಬಹುದೆಂಬ ಭಾವನೆಯಿತ್ತು. ಸೋಮದೇವನೆಂಬ ಗುರುವು ಆ ಹುಡುಗನನ್ನು ಆರು ತಿಂಗಳವರೆಗೆ ತನ್ನ ಆಶ್ರಮದಲ್ಲೇ ಇರುವಂತೆ ಹೇಳಿದ. ರಾಜ ಹಾಗೇ ಮಾಡಿದ. ಹುಡುಗ ಗುರುವಿನೊಂದಿಗೇ ಇದ್ದ ಆಗ ತನಗಾಗಿ ಏನಾದರೂ ಮಾಡುವಂತೆಯೇ ಹೇಳುತ್ತಿದ್ದ. ಮೂರು ತಿಂಗಳು ಹಾಗೆಯೇ ಕಳೆಯಿತು. ಗುರು ಎಲ್ಲಾ ಒಳ್ಳೆಯ ವಿಚಾರವನ್ನೂ ಅವನ ತಲೆಗೆ ಹಾಕಿದ. ನಿಧಾನವಾಗಿ ಆ ಹುಡುಗನ ಮೇಲೆ ಅದರ ಪರಿಣಾಮವಾಯಿತು. ಒಂದು ದಿನ ಗುರು ಹೇಳಿದ – ಭಗವಂತ ಎಲ್ಲೆಡೆ ಇದ್ದಾನೆಂದು. ನೀನೇನಾದರೂ ಕೆಟ್ಟದ್ದನ್ನು ಮಾಡಿದರೆ ಅದು ದೇವರಿಗೆ ಗೊತ್ತಾಗುತ್ತದೆ ಮತ್ತು ನೀನು ಅದರ ಕೆಟ್ಟ ಫಲ ಅನುಭವಿಸಬೇಕಾಗುತ್ತದೆ. ಏನೇ ಆಮಿಷವಿದ್ದರೂ ಅದನ್ನು ನಿಗ್ರಹಿಸಬೇಕು ಮತ್ತು ಯಾವ ಕೆಟ್ಟದ್ದನ್ನೂ ಮಾಡಬಾರದು ಹಾಗೂ ಭಗವಂತನ ಅಸ್ತಿತ್ವವನ್ನು ನೆನೆಯಬೇಕು. ಒಂದು ದಿನ ಒಂದು ಮೊಲವನ್ನು ಕೊಲ್ಲುವಂತೆ ಗುರು ಆಜ್ಞಾಪಿಸಿದ. ಗುರುವಿನ ಆದೇಶವನ್ನು ಪಾಲಿಸಲು ಪ್ರಯತ್ನಿಸಿದ. ಆದರೆ ವಿಫಲವಾದ ಯಾವುದೇ ಕೆಲಸ ಮಾಡಲು ಉದ್ಯುಕ್ತನಾದರೂ ಸಹ ಭಗವಂತನನ್ನೇ ಅಲ್ಲಿ ನೋಡಲಾರಂಭಿಸಿದ. ಮೊಲವನ್ನು ಕೊಲ್ಲಲಾಗದೆ ಗುರುವಿನ ಬಳಿ ಬಂದು ತನ್ನ ತೊಂದರೆಯನ್ನು ತೋಡಿಕೊಂಡ. ಆಗ ಗುರು ಅವನನ್ನು ಹಿಡಿದುಕೊಂಡು ಹೇಳಿದ – ನೀನು ನಿನ್ನ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವೆ. ಆ ಹುಡುಗ ತನ್ನ ತಂದೆಯ ಬಳಿ ಹೋಗಿ ಒಬ್ಬ ಒಳ್ಳೆಯ ಉತ್ತರಾಧಿಕಾರಿಯಾದ.

ಒಳ್ಳೆಯವರ ಸಹವಾಸವು ಹೇಗೆ ಮನಃಪರಿವರ್ತನೆ ಮಾಡುತ್ತದೆ ಎನ್ನುವುದಕ್ಕೆ ಮತ್ತೊಂದು ಕಥೆಯಿದೆ. ತಮ್ಮ ತಿರುಗಾಟದಲ್ಲಿ ಸಂತರ ಗುಂಪು ಹಳ್ಳಿಗೆ ಬಂದರು. ಅದು ಚಳಿಗಾಲದ ಸಂಜೆಯಾಗಿತ್ತು. ಆ ಸಂತರು ಸಂಜೆ ತಂಗಲು ಒಂದು ಪ್ರದೇಶ ಹುಡುಕುತ್ತಿದ್ದರು. ಅವರು ಒಬ್ಬ ಹಣವಂತನನ್ನು ಕೇಳಿದಾಗ ಅವನು ಹೇಳಿದ ತನಗೆ ಎರಡು ಅಂಗಡಿಗಳಿದೆಯೆಂದು. ಒಂದು ಮಾರಾಟದ ನೂಲಿನಿಂದ ಕೂಡಿದೆ, ಎರಡನೆಯದು ಸಂಪೂರ್ಣವಾಗಿ ಬರಿದಾಗಿದೆಯೆಂದು. ಬರಿದಾಗಿರುವುದನ್ನು ಅವರು ಅಂದಿನ ರಾತ್ರಿ ತಂಗಲು ಬಳಸಬಹುದು. ಸಂತರು ಮೂವರಿದ್ದರು, ಯುವಕರಾಗಿದ್ದ ಇಬ್ಬರು ಅಂಗಡಿಗೆ ಬಂದೊಡನೆಯೇ ನಿದ್ರಿಸಿದರು. ಹಿರಿಯವನೂ ನಿದ್ರಿಸಿದ ಆದರೆ ಅವನ ನಿದ್ದೆಗೆ ಕಾರಣವಿಲ್ಲದೆಯೇ ಭಂಗವಾಯಿತು. ತಾನು ಹೇಗಿದ್ದರೂ ಎದ್ದಿರುವುದರಿಂದ ಮತ್ತೆ ನಿದ್ದೆ ಮಾಡುವ ಬದಲು ಧ್ಯಾನ ಮಾಡಿ ಭಗವನ್ನಾಮವನ್ನು ಉಚ್ಚರಿಸಬಹುದೆಂದುಕೊಂಡ. ಸ್ವಲ್ಪ ಸಮಯದ ನಂತರ ಪಕ್ಕದ ಅಂಗಡಿಯಿಂದ ಶಬ್ದ ಅವನಿಗೆ ಕೇಳಿಸಿತು. ಅಲ್ಲಿ ಯಾರಿರುವರೆಂದು ಅವನು ಕೂಗಿ ಕರೆದ. ಅಂಗಡಿಯ ಒಳಗೆ ಇದ್ದವರು ನೋಡಿದಾಗ ಒಬ್ಬ ಸಂತ ಪ್ರಾರ್ಥನೆ ಸಲ್ಲಿಸುತ್ತಿದ್ದುದನ್ನು ನೋಡಿದ. ಅವನಿಂದ ಯಾವ ತೊಂದರೆಯನ್ನೂ ಊಹಿಸದೆ ಹೇಳಿದರು. ನಾವು ಕಳ್ಳರು ಈ ಪೂರ್ತಿ ತುಂಬಿರುವ ಅಂಗಡಿಯನ್ನು ಬರಿದು ಮಾಡಲು ನಾವು ಬಂದಿರುವೆವು. ಅದಕ್ಕೆ ಅಂತಹ ಹೀನ ಕೃತ್ಯವೆಸಗಬಾರದೆಂದು ಸಂತ ನುಡಿದ. ಅದು ಆ ಕಳ್ಳರ ಮೇಲೆ ಅಗಾಧವಾದ ಪರಿಣಾಮವುಂಟಾಯಿತು. ಸಂತ ಅವರಿಗೆ ಸನ್ನಡತೆಯ ಬಗ್ಗೆ ಒಂದು ಪ್ರವಚನ ನೀಡಿದ ಅದರ ತಾತ್ಪರ್ಯವೆಂದರೆ ದುಷ್ಕೃತ್ಯದಿಂದ ಒದಗಬಹುದಾದ ಪಾಪ, ಸ್ವಲ್ಪ ಸಮಯ ಕಳೆಯಿತು. ಆಗ ಮುಂಜಾನೆ ಹಣವಂತನಾದ ಅಂಗಡಿಯ ಯಜಮಾನ ಸಂತರಿಗೆ ಏನಾದರೂ ಬೇಕಾಗಬಹುದೆಂದು ಭಾವಿಸಿ ಅಂಗಡಿಗೆ ಬಂದ. ಆಗ ಅವನು ಎರಡೂ ಅಂಗಡಿಗಳಲ್ಲೂ ಹಿರಿಯ ಸಂತನನ್ನು ಸುತ್ತು ನೆರೆದಿದ್ದ ಅಪರಿಚಿತ ವ್ಯಕ್ತಿಗಳನ್ನು ಕಂಡ. ಎಲ್ಲೂ ಯಾವ ಮಾಲೂ ಕಾಣಲಿಲ್ಲ, ಅಪರಿಚಿತರೊಂದಿಗೆ ಮಾತಾದಾಗ ತಿಳಿದುಬಂದುದೆಂದರೆ ಕಳ್ಳರು ಹಿರಿಯ ಸಂತನ ಉಪದೇಶದಿಂದ ಒಳ್ಳೆಯವರಾಗಿದ್ದರೆಂದೂ ಮತ್ತೆ ಜೀವನದಲ್ಲಿ ಎಂದೂ ಕಳ್ಳತನ ಮಾಡುವುದಿಲ್ಲವೆಂದು ಶಪಥ ಮಾಡಿದ್ದರು. ಆಗ ಹಣವಂತನಾದ ಯಜಮಾನ ಹಿರಿಯ ಸಂತನಿಗೆ ನಮಸ್ಕರಿಸಿ ಹೇಳಿದ – ಸ್ವಲ್ಪ ಒಳ್ಳೆಯ ಕೆಲಸವಾದ ಸಂತರಿಗೆ ಒಂದು ರಾತ್ರಿ ಮಲಗಲು ಆಶ್ರಯಕೊಟ್ಟಿದ್ದು ನನ್ನ ಎಲ್ಲಾ ಮಾಲನ್ನೂ ರಕ್ಷಿಸಿತು. ಆದ್ದರಿಂದ ಸಜ್ಜನರ ಸಹವಾಸ ವಿಸ್ಮಯವನ್ನುಂಟು ಮಾಡುತ್ತದೆ.

ಅಂತಹ ಅನಂತವಾದ ಒಳಿತಾಗುವಾಗ ತಮ್ಮ ಹಿತದೃಷ್ಟಿಯಿಂದಲೇ ನಾವು ಸಜ್ಜನರ ಸಂಗ ಮಾಡಬೇಕು. ಆದ್ದರಿಂದಲೇ ಆರ್ಷೇಯ ಕೃತಿಗಳು ಇಂತಹ ಸದ್ಗುಣ ಜೀವನದಲ್ಲಿ ಅಳವಡಿಸಿಕೊಳ್ಳಲು ಅಷ್ಟು ಒತ್ತು ನೀಡಿದೆ.

---

ಆಕರಗಳು

1)ಸ್ಕಂದಪುರಾಣ.ಮಾ.ಕಾ.45.25 2)ಸುಭಾಷಿತ ರತ್ನ ಭಾಂಡಾಗಾರ. ಪುಟ.91 3)ಮಹಾಭಾರತ. ಉದ್ಯೋಗಪರ್ವ.36.13 4)ಅದೇ.ವನಪರ್ವ.1.29 5)ನೀತಿಶತಕ.67 6)ಹಿತೋಪದೇಶ.4.96 7) ಅದೇ. ಕಥಾಮುಖ.44 8)ಅದೇ.1.146 9)23ನೇ ಶ್ಲೋಕ.



## ಲೇಖಕರು - ಸತ್ಯವ್ರತ ಶಾಸ್ತ್ರಿಗಳು

ದಿಲ್ಲೀ ವಿಶ್ವವಿದ್ಯಾನಿಲಯದ ಮಾಜಿ ಸಂಸ್ಕೃತ ವಿಭಾಗಾಧ್ಯಕ್ಷರೂ, ಪುರಿ ಜಗನ್ನಾಥ ವಿಶ್ವವಿದ್ಯಾನಿಯಲದ ಮಾಜಿ ಉಪಕುಲಪತಿಗಳೂ, ಸಾಹಿತ್ಯಾಕಾದಮೀ ಪುರಸ್ಕಾರ, ರಾಷ್ಟ್ರಪತಿ ಸನ್ಮಾನ, ಪದ್ಮಶ್ರೀ, ಪದ್ಮಭೂಷಣ, ವಿದ್ಯಾಮಾರ್ತಾಂಡ, ಮಹಾಮಹೋಪಾಧ್ಯಾಯ, ಮೋದಿದಾಲ್ಮಿಯಾ ಸನ್ಮಾನ ಮುಂತಾದ ಸನ್ಮಾನಗಳಿಗೆ ಪಾತ್ರರಾಗಿರುವ ಶಾಸ್ತ್ರಿಗಳು ಸಂಸ್ಕೃತಕ್ಕೆ ದೊರಕಿರುವ ಏಕೈಕ ಜ್ಞಾನಪೀಠ ಪುರಸ್ಕೃತರೂ ಹೌದು. ಇಲ್ಲಿಯವರೆಗೂ 80ಕ್ಕಿಂತಲೂ ಹೆಚ್ಚಾದ ರಾಷ್ಟ್ರ, ಅಂತಾರಾಷ್ಟ್ರೀಯ ಪ್ರಶಸ್ತಿ ಭಾಜನರಾದ ಸತ್ಯವ್ರತ ಶಾಸ್ತ್ರಿಗಳು ಸೃಜನಾತ್ಮಕ ಹಾಗೂ ಸೃಜನೇತರ ಸಾಹಿತ್ಯವನ್ನು ವಿಪುಲವಾಗಿ ರಚಿಸಿ, ಥಾಯ್‌ಲ್ಯಾಂಡಿನ ರಾಜಕುಮಾರಿಗೂ ಗುರುಗಳಾಗಿದ್ದು ''ರಾಜಗುರು'' ಎಂಬ ಖ್ಯಾತಿ ಪಡೆದಿದ್ದಾರೆ. ವಿದೇಶದ 3 ಖಂಡಗಳು, 6 ದೇಶಗಳಿಗೆ ಅಭ್ಯಾಗತ ಆಚಾರ್ಯರಾಗಿರುವ ಸತ್ಯವ್ರತ ಶಾಸ್ತ್ರಿಗಳ ಕೃತಿಗಳನ್ನು ಆದರಿಸಿ ಅನೇಕರು ಪ್ರೌಢ ಪ್ರಬಂಧಗಳನ್ನು ರಚಿಸಿ ಪಿಹೆಚ್.ಡಿ ಪಡೆದಿದ್ದಾರೆ. ಥಾಯ್‌ಲ್ಯಾಂಡಿನ ರಾಮಾಯಣವಾದ ರಾಮಕಿನ್ ಆದರಿಸಿ ಇವರು ರಚಿಸಿರುವ 25 ಸರ್ಗಗಳಿಂದ ಕೂಡಿರುವ ಮಹಾಕಾವ್ಯ ರಾಮಕೀರ್ತಿ ಮಹಾಕಾವ್ಯವು ಹಿಂದೀ, ಆಂಗ್ಲ, ಕನ್ನಡ, ತೆಲುಗು, ಅಸ್ಸಾಮೀ ಭಾಷೆಗಳಿಗೂ ತರ್ಜುಮೆಯಾಗಿದ್ದು ಇವರ ಮೇರು ಕೃತಿಯಾಗಿದೆ. ಭಾರತ ಸರ್ಕಾರದ ಸಂಸ್ಕೃತ ಕಮಿಷನ್‌ನ ಅಧ್ಯಕ್ಷರಾಗಿ ಪ್ರಸ್ತುತ ಸತ್ಯವ್ರತ ಶಾಸ್ತ್ರಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ. ಪಾರಂಪರಿಕ ಹಾಗೂ ಆಧುನಿಕ ಪದ್ಧತಿಗಳಲ್ಲಿ ಸಿದ್ಧಹಸ್ತರಾದ ಶಾಸ್ತ್ರಿಗಳು ಭಾರತೀಯ ಸಾಂಸ್ಕೃತಿಕ ರಾಯಭಾರೀ, ವಿದ್ವಲ್ಲೋಕದ ವಿಸ್ಮಯ ಎಂದೇ ಖ್ಯಾತರಾಗಿದ್ದಾರೆ.



## ಅನುವಾದಕರು - ಎಸ್. ರಂಗನಾಥ್

ಎಸ್. ರಂಗನಾಥ್‌ರವರು ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಸಂಸ್ಕೃತದಲ್ಲಿ ಎಂ.ಎ, ಪಿಹೆಚ್.ಡಿ, ಹಿಮಾಚಲ ಪ್ರದೇಶ ವಿಶ್ವವಿದ್ಯಾನಿಲಯದಿಂದ ಡೀ.ಲಿಟ್, ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಿಂದ ಅದ್ವೈತ ವೇದಾಂತದಲ್ಲಿ ವಿದ್ವಾನ್, ಹಿಂದಿಯಲ್ಲಿ ರಾಷ್ಟ್ರಭಾಷಾ ವಿಶಾರದ, ಪದವಿಗಳನ್ನು ಪಡೆದಿದ್ದಾರೆ. 65 ಪುಸ್ತಕಗಳು, ನೂರಕ್ಕೂ ಹೆಚ್ಚು ಲೇಖನಗಳನ್ನು ಬರೆದಿರುವ ಇವರು ಸತ್ಯವ್ರತ ಶಾಸ್ತ್ರಿಗಳ ರಾಮಕೀರ್ತಿ ಮಹಾಕಾವ್ಯದ ಕನ್ನಡಾನುವಾದವನ್ನು ಮಾಡಿ ಅದು ಥಾಯ್‌ಲ್ಯಾಂಡಿನ ಬ್ಯಾಂಕಾಕ್‌ನಲ್ಲಿ ಪ್ರಕಟವಾಗಿದೆ. ಭಾರತೀಯ ಸಂಸ್ಕೃತಿಯನ್ನು ಕುರಿತು ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಲಂಡನ್, ಬ್ರೈಟನ್, ನಾಟಿಂಗ್‌ಹ್ಯಾಮ್, ಬರ್ಲಿನ್, ವಿಟನ್‌ಬರ್ಗ್, ಬ್ಯಾಂಕಾಂಕಿನಲ್ಲಿ ಉಪನ್ಯಾಸಗಳನ್ನು ನೀಡಿರುವ ಇವರು ಬೆಂಗಳೂರಿನ ಆರ್.ವಿ ಸಂಸ್ಕೃತಾಧ್ಯಯನ ಸಂಸ್ಥೆಯ ನಿರ್ದೇಶಕರೂ, ಎನ್.ಎಮ್.ಕೆ.ಆರ್.ವಿ. ಕಾಲೇಜಿನ ಸಂಸ್ಕೃತ ವಿಭಾಗಾಧ್ಯಕ್ಷರೂ ಆಗಿದ್ದಾರೆ. ಇವರಿಗೆ ಅಮೇರಿಕಾದ 1996ನೆಯ ವರ್ಷದ ವ್ಯಕ್ತಿ, ಲಂಡನ್ನಿನ ಹೌಸ್ ಆಫ್ ಕಾಮನ್ಸ್ ಗೌರವ, ಥಾಯ್‌ಲ್ಯಾಂಡಿನ ರಾಜಕುಮಾರಿಯಿಂದ ಗೌರವ ಮುಂತಾದ ಅಂತಾರಾಷ್ಟ್ರೀಯ ಗೌರವಗಳು ಸಂದಿದೆ. ತಿರುಪತಿಯ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠವು ಇವರಿಗೆ ವಾಚ[illegible] ನೀಡಿದೆ.